ಪ್ರಕಟಣೆ—೬೭

# ನೂಡಿ ನುಡಿದವರು

ಕಾದಂಬರಿ

Mr. K. Srinivasa Rao
Sundar Cafe Broarding House
HOSPET


ಬಸವರಾಜ ಕಟ್ಟೀಮನಿ





ಶಾರದಾ ಪ್ರಕಟನಾಲಯ

ಅರಳೇಪೇಟೆ :: ಬೆಂಗಳೂರು ೨

# ಪೂರ್ವ ಪರಿಚಯ

ಈ ಕಾದಂಬರಿಯಲ್ಲಿ ಒಂದೆಡೆಗೆ ಬರುವ ಸಂಭಾಷಣೆ ಹೀಗಿದೆ:

"ಇಂಥ ಕತೆಯನ್ನು ಯಾವ ಮಾಸಪತ್ರಿಕೆಯವರು ಹಾಕಿಯಾರು? ಈ ಕಾಲ
ೊಳಗೆ ಸರಕಾರ ಸುಮ್ಮನಿದ್ದೀತೇನು?"

"ನಾಳೆ ಚಳವಳಿ ಮುಗಿದು ಸ್ವಾತಂತ್ರ್ಯ ಬಂದಮೇಲೆ ಯಾರಾದರೂ
ರೆದಾರು ಬಿಡು."

"ಆ ಕತೆಗಾರರಿಗೆ ಇಂಥ ಘಟನೆಗಳ ಪರಿಚಯವಾದರೂ ಇದ್ದರಷ್ಟೇ
ರೆಯೋದು!"

"ನಮ್ಮಲ್ಲಿ ಯಾರಾದರೂ ಅವರಿಗೆ ಹೇಳಿದರೆ ಅವರು ಬರೆದಾರು."

"ಏನು ಬರೀತಾರೆ ತಲೆ! ಇಂಥಾ ಕತೆಗಳನ್ನು ಸರಿಯಾಗಿ ಬರೆಯುಬೇಕಾದರೆ
ನುಭವ ಬೇಕು, ಅನುಭವ. ಸ್ವಾನುಭವ ಬೇಕು. ಯುದ್ಧ ಅಂದರೇನು
ನ್ನೋದು ಬರೆಯುವವರಿಗೂ ಅನುಭವವಾಗಿರಬೇಕು. ಅವರೂ ಅದರೊಳಗೆ
ೂರ್ತಿಯಿಂದ ಭಾಗವಹಿಸಿರಬೇಕು. ಚಳವಳಿಗಾರರೆಂದರೆ ಹ್ಯಾಗಿರುತ್ತಾರೆ.
ವರ ಹೃದಯ ಹ್ಯಾಗಿರುತ್ತದೆ. ಅವರ ವಿಚಾರ ಹ್ಯಾಗಿರುತ್ತವೆ. ಎಲ್ಲಾ ನೋಡಿ
ಳಿದಿರಬೇಕು."

ಈ ಸಂಭಾಷಣೆಯು ಕೊನೆಗೆ "ಬರೆದರೆ ನೀನೇ ಬರೀಬೇಕು" ಎಂಬ
ಾತಿದೆ. ಈ ಮಾತು ಬಹುಶಃ ಕಾದಂಬರಿಕಾರರಾದ ಶ್ರೀ ಬಸವರಾಜ ಕಟ್ಟೀಮನಿ
ುವರಿಗೆ ಅನ್ವಯಿಸುವಂತಿದೆ. ೧೯೪೨ರ ಚಳವಳಿಗಾರರ ಹೃದಯ, ವಿಚಾರ,
ಾರ್ಯಪದ್ಧತಿ ಇವುಗಳನ್ನು ಅವರು ಅರಿತಿದ್ದಾರೆ. ಮಾಡಿ ಮಡಿಯಲೆಂದು ಪಣ
ಟ್ಟಿ ದುಡಿದ ಕೆಲವರಲ್ಲಿ 'ಬದುಕಿ ಉಳಿದವರ' ನೆರವೂ ಅವರಿಗಿದೆ; ಅಂತೆಯೇ
'ನವೀನ ಸಮರಭೂಮಿ'ಯು ಸ್ಫೂರ್ತಿ ದೊರೆತಿದೆ. 'ಬರೆಯೋದನ್ನಂತೂ'
ವರು ಎಂದಿನಿಂದಲೂ ಅಭ್ಯಾಸಮಾಡಿದ್ದಾರೆ.

ಸ್ವಾತಂತ್ರ್ಯಪ್ರಾಪ್ತಿಯನಂತರ ೧೯೪೨ರ ಹೋರಾಟವನ್ನು ಕುರಿತು ಕೆಲವು
ೃತಿಗಳು ಕನ್ನಡದಲ್ಲಿ ರೂಪುಗೊಂಡಿವೆ. ಅವುಗಳಿಗೆ ಸಹಜವಾಗಿಯೇ ಜನಪ್ರಿಯತೆ
ೊರೆಯಿತು. ಮೇಲಿನ ಸಂಭಾಷಣೆಯಲ್ಲಿ ಸೂಚಿತವಾಗಿರುವ ಅನುಕೂಲತೆಗಳು
ಾತ್ರ ಆ ಆ ಕೃತಿಗಳಿಗೆ ದೊರೆಕೊಂಡವೆಂದು ಹೇಳಲು ಬರುವಂತಿಲ್ಲ. ಕೆಲವು
ೃತಿಗಳು ತಾತ್ತ್ವಿಕ ವಿವೇಚನೆಗಳಾಗಿರಬಹುದು; ಇನ್ನು ಕೆಲವು ವಿವಿಧ ವಿಷಯ
ಂಗ್ರಹದ ವರದಿಗಳಾಗಿರಬಹುದು. 'ಮಾಡಿ ಮಡಿದವರು' ಕಾದಂಬರಿಯ

ಕರ್ತೃಗಳಿಗೆ ಮೇಲ್ಕಂಡ ಅನುಕೂಲತೆಗಳು ದೊರೆತಿವೆ. ಅವರು ಹಳ್ಳಿಗರು. ಹಳ್ಳಿಗರ ಹೃದಯುವನ್ನು ಬಲ್ಲವರು. ಹೋರಾಟದ ರುಚಿಯನ್ನರಿತವರು. ಅಂತೆಯೇ, ಪ್ರಸ್ತುತ ಕಾದಂಬರಿಯ ರಚನೆ ಸಾರ್ಥಕವಾಗಿ ಪರಿಣಮಿಸಿದೆ.

ವಿವಿಧ ಮನೋಭಾವಗಳ ಸಂಘರ್ಷಣೆಯು ನಾಟಕದ ಜೀವಾಳ, ಕಾದಂಬರಿಯ ಅಂತರಾಳ. ೧೯೪೨ರ ಘರ್ಷಣೆ ಅಪೂರ್ವವಾದುದು. ಇಂತಹ ಘರ್ಷಣೆಯಲ್ಲಿ ಪ್ರತ್ಯಕ್ಷ ಭಾಗವಹಿಸಿ ಕಾರ್ಯಮಾಡಿ ಮಡಿದವರ, ಮಡಿಯದೆ ಉಳಿದವರ, ಅಂತಹವರನ್ನು ವಿರೋಧಿಸಿದವರ, ಹಾಗು ಮಾಡದೆ ತಲೆತಪ್ಪಿಸಿ ಕೊಂಡು ಮೆರೆದ ಕೆಲವರ ಪಾತ್ರಗಳನ್ನು ಈ ಕಾದಂಬರಿಯಲ್ಲಿ ಸ್ಫುಟವಾಗಿ ಕೆತ್ತಲಾಗಿದೆ. ಅಲ್ಲದೆ, ದೇಸಾಯಿ ಬಾಬಾಸಾಹೇಬರಂತಹ ಹಿರಿಯರ ರಾಜನಿಷ್ಠೆ, ಅವರ ಮಗ ವಿಶ್ವನಾಥರಂತಹರ ಬಂಡು, ಹೇಮಾನಂತಹರ ದೇಶಭಕ್ತಿ, ಕೀರ್ತಿನಾಥ ರಂತಹರ ಸ್ವಾರ್ಥ, ಮಠದ ಸ್ವಾಮಿಗಳ ಉದಾತ್ತ ಚರಿತ್ರ, ಗೌಡನಂತಹರ ದ್ರೋಹ ಹೀಗೆ ವಿವಿಧವಾದ ಸಂಘರ್ಷಣೆಗಳನ್ನು ನಾವು ಈ ಕೃತಿಯಲ್ಲಿ ಕಾಣಬಹುದು. ಈ ಸಂಘರ್ಷಣೆಗಳ ಪರಿಣಾಮವಾಗಿ ಈ ಕೃತಿ ಕಳೆದುಂಬಿ ತೋರುತ್ತಿದೆ.

ಈ ಕಾದಂಬರಿ ಮುಖ್ಯವಾಗಿ ಹಳ್ಳಿಗರ ಹೋರಾಟದ ಕತೆಯಾದರೂ ಅದಕ್ಕೆ ಪೂರಕವಾಗಿ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಅದಕ್ಕೆ ಹೊಂದಿಸಿಕೊಂಡ ಸನ್ನಿವೇಶ ಇಲ್ಲಿಯ ಕಥಾವಸ್ತುವಿಗೆ ಮೆರುಗನ್ನಿತ್ತಿದೆ. ಪಟ್ಟಣಗಳಲ್ಲಿ ಪಾತರಗಿತ್ತಿಗಳ ಮಧ್ಯದಲ್ಲಿ, ಕಾಲೇಜಿನ ವಾತಾವರಣದಲ್ಲಿ ಬೆಳೆದ ಹೇಮಾ ಹಾಗು ಅವಳ ಅನುರಾಗಕ್ಕಾಗಿ ಹವಣಿಸಿದ ವಿಶ್ವನಾಥರನ್ನು ಒಂದು ಅರ್ಥದಲ್ಲಿ ಈ ಕಾದಂಬರಿಯ ನಾಯಕಿ–ನಾಯಕರೆನ್ನಬಹುದು. ಹೇಮಾಳನ್ನು ಪಡೆಯಲು ಆಶಿಸಿದ ಇನ್ನೊಬ್ಬ ಯುವಕ ಕೀರ್ತಿನಾಥ ಸರಕಾರದ ಸಿ.ಆಯ್.ಡಿ.ಯಾಗಿ ಆತನೂ ಈ ಹೋರಾಟ ದಲ್ಲಿ ಭಾಗಿಯಾಗುತ್ತಾನೆ. ಅವನೂ ಮಡಿಯುತ್ತಾನೆ. ಅದೊಂದು ಕನಿಕರದ ಕತೆಯಾದರೆ ಹೇಮಾ ವಿಶ್ವನಾಥರು ಮಡಿದ ಪ್ರಸಂಗಗಳು ಹೃದಯಸ್ಪರ್ಶಿಯಾಗಿ ಪರಿಣಮಿಸಿವೆ. ಲಂಬಾಣಿಗಳ ತಾಂಡೆಯಲ್ಲಿ ಹೇಮಾ ವಿಶ್ವನಾಥರ ಅನುರಾಗ ಪ್ರದರ್ಶನಕ್ಕೆ ಅವಕಾಶ ದೊರೆತಿದೆ. ಅನುರಾಗ ಬೆಳೆಯಲಿದ್ದ ಸನ್ನಿವೇಶ ಸಹಜ ವಾದರೂ ಆ ಸಂದರ್ಭದಲ್ಲಿ ಹೇಮಾ ಸಾಧಿಸಿದ ಸಂಯಮ ಉದಾತ್ತವಾದುದು. ವಿಶ್ವನಾಥನೂ ಅದಕ್ಕೆ ಒಪ್ಪಿದುದು ಶ್ಲಾಘನೀಯ. ಸ್ವಾತಂತ್ರ್ಯದ ಹೋರಾಟದಲ್ಲಿ ತೊಡಗಿದ ತಾವು ಹೆಣ್ಣು–ಗಂಡುಗಳಲ್ಲ; ಇಬ್ಬರು ಸೈನಿಕರು ಮಾತ್ರ, ಎಂದು ಆಕೆ ವಾದಿಸುತ್ತಾಳೆ. ಆಕೆಯ ವಾದವನ್ನೋದುತ್ತಿರುವಾಗ “In a general way, the only method for succeeding in having between a man and a woman the free and natural Yogic relations . . . is to be able to meet each other without thinking of all that one

is a man and another a woman—both are simply human beings, both Sadhakas, both striving to serve the Divine" ಎಂಬ ಶ್ರೀ ಅರವಿಂದರ ವಾಣಿಯು ನೆನಪಿಗೆ ಬರುತ್ತಿದೆ. ಕಾದಂಬರಿಯಲ್ಲಿಯ ಹೇಮಾ ವಿಶ್ವನಾಥರು ಸ್ವಾತಂತ್ರ್ಯಸಾಧನೆಗಾಗಿ ಅಣಿಯಾದ ಇಬ್ಬರು ಹೋರಾಟಗಾರರಾಗಿದ್ದುಕೊಂಡು, ಆ ಹೋರಾಟದಲ್ಲಿ ಮಡಿದ ಚಿತ್ರ ಈ ಕಾದಂಬರಿಯಲ್ಲಿ ಹೃದಯಂಗಮವಾಗಿ ಬಂದಿದೆ. ಪಟ್ಟಣದ ಸುಕೋಮಲೆ ಒಬ್ಬಳು ಭೀಕರವಾದ ಚಳವಳಿಯಲ್ಲಿ ಧುಮುಕಿ, ವಿಶ್ವನಾಥರಂತಹರನ್ನೂ ಕಾರ್ಯಪ್ರವೃತ್ತರನ್ನಾಗಿ ಮಾಡಿದ್ದು ಹಳ್ಳಿಗರ ಹೋರಾಟದ ಇಲ್ಲಿನ ಕತೆಗೆ ಪರಿಪೋಷಕವಾಗಿದೆ.

ಹೇಮಾಳ ಅನುರಾಗಕ್ಕಾಗಿ ಹಾತೊರೆದ ಕಾರಣದಿಂದಾಗಿ ವಿಶ್ವನಾಥನನ್ನು ಕಾದಂಬರಿಯ ನಾಯಕನೆನ್ನಬಹುದಾದರೂ ಇಲ್ಲಿಯ ಹೋರಾಟದ ನಿಜವಾದ ಕೇಂದ್ರವ್ಯಕ್ತಿ ಶೇಖರನಾಗಿದ್ದಾನೆ. ಅವನು ಹಳ್ಳಿಗರ ಹೋರಾಟದ ಜನನಾಯಕ; ಹೇಮಾ ವಿಶ್ವನಾಥರನ್ನು ಆಕರ್ಷಿಸಿದವನೂ ಅವನೇ. ಅವನ ನಾಯಕತ್ವದಲ್ಲಿಯೇ ಅನೇಕ ಅದ್ಭುತರಮ್ಯ ಸಂಗತಿಗಳು ನಡೆಯುತ್ತಿವೆ. ಅವನು ೧೯೪೨ ಆಗಸ್ಟ್ ವೀರರ ಒಂದು ಶ್ರೇಷ್ಠ ಮಾದರಿ. ಅವನ ಸಾಹಸ, ಕುಶಲತೆ, ಕೆಚ್ಚು, ಶೀಲ ಇವೆಲ್ಲ ಈ ಕಾದಂಬರಿಯಲ್ಲಿ ಸುಂದರವಾಗಿ ಚಿತ್ರಿತವಾಗಿವೆ. ಅವನ ದೃಷ್ಟಿಯಲ್ಲಿ ೧೯೪೨ರ ಹೋರಾಟ ಕೇವಲ ಒಂದು ರಾಜಕೀಯ ಚಳವಳಿಯಾಗಿರಲಿಲ್ಲ. ಅದು ಸ್ವಾತಂತ್ರ್ಯದ ಕೊನೆಯ ಯುದ್ಧ. ಮಾಡಿ ಮಡಿಯಬೇಕಾದ ಈ ಹೋರಾಟಕ್ಕೆ ಕಿತ್ತೂರ ಚೆನ್ನಮ್ಮನ ಸ್ವಾತಂತ್ರ್ಯಘೋಷಣೆಯ ಹಿನ್ನೆಲೆಯೂ ದೊರೆತಿರುವುದರಿಂದ ಕಾದಂಬರಿ ಸ್ಫೂರ್ತಿದಾಯಕವಾಗಿದೆ. ಅವನ ತಾಯಿ ಪಾರ್ವತಮ್ಮನ ಕೆಚ್ಚು, ಅವನ ಅನುಯಾಯಿಗಳ ನಿಷ್ಠೆ, ಅವನ ಸ್ನೇಹಿತರ ಅಪೂರ್ವ ಉತ್ಸಾಹ ಇವೆಲ್ಲವುಗಳ ಸಂಘಟನೆ ಹೋರಾಟಕ್ಕೆ ಕಳೆ ತಂದಿರುವಂತೆ ಕಾದಂಬರಿಕಾರರ ವಿಶೇಷ ಜಾಣ್ಮೆಯನ್ನೂ ಪ್ರದರ್ಶಿಸುತ್ತಿದೆ. ಶೇಖರನ ಅಶಿಕ್ಷಿತ ಅನುಯಾಯಿಗಳಲ್ಲಿ ಒಬ್ಬನಾದ ಮುದುಕ ಬಾಳಪ್ಪ "ಸಂಗೊಳ್ಳಿ ರಾಯಣ್ಣನೇ ಗಾಂಧಿರೂಪದಲ್ಲಿ ಮತ್ತೆ ಹುಟ್ಟಿ ಬಂದಿರುವನೆಂದು ತಿಳಿದುಕೊಂಡಿದ್ದ. ಅವ್ವ ಚೆನ್ನವ್ವನೇ (ಕಿತ್ತೂರ) ಗಾಂಧಿಯನ್ನು ಹರಸಿ ಕಳಿಸಿರುವಳೆಂದು ನಂಬಿಕೊಂಡಿದ್ದ." ಅರ್ಥಾತ್ 'ಭಾರತದಿಂದ ತೊಲಗಿರಿ' ಎಂಬ ಗಾಂಧಿಯವರ ಘೋಷಣೆ ಕಿತ್ತೂರ ಚೆನ್ನವ್ವನ ಕಾಲಕ್ಕೇ ಮೊದಲಾಯಿತೆಂಬ ಸೂತ್ರವನ್ನು ಹಿಡಿದುಕೊಂಡೇ ಈ ಕಾದಂಬರಿ ಸಾಗಿದೆ. ಇಂತಹ ಹಿನ್ನೆಲೆಯಲ್ಲಿ ಈ ಕಾದಂಬರಿ ರೂಪುಗೊಂಡಿರುವುದರಿಂದ ಇಡಿಯ ಕತೆ ರೋಮಾಂಚಕಾರಿಯಾಗಿ ಪರಿಣಮಿಸಿದೆ.

ಪಾತ್ರಗಳ ಸುಸ್ಪಷ್ಟ ಚಿತ್ರಣ ಈ ಕಾದಂಬರಿಯ ವೈಶಿಷ್ಟ್ಯವಾಗಿದೆ. ಕೆಚ್ಚಿನ, ನೆಚ್ಚಿನ ತರುಣ ಪಾತ್ರಗಳೊಂದೆಡೆಗೆ, ಮಾಡುವ ಮನಸ್ಸಿಲ್ಲದ ವೃದ್ಧ orthodox

ಕಾಂಗ್ರೆಸ್ಸಿಗರ ಚಿತ್ರವಿನ್ನೊಂದೆಡೆಗೆ, ದ್ರೋಹವನ್ನೆಸಗುವವರು ಮಗದೊಂದೆಡೆಗೆ, ಮಾಡುವವರಿಗೆ ನೆರವನ್ನಿತ್ತ ಮಠದ ಸ್ವಾಮಿಗಳಂತಹರು ಮತ್ತೊಂದೆಡೆಗೆ—ಹೀಗೆ ವಿವಿಧ ರೀತಿಯ, ವಿವಿಧ ಮನೋಭಾವದ ಜೀವಕಳೆಯಿಂದ ತುಂಬಿದ ಪಾತ್ರಗಳ ನೆರವಣಿಗೆ ಈ ಕಾದಂಬರಿಯಲ್ಲಿ ಬಂದಿದೆ. ಒಬ್ಬ ಬಾಳಪ್ಪನೇ ಸಂಗಣ್ಣನೇ ರಂಗಣ್ಣನೇ ಹಸನ್‌ಸಾಬಿಯೇ ದೇಸಾಯಿ ಬಾಬಾಸಾಹೇಬನೇ ಬಡತನದ ಪಾರ್ವತಮ್ಮನೇ—ಇಂತಹರ ಒಂದು ಸಣ್ಣ ಪ್ರಪಂಚವೇ ಇಲ್ಲಿದೆ. ಪ್ರಪಂಚದಲ್ಲಿ ಒಳ್ಳೆಯದರೊಂದಿಗೆ ಕೆಟ್ಟದ್ದೂ ಇದೆ. ಕೆಟ್ಟದ್ದೆಂದು ತಿಳಿದುಕೊಂಡುದರ ಬಗೆಗೆ ಕಾದಂಬರಿಕಾರರು ಅಸಹನೆಯನ್ನೂ ತೋರುತ್ತಾರೆ. ಒಳ್ಳೆಯದನ್ನು ಮನಸಾರೆ ಹೊಗಳುತ್ತಾರೆ.

೧೯೪೨ರ ಚಳವಳಿ ಹಿಂಸಾತ್ಮಕವಾಗಿತ್ತೇ? ಚಳವಳಿಗಾರರು ಪುಂಡರೇ? ಎಂಬ ಪ್ರಶ್ನೆಗಳಿಗೆ ಈ ಕಾದಂಬರಿಯಲ್ಲಿ ಸಮರ್ಪಕವಾದ ಉತ್ತರವಿದೆ. ಸರಕಾರದ ಯಂತ್ರವನ್ನು ಮುರಿಯುವುದು ಮಾತ್ರ ಶೇಖರನಂತಹರ ಉದ್ದೇಶವಾಗಿತ್ತೆಂಬುದನ್ನು ಮತ್ತೆ ಮತ್ತೆ ಸ್ಪಷ್ಟಗೊಳಿಸಲಾಗಿದೆ. ಪಿಸ್ತೂಲುಗಳನ್ನು ಹಿಡಿದರೂ ಗಾಂಧಿ ತತ್ವವಾದ ಅಹಿಂಸೆಯನ್ನು ಕಡೆಗಣಿಸಬಾರದೆಂಬ ಚಾರಿತ್ರ್ಯವಿಶುದ್ಧತೆಗೆ ಶೇಖರನ ಪಾತ್ರ ಉದಾಹರಣೆಯಾಗಿ ನಿಂತಿದೆ. "ಪಿಸ್ತೂಲು, ಬಂದೂಕು ಹಿಡಿದ ಮಾತ್ರಕ್ಕೆ ನಾವು ಹಿಂಸೆ ಮಾಡೂದಕ್ಕ ಹೊರಟೇವಿ ಅಂತ ತಿಳೀಬಾರದು" ಎಂಬ ಶೇಖರನ ಸೂತ್ರಕ್ಕೆ "ಗುಂಡು ಹಾರಿಸಲಿಕ್ಕಿಲ್ಲ ಪಿಸ್ತೂಲು, ಬರೀ ಹೆದರಿಸಲಿಕ್ಕೆ, ಹೆದರಿಸಿ ಕಾರ್ಯ ಸಾಧಿಸಲಿಕ್ಕೆ" ಎಂದು ಹೇಮಾ ಭಾಷ್ಯ ಬರೆಯುತ್ತಾಳೆ. ಹಿಂಸೆಯನ್ನುಪಯೋಗಿಸಿದರೆ ಗಾಂಧಿಯವರ ಮನಸ್ಸಿಗೆ ನೋವಾಗುತ್ತದೆಯೆಂಬುದು, ಅದರಿಂದ ಇಡಿಯ ಹೋರಾಟವೇ ನಿಲ್ಲಬಹುದೆಂದೂ ಶೇಖರನಿಗೆ ಗೊತ್ತಿತ್ತು, ಈ ಬಗೆಗೆ ಆತನು ತನ್ನ ಅನುಯಾಯಿಗಳಿಗೆ ಮತ್ತೆ ಮತ್ತೆ ಉಪದೇಶ ಮಾಡುತ್ತಾನೆ. ಆದರೆ ಇಂತಹ 'ನಾಜೂಕು' ವಿಷಯವನ್ನು ಅರ್ಥಮಾಡಿಕೊಳ್ಳದ ಅನುಯಾಯಿಗಳೂ ಇದ್ದರು. ಅಂತಹರು ಭಾವನಾಪರವಶತೆಯಲ್ಲಿ ಪಿಸ್ತೂಲನ್ನು ಉಪಯೋಗಿಸುವ ಸಂದರ್ಭಗಳೂ ಕಾದಂಬರಿಯಲ್ಲಿ ಬಂದಿವೆ. ಪಿಸ್ತೂಲುಗಳನ್ನು ದೊರಕಿಸಿ 'ಮಾಡಿದುದೂ' ಆಯಿತು. ಉದ್ರೇಕಕ್ಕೆ ವಶರಾದ ವ್ಯಕ್ತಿಗಳಿಂದಾಗಿ 'ಮಡಿದುದೂ' ಆಯಿತು. ಆದರೆ ಮಡಿದರೂ ಅಳಿಯದ ಕೀರ್ತಿಯನ್ನು ಗಳಿಸಿದ ವೀರರ ಸಾಹಸಗಳನ್ನೊಳಗೊಂಡ ಈ ಗ್ರಂಥ ಅಂತಹರ ಕೀರ್ತಿಸ್ತಂಭದಂತಿದೆ. ಅದುವೇ ಈ ಕಾದಂಬರಿಕಾರರ 'ದರ್ಶನ.'

ಸ್ಫೂರ್ತಿದಾಯಕ ವಸ್ತು, ಸುಸ್ಪಷ್ಟ ಪಾತ್ರಪೋಷಣೆ, ಸಹಜವಾದ ಸನ್ನಿವೇಶ, ಉಚಿತ 'ದರ್ಶನ' ಎಂಬಿವು ಕಾದಂಬರಿ ರೂಪದ ಚತುರಂಗಗಳು. ಇವುಗಳ ನಿರ್ವಹಣೆ ಈ ಕಾದಂಬರಿಯಲ್ಲಿ ಸರಿಯಾಗಿಯೇ ನಡೆದಿರುವುದರಿಂದ ಈ ಕೃತಿ

ಕನ್ನಡಿಗರಿಗೆ ಹೊಸ ರಸದೂಟವನ್ನೊದಗಿಸುತ್ತಿದೆ. ಪೂರ್ವ ಸೂಚನೆ, ಹೋರಾಟದ ರಂಗ, ಕೊನೆಯ ದೃಶ್ಯ—ಎಂಬ ಮೂರು ಮೆಟ್ಟಲುಗಳಲ್ಲಿ ಹೊಂದಿಸಿಕೊಂಡ ಕಥಾ ರಚನೆಯ ತಂತ್ರ ಯಶಸ್ವಿಯೂ ಆಗಿದೆ. ಹಳ್ಳಿಗರ ಹೋರಾಟದ ಈ ಕತೆಗೆ ಹಳ್ಳಿಗರ ನೈಜ ಭಾಷೆಯನ್ನೇ ಬಳಸಿಕೊಂಡಿರುವುದು ಸಹಜವಾಗಿದೆ.

ಶ್ರೀ ಕಟ್ಟೀಮನಿ ಬಸವರಾಜರ ಹರಿತವಾದ ಲೆಕ್ಕಣಿಕೆಗೆ ಉಚಿತವಾದ ಕಥಾವಸ್ತುವಿಲ್ಲಿದೆ; ಅವರ ಉತ್ಸಾಹಕ್ಕೆ ಸರಿಹೊಂದುವ ಸನ್ನಿವೇಶಗಳು ಇಲ್ಲಿವೆ. ಅವರ ಮೊನಚಾದ ಮಾತುಗಳಿಗೂ ಇಲ್ಲಿ ಅವಕಾಶ ದೊರೆತಿದೆ. ಕಾದಂಬರಿಯನ್ನು ಬರೆದು ಮುಗಿಸಿ ಬಸವರಾಜರು ಸಂತೋಷಪಟ್ಟುಕೊಂಡಿರಬೇಕು. ವಾಚಕರಿಗೂ ಸಂತೋಷವನ್ನೀಯಬಲ್ಲುದು ಈ ಕೃತಿ.

ಧಾರವಾಡ<br>೪–೯–೫೦

ಸ. ಸ. ಮಾಳವಾಡ

# ಎರಡನೆಯ ಮುದ್ರಣದ ಮುನ್ನುಡಿ

ನಮ್ಮ ದೇಶದ ಸ್ವಾತಂತ್ರ್ಯಸಮರವನ್ನು ಕುರಿತು ನಾನು ಬರೆದ ಎರಡು ಕಾದಂಬರಿಗಳಲ್ಲಿ ಮೊದಲನೆಯದು 'ಸ್ವಾತಂತ್ರ್ಯದೆಡೆಗೆ'; ಎರಡನೆಯದು 'ಮಾಡಿ ಮಡಿದವರು.'

ಸ್ವಾತಂತ್ರ್ಯದ ಕೊನೆಯ ಹೋರಾಟವೆಂದು ಖ್ಯಾತಿ ಪಡೆದ ೧೯೪೨ರ ಆಗಸ್ಟ್ ಆಂದೋಲನವೇ 'ಮಾಡಿ ಮಡಿದವರು' ಕಾದಂಬರಿಯ ಕಥಾವಸ್ತುವಾಗಿದೆ.

೧೯೪೨ರಲ್ಲಿ ಸುಸಂಘಟಿತವಾದ ರೀತಿಯಲ್ಲಿ ಚಳವಳಿ ನಡೆದುದೆಂದರೆ ಕೇವಲ ಬೆಳಗಾವಿ ಜಿಲ್ಲೆಯಲ್ಲಿ. ಆ ಕಾಲಕ್ಕೆ ಅಲ್ಲಿ ನಿಜವಾಗಿಯೂ ನಡೆದ ಹಲವು ಘಟನೆಗಳನ್ನು ಈ ಕಾದಂಬರಿಯಲ್ಲಿ ಬಳಸಿಕೊಳ್ಳಲಾಗಿದೆ. ಆ ಅಮರ ಹೋರಾಟದ ಮಹಾಸೇನಾನಿ ವಾಲಿ ಚೆನ್ನಪ್ಪನವರೂ ಅವರ ಪಡೆಯುವರೂ ಎಸಗಿದ ಅನೇಕ ಸಾಹಸದ ಕೃತಿಗಳನ್ನು ಈ ಕೃತಿಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಆ ಆಂದೋಲನದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವ ಸುಯೋಗವೂ ನನಗೆ ಲಭಿಸಿದ್ದಿತಾದುದರಿಂದ ಅಂದಿನ ವಾತಾವರಣವನ್ನು ವಾಸ್ತವಿಕವಾಗಿಯೂ ಆತ್ಮೀಯವಾಗಿಯೂ ಚಿತ್ರಿಸುವುದು ಸುಲಭವಾಗಿದೆ.

ಹಿರಿಯ ಸಾಹಿತ್ಯಿಕರಾದ ಪ್ರೊ. ಮೂಳವಾಡರವರು ಈ ಕೃತಿಯ 'ಪೂರ್ವ ಪರಿಚಯ' ಬರೆದು ಕೊಟ್ಟು ಉಪಕಾರ ಮಾಡಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಮಾಡಿ ಮಡಿದ ಹುತಾತ್ಮರ ಕಥೆಯನ್ನು ಬಣ್ಣಿಸುವ ಇಂಥ ಕಾದಂಬರಿಗಳನ್ನು ವಿದ್ಯಾರ್ಥಿಗಳು ಕಡ್ಡಾಯವಾಗಿ ಓದುವುದು ಅಗತ್ಯವೆಂದು ಬಗೆದು, ಮೈಸೂರು ವಿಶ್ವವಿದ್ಯಾನಿಲಯದ ಪಠ್ಯಪುಸ್ತಕ ಸಮಿತಿಯವರು ಈ ಕೃತಿಯನ್ನು ಇಂಟರ್ ತರಗತಿಗೆ ಪಠ್ಯಪುಸ್ತಕವಾಗಿ ವಿಧಿಸಿ, ಆ ಮೂಲಕ ನನಗೂ ಉತ್ತೇಜನವಿತ್ತಿದ್ದಾರೆ. ಅವರಿಗೆ ನನ್ನ ಅನಂತ ಧನ್ಯವಾದಗಳು.

ಮುಲಾಮುರಡಿ
೧ ಮೇ ೧೯೫೭

ಬಸವರಾಜ ಕಟ್ಟೀಮನಿ

ಮಾಡಿ ಮಡಿದ

ದೊಡ್ಡಮುನಿ ಶಿವೇಶ್ವರನಿಗೆ

"ಹೇಳುವುದಕವರಲ್ಲ,
ಕೇಳುವುದಕವರಲ್ಲ,
ಮಾಡಿ ಮಡಿವುದಕವರು !
ಮಾಸದವರದು ಹೆಸರು !
ಬೀಸಿ, ಏನ್ನುಗ್ಗಿದರು !
ಲೋಕ ಬೆರಗಾಯ್ತು !
ನುಗ್ಗಿ ಹೊಯ್ದುದ ಹೊಗಳು !
ಜಗ್ಗದೆದೆಗಳ ಹೊಗಳು !"

—ಶ್ರೀ.

# ಈ ಗ್ರಂಥಕರ್ತರ ಇತರ ಕೃತಿಗಳು

---

## ಕಾದಂಬರಿಗಳು

ಸ್ವಾತಂತ್ರ್ಯದೆಡೆಗೆ
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಮಣ್ಣು ಮತ್ತು ಹೆಣ್ಣು
ಜರತಾರಿ ಜಗದ್ಗುರು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ
ಬಲೆಯ ಬೀಸಿದರು
ನಾನು ಪೋಲೀಸನಾಗಿದ್ದೆ
ಬಂಗಾರದ ಜಿಂಕೆಯ ಹಿಂದೆ
ಗೋವಾದೇವಿ
ಪಾತರಗಿತ್ತಿ
ಬೆಳಗಿನ ಗಾಳಿ
ಆಶ್ರಮವಾಸಿ
ಸಾಕ್ಷಾತ್ಕಾರ
ಬೀದಿಯಲ್ಲಿ ಬಿದ್ದವಳು
ಗಿರಿಯ ನವಿಲು
ಸಮರಭೂಮಿ

## ಕಥಾಸಂಗ್ರಹಗಳು

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ
ಸುಂಟರಗಾಳಿ

## ನಾಟಕ

ಪಟ್ಟಣದ ಹುಡುಗಿ

# ಮಾಡಿ ಮಡಿದವರು

೧

ರೈಲಿನ ಎಂಜಿನು ಕರ್ಕಶವಾಗಿ ಸಿಳ್ಳು ಹಾಕಿತು. ,ಅದರೊಂದಿಗೆ ಗಾರ್ಡನ ಸಿಳ್ಳಿನ ಸ್ವರವೂ ಬೆರೆತುಕೊಂಡಿತು. ಜನಗಳ ಕೂಗಾಟ, ಕಿರಿಚಾಟಗಳ ಮಧ್ಯೆ ಗಾಡಿಯೂ ಧಡಧಡನೆ ಸದ್ದು ಮಾಡುತ್ತ ಓಡತೊಡಗಿತು.

ಆ ಎಂಜಿನಿನ ಸಿಳ್ಳು, ಗಾರ್ಡನ ಸಿಳ್ಳು, ಜನದ ಗಲಭೆ—ಯಾವುದೂ ಅವಳ ಮನದಲ್ಲಿನ ವಿಚಾರವನ್ನು ಕದಲಿಸಲು ಸಮರ್ಥವಾಗಲಿಲ್ಲ. ಅಂದು ಮಧ್ಯಾಹ್ನ ನಡೆದ ಆ ಘಟನೆಯ ನಾಟಕವೆ ಮತ್ತೆ ಮತ್ತೆ ಅವಳ ಬಗೆಗಣ್ಣಿ ನೆದುರಿಗೆ ಸುಳಿದುಹೋಗುತ್ತಿತ್ತು. ತನ್ನ ತಂದೆಯ ರೌದ್ರಾವತಾರ, ಕೀರ್ತಿ ನಾಥನ ರೋಷಾವೇಶ, ತನ್ನ ಅಚಲ ನಿರ್ಧಾರ, ಆ ವಾಗ್ವಾದ, ಆ ಕಲಹ, ಆ ಮನಸ್ತಾಪ....

ಕಿಟಕಿಯಾಚೆ ದೃಷ್ಟಿ ಹೊರಳಿಸಿ ಹೇಮಾ ತನ್ನ ಕತ್ತಿನ ಸುತ್ತ ಕುಳಿತು ಕೊಂಡಿದ್ದ ಸ್ಕಾರ್ಫ್ ಸರಿಮಾಡಿಕೊಂಡಳು. ಹಿಂದಿನ ಒರಗುದಿಂಬಿಗೆ ತಲೆ ಯಾನಿಸಿ ಪಕ್ಕದಲ್ಲಿದ್ದ ದಿನಪತ್ರಿಕೆಯನ್ನೆತ್ತಿಕೊಂಡು ಅದರ ಮೇಲೆ ಬೇಸರದಿಂದಲೆ ಕಣ್ಣಾಡಿಸಿದಳು. ಅದೇ ಸಮಾಚಾರ....ಕರುಳಿರಿಯುವ, ಎದೆ ಕೊರೆಯುವ, ಭಾವನೆಗಳನ್ನು ಕೆರಳಿಸುವ ಆ ಸಮಾಚಾರ....

ಗಾಂಧೀಜಿ, ನೆಹರೂ, ಪಟೇಲ್ ಆದಿಯಾಗಿ ಕಾಂಗ್ರೆಸ್ ಮುಂದಾಳು ಗಳೆಲ್ಲರ ಬಂಧನ—ಬೆಳಗಿನ ಜಾವದಲ್ಲಿ. ಅದರ ಪ್ರತಿಕ್ರಿಯೆಯೆಂದು ದೇಶದಾ ದ್ಯಂತ ಹರತಾಳ, ಮೆರವಣಿಗೆ, ಪ್ರದರ್ಶನ. ಅಲ್ಲಲ್ಲಿ ಗೋಳೀಬಾರು. ಅಲ್ಲಲ್ಲಿ ಲಾಠೀ ಪ್ರಹಾರ....

ಆ ಸಮಾಚಾರ....ದೇಶವನ್ನೆಲ್ಲ ಬಡಿದೆಬ್ಬಿಸಿದ ಆ ಸಮಾಚಾರ ಅವಳನ್ನೂ ಜಾಗೃತಗೊಳಿಸಿದ್ದಿತು. ಎ. ಐ. ಸಿ. ಸಿ. ಯಲ್ಲಿ ಗಾಂಧೀಜಿ ಮಾಡಿದ ಭಾಷಣ.... "ನೀವು ಮಾಡಬೇಕು, ಇಲ್ಲವೆ ಮಡಿಯಬೇಕು. ಗಂಡು ಹೆಣ್ಣು, ಕೂಸು ಕುನ್ನಿ,

ವಿದ್ಯಾರ್ಥಿ ವಿದ್ಯಾರ್ಥಿನಿಯರು ಎಲ್ಲರೂ ಭಾಗವಹಿಸಬೇಕು, ಈ ಸಂಗ್ರಾಮದಲ್ಲಿ —ಈ ನಮ್ಮ ಅಂತಿಮ ಸಂಗ್ರಾಮದಲ್ಲಿ. ಬ್ರಿಟಿಷ್ ಸರಕಾರದ ಅಧಿಕಾರವನ್ನು ಧಿಕ್ಕರಿಸಿ ಸ್ವಾತಂತ್ರ್ಯವನ್ನು ಸಾರಬೇಕು. Do or Die!" ಎಂಬ ಆ ವೀರರ ಘೋಷಣೆ...ಹಿಂದುಸ್ಥಾನದ ಕೋಟ್ಯವಧಿ ಜನರ ಹಾಗೇ ಅವಳನ್ನೂ ಎಚ್ಚರಿಸಿತ್ತು ಆ ಆಹ್ವಾನ. ಅಂತೆಯೆ, ಕಾಲೇಜಿನ ವ್ಯಾಸಂಗಕ್ಕೆ ಶರಣು ಹೊಡೆದು ಸಮರಾಂಗಣಕ್ಕೆ ಧುಮುಕುವುದಾಗಿ ನಿರ್ಧರಿಸಿದ್ದಳಾಕೆ.

ಆ ನಿರ್ಧಾರವನ್ನು ಮುರಿಯಬೇಕೆಂದು ತಂದೆ ತುಂಬಾ ಪ್ರಯತ್ನಿಸಿದ್ದರು. ನೂರಾರು ಕಾರಣಗಳನ್ನು ಮುಂದೆ ಮಾಡಿ, ಹಲವಾರು ನೆಪಗಳನ್ನೊಡ್ಡಿ, ಅವಳನ್ನು ಹೋರಾಟದ ದಾರಿಯಿಂದ ಹಿಂದಿರುಗಿಸಲು ಯತ್ನಿಸಿದ್ದರು. ಯಾವುದೂ ಯಶಸ್ವಿಯಾಗಿರಲಿಲ್ಲ. ಕೀರ್ತಿಯ ಲೋಭದ ನುಡಿಗಳಿಗೂ ಆಕೆ ಮರುಳಾಗು ವಂತಿರಲಿಲ್ಲ, ಅವನ ಬೆದರಿಕೆಯ ಮಾತುಗಳಿಗೂ ಹೆದರುವಂತಿರಲಿಲ್ಲ. ತಂದೆಯ ಮಾತನ್ನು ಮೀರಿ, ಕೀರ್ತಿಯ ಮನಸ್ಸಿಗೆ ವಿರುದ್ಧವಾಗಿ ಆಕೆ ಮುಂಬಯಿಯನ್ನು ತೊರೆದು ಹೊರಟಿದ್ದಳು.

ಬೆಳಗಿನಿಂದ ಸಾಯಂಕಾಲದವರೆಗೆ, ಪುಣೆ-ಬೆಂಗಳೂರು ರೈಲು ಹೊರಡುವ ವರೆಗೆ ಅವಳ ಮನಸ್ಸಿನಲ್ಲಿ ಅವೇ ವಿಚಾರಗಳೇ ಮತ್ತೆ ಮತ್ತೆ ಪ್ರವೇಶಿಸಿ ಅವಳನ್ನು ಗಾಸಿಗೊಳಿಸುತ್ತಿದ್ದುವು. ಇಂಟರ್ ವರ್ಗದ ಹೆಣ್ಣುಮಕ್ಕಳ ಆ ಡಬ್ಬಿಯೂ ಬರಿಯದಾಗಿರಬೇಕೇ ಅವಳೊಬ್ಬಳನ್ನು ಬಿಟ್ಟು! ಬೇರೆ ಪ್ರವಾಸಿಕರಾರಾದರೂ ಇದ್ದಿದ್ದಲ್ಲಿ ಅವರೊಂದಿಗೆ ಮಾತು ಬೆಳೆಯಿಸಿ ತನ್ನೆದೆಯ ವಿಚಾರಗಳನ್ನು ಮರೆಯಿಸಬಹುದಾಗಿದ್ದಿತು. ಆದರೆ—

ಹತ್ತನೆಯ ತಾರೀಖಿನ ಸಾಯಂಕಾಲ ಆ ಸರಕಾರೀ ಅಧಿಕಾರಿಗಳ ಮನೆ ಯಲ್ಲಿ ತಂದೆಯನ್ನು ಕಂಡಾಗಿನ ದೃಶ್ಯ ಮತ್ತೆ ಅವಳ ಕಣ್ಣೆದುರಿಗೆ ಬಂದು ನಿಂತಂತಾಯಿತು.

"ಬೇಡ, ನಾ ಕೇಳಲಾರೆ. ಸಾಕಾಗಿದೆ ನನಗೆ. ತೊಲಗಿ," ಎಂದು ಎಷ್ಟು ಹೇಳಿದರೂ ಕೇಳದೆ ಆಗ ನಡೆದ ಮಾತುಗಳೆಲ್ಲ ಮತ್ತೆ ಕಿವಿಗೆ ಸೇರುವ ಹಾಗಾಯಿತು.

ಅವಳನ್ನು ಕಂಡೊಡನೆ ಶಾಮರಾಯರು ದಿಗಿಲುಗೊಂಡು ಪ್ರಶ್ನಿಸಿದ್ದರು: "ಯಾರು? ಹೇಮಾವತಿ? ನೀನೂ ಬಂದಿದ್ದೀಯಾ ಇಲ್ಲಿಗೆ?"

ಅವರು ಹಾಗೆ ಆಶ್ಚರ್ಯಚಕಿತರಾಗಲು ಕಾರಣವೇನೆಂಬುದು ತನಗೆ ತಿಳಿದಿರಲಿಲ್ಲ. ತಾನೂ ಆಶ್ಚರ್ಯದ ದನಿಯಲ್ಲಿಯೆ ಪ್ರಶ್ನಿಸಿದ್ದಳು : " ಯಾಕಪ್ಪ ? ಹೀಗೆ ಕೇಳುತೀಯಾ ? ಬರಬಾರದೇನು ?"

ಕ್ಷಣಕಾಲ ತಡೆದು, ತನ್ನನ್ನು ಅಡಿಯಿಂದ ಮುಡಿಯವರೆಗೆ ದಿಟ್ಟಿಸಿ ನೋಡಿ ಅವರು ಕೇಳಿದ್ದರು : " ಯಾವಾಗ ಬಂದೆ? ಒಬ್ಬಳೇ ಬಂದೆಯಾ ?"

" ನಿನ್ನೆ ಮುಂಜಾನೆಯೇ ಬಂದಿದ್ದೆ. ನಾವು ನಾಲ್ವರು ಗೆಳತಿಯರು ಸೇರಿಕೊಂಡು ಬಂದಿದ್ದೇವೆ."

" ಎಲ್ಲಿ ಉಳಿದುಕೊಂಡಿದ್ದೀಯಾ ?"

" ವಿಮಲಾ ಪಾಟಸ್ಕರ್ ಅಂತ ನನ್ನ ಕ್ಲಾಸ್‌ಮೇಟ್ ಒಬ್ಬಾಕೆ ಇದಾರೆ. ಅವರ ಅಣ್ಣನ ಮನೆಯಲ್ಲಿ...."

" ಎಲ್ಲಿ ಆ ಮನೆ ?"

" ದಾದರದಲ್ಲಿ."

" ಸರಿ. ಮೊನ್ನೆ ಬಂದಿದ್ದೆಯೇನು ಎ. ಐ. ಸಿ. ಸಿ.ಗೆ ?"

" ಬರದಿರ್ತೇವೆಯೆ, ಅದನ್ನು ನೋಡಬೇಕೆಂತಲೇ ಬಂದವರು ?"

" ಕಾಲೇಜು ಬಿಟ್ಟು ನೀನು ಯಾಕಾದರೂ ಬಂದೆಯೊ ! ತಿಳಿಯದು. ಮುಂದೆ ಏನು ವಿಚಾರ? ಬೆಳಗಿನ ಸುದ್ದಿ ಕೇಳಿದಿಯಾ ?"

" ಮುಂಜಾನೆ ಆರು ಗಂಟೆಗೇ ತಿಳಿಯಿತಪ್ಪ. ಹೊರಗೆ ಹೊರಡುವದಕ್ಕೂ ಸಾಧ್ಯವಿಲ್ಲವಲ್ಲ ? ಯುದ್ಧ ಪ್ರಾರಂಭವಾಗಿಬಿಟ್ಟಿತು........ಗದ್ದಲದಲ್ಲಿ ಹಾದಿ ತೆಗೆಯೋದೂ ಕಷ್ಟವೆ...."

" ಕಷ್ಟ....ಎಲ್ಲಾ ಕಷ್ಟ...." ಎಂದು ಗುಣುಗುಣಿಸುತ್ತ ತಂದೆ ಕೆಲಕಾಲ ಕೊಟಡಿಯಲ್ಲಿ ಶತಪಥ ಹಾಕುತ್ತಿದ್ದರು. ಅನಂತರ ತನ್ನ ಹತ್ತಿರ ಬಂದು ನಿಂತ ತನ್ನ ತಲೆಗೂದಲಿನ ಮೇಲೆ ಕೈಯನ್ನಾಡಿಸುತ್ತ ಹೇಳಿದ್ದರು :

" ಹಗಲೂ ರಾತ್ರಿ ನಿನ್ನದೇ ಚಿಂತೆ ನನಗೆ ಹೇಮಾ. ಈ ಗೊಂದಲದಲ್ಲಿ ಏಕೆ ಬಂದು ಬಿದ್ದೆ ನೀನು ? ಸುಖವಾಗಿ ಪುಣೆಯಲ್ಲಿದ್ದುಕೊಂಡು, ಕಕ್ಕಿಯ ಮನೆಯಲ್ಲಿ ಹೊಟ್ಟೆ ತುಂಬ ಊಟ ಮಾಡಿಕೊಂಡು ಸಂತೋಷದಿಂದ ಕಾಲೇಜಿಗೆ ಹೋಗುವುದನ್ನು ಬಿಟ್ಟು ?"

ಅವರ ಮಾತು ತನ್ನನ್ನು ಇನ್ನೂ ಆಶ್ಚರ್ಯಕ್ಕೀಡುಮಾಡಿದ್ದಿತು. "ಇದೇ ನಮ್ಮ ಕೊನೆಯ ಹೋರಾಟ; ಎಲ್ಲರೂ ಭಾಗವಹಿಸಬೇಕು ಈ ಹೋರಾಟದಲ್ಲಿ–ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಸಹ. ನಾವು ಮಾಡಬೇಕು–ಇಲ್ಲವೆ–ಮಡಿಯಬೇಕು" ಎಂಬ ಗಾಂಧೀಜಿಯ ಮಾತು ಎಲ್ಲಿ! ಗಾಂಧೀಜಿಯವರ ಪಟ್ಟಶಿಷ್ಯರೆಂದೂ, ಕರ್ನಾಟಕದ ಮಹಾ ಮುಖಂಡರೆಂದೂ ಹೆಸರಾದ ತನ್ನ ತಂದೆಯ, ದೇಶಭಕ್ತ ಶಾಮರಾಯರ ಈ ಮಾತು ಎಲ್ಲಿ!

ಚಿಕ್ಕ ವಯಸ್ಸಿನಿಂದಲೂ ತನಗೆ ತಂದೆಯ ಬಗ್ಗೆ ತುಂಬಾ ಅಭಿಮಾನವಿದ್ದಿತು; ಆದರವಿದ್ದಿತು. ೨೧ರ ಚಳವಳಿಯಿಂದ ಮೊದಲು ಮಾಡಿಕೊಂಡು ೩೦, ೩೨, ೩೪, ೪೧ ಇತ್ಯಾದಿ ವರ್ಷಗಳಲ್ಲಿ ನಡೆದ ಎಲ್ಲ ಚಳವಳಿಗಳಲ್ಲೂ ಅವರು ಭಾಗವಹಿಸಿದ್ದರು. ತಮ್ಮ ಜೀವನದ ಹತ್ತು ಹನ್ನೆರಡು ವರ್ಷಗಳನ್ನು ಕಾರಾಗಾರದಲ್ಲಿಯೆ ಕಳೆದಿದ್ದರು. ೩೫ರಲ್ಲಿ ಸೆರೆಮನೆಯಿಂದ ಬಂದ ಬಳಿಕ ಒಂದೆರಡು ವರ್ಷಗಳ ಕಾಲ ಗಾಂಧೀ ಆಶ್ರಮದಲ್ಲಿಯೆ ನೆಲಸಿ ಬಾಪೂಜಿಯ ಪ್ರೀತಿಗೆ ಪಾತ್ರರಾಗಿದ್ದರು. ಕಾಂಗ್ರೆಸ್ಸು ಅಧಿಕಾರ ಸ್ವೀಕಾರ ಮಾಡಿದಾಗ ರಾಯರು ಪ್ರಾಂತೀಯ ಮಂತ್ರಿಪದಕ್ಕೇರುವ ಸಂಭವವೂ ಇತ್ತು. ಆದರೆ ಅಂಥ ಅಧಿಕಾರಸ್ಥಾನಗಳ ಬಗ್ಗೆ ತಮಗೆ ಕೊಂಚವೂ ಮೋಹವಿಲ್ಲವೆಂದು ಸಾರಿ ಅವರು ಅದರಿಂದ ದೂರ ಉಳಿದಿದ್ದರು. ತಂದೆಯ ಈ ನಿಸ್ವಾರ್ಥ ಮನೋಭಾವವನ್ನು ಕಂಡಾಗ ಹೇಮಾಗೆ ಅವರ ಬಗೆಗೆ ಅಭಿಮಾನವಿನ್ನೂ ಹೆಚ್ಚಿದ್ದಿತು.

ಆದರೆ ೧೯೪೨ರಲ್ಲಿ—"ಕ್ವಿಟ್ ಇಂಡಿಯಾ" ಚಳವಳಿಯ ಪ್ರಾರಂಭ ಕಾಲದಲ್ಲಿ ಅದೇ ತನ್ನ ತಂದೆ ಆಡುವ ಈ ಮಾತು....!

ಅವರೇ ಆಡಿದ ಮಾತುಗಳೇ ಇವು? ಅಥವಾ, ತನ್ನ ಕಿವಿಗಳೇನಾದರೂ ಮೋಸಗೊಳಿಸುತ್ತಿವೆಯೋ ತನ್ನನ್ನು?

೨೧ರಲ್ಲಿ ಕಾಲೇಜಿಗೆ ಬಹಿಷ್ಕಾರ ಹಾಕಿ ಚಳವಳಿಗೆ ಧುಮುಕಿದ ಸತ್ಯಾಗ್ರಹಿಯೆ ೪೨ರ ಚಳವಳಿಯಲ್ಲಿ ಕಾಲೇಜಿಗೆ ಬಹಿಷ್ಕಾರ ಹಾಕಲೆತ್ನಿಸುವುದನ್ನು ವಿರೋಧಿಸುವುದೆಂದರೆ?

ಮುಖ ಎತ್ತಿ ತಂದೆಯ ದೃಷ್ಟಿಯೊಂದಿಗೆ ದೃಷ್ಟಿ ಬೆರಸುವ ಸಾಹಸ ಅವಳಿಂದಾಗಿರಲಿಲ್ಲ. ತಲೆ ತಗ್ಗಿಸಿಕೊಂಡೇ ಕೇಳಿದ್ದಳು: "ಇಂಥ ಕಾಲದೊಳಗ ಸಂತೋಷದಿಂದ ಹ್ಯಾಗಾದರೂ ಇರೋದು ಅಪ್ಪ?"

"ಹೌದು, ಹೌದು. ನೀ ಹೇಳುವ ಮಾತೂ ನಿಜ. ಆದರೆ—ಆದರೆ...." ಎಂದು ನುಡಿದು ಮತ್ತೆ ಕೊಟಡಿಯಲ್ಲಿ ಶತಪಥ ಹಾಕುತ್ತ ರಾಯರು ಹೇಳಿದ್ದರು : "ಅದೆಲ್ಲ ಸರಿ. ಆದರೂ ನೀನು ಕಾಲೇಜು ಬಿಡುವುದು ನನ್ನ ಮನಸ್ಸಿಗೆ ಬರೋದಿಲ್ಲ. ತಾಯಿಯಿಲ್ಲದ ತಬ್ಬಲಿ ಮಗು ನೀನು. ರಾಜಕುಮಾರಿಯಂತೆ ನಿನ್ನನ್ನು ಸಾಕಿ ಸಲಹಿದ ಆ ಮಹಾರಾಯಿತಿ ನೀನಿನ್ನೂ ಚಿಕ್ಕವಳಿದ್ದಾಗಲೇ ಕಣ್ಣು ಮುಚ್ಚಿದಳು. ಅಂದಿನಿಂದ ಗಿಳಿ ಸಾಕಿದ ಹಾಗೆ ಬೆಳೆಸಿದ್ದೇನೆ. ಈ ಚಳವಳಿ ಅಂದರೆ ದೊಡ್ಡ ಗೊಂದಲದ ಕೆಲಸ. ನಿನ್ನಂಥ ಹುಡುಗಿಯರು ಇದಕ್ಕೆಲ್ಲ ಸೇರ ಬಾರದು. ನಿನ್ನ ಶಿಕ್ಷಣ, ನಿನ್ನ ಭವಿತವ್ಯ, ನಿನ್ನ ಮದುವೆ....ಆ ಕೀರ್ತಿನಾಥ ಜೇರೆ ಮೊನ್ನೆ ನನಗೆ ಭೆಟ್ಟಿಯಾಗಿದ್ದರು. ಅವರೂ ಬಂದಿದ್ದಾರೆ ಎ. ಐ. ಸಿ. ಸಿ. ಗೆ. ಈ ವರ್ಷದ ಕೊನೆಯೊಳಗಾಗಿ ಮದುವೆಯಾಗಬೇಕೆಂದು ಅವರ ತಾಯಿ ಒತ್ತಾಯಪಡಿಸುತ್ತಿದ್ದಾರಂತೆ....ಅದಕ್ಕಾಗಿ...."

ಮದುವೆಯ ಮಾತು ಕಿವಿಗೆ ಬೀಳುತ್ತಲೂ ತನಗೆ ಬೇಸರು ಬಂದುಬಿಟ್ಟಿತ್ತು. ದೇಶಕ್ಕೆ ದೇಶವೆಲ್ಲ ಹೊತ್ತಿಕೊಂಡು ಉರಿಯುತ್ತಿರುವಾಗ, ಸ್ವಾತಂತ್ರ್ಯದ ವೇದಿಕೆಯ ಮೇಲೆ ಸಾವಿರಾರು ಜೀವಗಳ ಬಲಿದಾನ ನಡೆದಿರುವಾಗ ತನಗೆ ಮದುವೆಯಂತೆ ಮದುವೆ ! ಅದೂ ತನ್ನ ತಂದೆಯ ಮುಖದಿಂದ ಬರುವ ಮಾತು ! ಎರಡು ಕಿವಿಗಳಲ್ಲೂ ಬೆರಳುಗಳನ್ನು ಗಟ್ಟಿಯಾಗಿ ಸೇರಿಸಿಕೊಂಡು ತಕ್ಷಣ ಅಲ್ಲಿಂದೆದ್ದು ಹೊರಡಬೇಕೆಂದು ಅವಳಿಗನ್ನಿಸಿದ್ದಿತು.

ತಂದೆ ಹೇಳುತ್ತಿದ್ದರು : "ಮದುವೆ ಅನ್ನುತ್ತಲೂ ಮುಖ ಚಿಕ್ಕದು ಮಾಡಬೇಡ ಹೇಮಾ. ಎಲ್ಲ ಹುಡುಗಿಯರೂ ಮೊದಲು ಹೀಗೇ ಮಾಡುತ್ತಾರೆ. ಆಮೇಲೆ ಒಂದೆರಡು ವರ್ಷಗಳಲ್ಲೇ ಸಂಸಾರದಲ್ಲಿ ತಲ್ಲೀನರಾಗಿ ತವರುಮನೆಯ ಅಸ್ತಿತ್ವವನ್ನೂ ಮರೆತುಬಿಡುತ್ತಾರೆ. ಕೀರ್ತಿನಾಥರೂ ಸುಶಿಕ್ಷಿತರು. ಬಿ. ಎ. ಪದವೀಧರರು. ಸುದೈವದಿಂದ ಒಳ್ಳೆಯ ಕೆಲಸವೂ ದೊರೆತಿದೆ. ಮನೆಯ ಆಸ್ತಿಪಾಸ್ತಿಗಳಿಗೂ ಕೊರತೆಯಿಲ್ಲ. ಸ್ವಭಾವವೂ ಬಹಳ ಶಾಂತ, ವಿನಯಶೀಲ, ನಿಗರ್ವಿ. ಅವರೊಂದಿಗೆ ನಿನ್ನ ಜೊತೆ ಅನುರೂಪವಾಗುವಲ್ಲಿ ನನಗೇನೂ ಸಂಶಯ ಇಲ್ಲ. ನಿಮ್ಮ ಮದುವೆಯೊಂದು ಮುಗಿದರೆ ನನ್ನ ತಲೆಯ ಮೇಲಿನ ಭಾರವೊಂದು ಇಳಿದಂತಾದೀತು."

"ಆದರೂ ಅಪ್ಪಾ, ಈಗ ನನಗೆ ಮದುವೆಯ ವಿಚಾರವೇ ಇಲ್ಲಪ್ಪಾ."

"ಹುಚ್ಚೀ! ಹುಚ್ಚಿಯೇ ಹುಚ್ಚಿ! ಅಂತೆ, ಮದುವೆಯ ವಿಚಾರವೇ ಇಲ್ಲವಂತೆ! ಯಾರಾದರೂ ನಕ್ಕಾರು ಕೇಳಿದವರು. ಹದಿನೆಂಟು ವರ್ಷ ತುಂಬುತ್ತ ಬಂದವು. ಬಿ. ಎ. ಮುಗಿಯುತ್ತ ಬಂತು. ಮದುವೆಯ ವಿಚಾರ ಇಲ್ಲವಂತೆ!" ಎಂದು ಹೇಳಿ ಅವರು ನಕ್ಕುಬಿಟ್ಟಿದ್ದರು.

"ನೀನು ನಂಬಲಿಕ್ಕಿಲ್ಲ ಅಪ್ಪ. ಆದರೆ ನಿಜವಾಗಿಯೂ ನನಗೆ ಮದುವೆ ಆಗೋ ಮನಸ್ಸೇ ಇಲ್ಲ. ಸದ್ಯಕ್ಕಂತೂ ಸ್ವಲ್ಪವೂ ಇಲ್ಲ...."

ಶತಪಥ ಹಾಕುವುದನ್ನು ನಿಲ್ಲಿಸಿ ರಾಯರು ಕ್ಷಣಕಾಲ ಅವಳನ್ನೇ ಆಶ್ಚರ್ಯದಿಂದ ನಿರೀಕ್ಷಿಸುತ್ತಿದ್ದು ಕೇಳಿದ್ದರು: "ವಿಚಿತ್ರ ಹುಡುಗಿ ನಮ್ಮ ಹೇಮಾ. ಮದುವೆಯಾಗೋ ಮನಸ್ಸಿಲ್ಲ ಅಂದರೇನು? ಮತ್ತೆ ಯಾವುದರಲ್ಲಿ ಮನಸ್ಸಿದೆ, ನಮ್ಮ ರಾಜಕುಮಾರಿಗೆ?"

"ಸದ್ಯಕ್ಕಂತೂ ಈ ಚಳವಳಿಯಲ್ಲಿ ಸೇರಿ ಕೆಲಸ ಮಾಡಬೇಕೆಂದು ನಿರ್ಧರಿಸಿದ್ದೇನೆ ಅಪ್ಪಾ," ಎಂದು ಹೇಳಿ, ಆಕೆ ತನ್ನ ಮಾತಿನಿಂದ ತಂದೆಯ ಮೇಲಾಗುವ ಪರಿಣಾಮವೇನೆಂಬುದನ್ನು ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದಳು.

ಕ್ಷಣಕಾಲ ಮೌನವಾಗಿದ್ದು ತಂದೆ ಮಾತನಾಡಿದ್ದರು: "ನನ್ನ ಮಾತು ಕೇಳು ಹೇಮಾ. ಈ ಚಳವಳಿಯ ಹುಚ್ಚು ಬೇಡ ನಿನಗೆ. ಕಾಲೇಜು ಬೇಡ ವಾದರೆ ಬಿಟ್ಟುಬಿಡು. ಕಕ್ಕಿಯ ಮನೆಯಲ್ಲಿ ಊಟ ಮಾಡಿಕೊಂಡು ಸುಖ ವಾಗಿರು. ಆದರೆ ಈ ಚಳವಳಿಯ ಗೊಂದಲಕ್ಕೆ ಮಾತ್ರ ಬರಬೇಡ."

"ಯಾಕಪ್ಪಾ? ಯಾಕೆ ಬರಬಾರದು? ಬಾಪೂಜಿಯವರೇ ಹೇಳಿಲ್ಲೇನು ಮೊನ್ನೆ, ಗಂಡಸರು ಹೆಂಗಸರು ಎಲ್ಲರೂ ಬರಬೇಕು ಅಂತ?"

"ಹೇಳಿರಬಹುದು. ಆದರೆ—ಎಲ್ಲರೂ ಅಂದರೆ ಎಲ್ಲರೂ ಅಲ್ಲ. ನಿನ್ನ ಹಾಗೆ ಸುಖವಾಗಿ ಬೆಳೆದ ಕೋಮಲ ಹುಡುಗಿಯರು ಇದರಲ್ಲಿ ಸೇರಿ ಏನು ಮಾಡುವ ಹಾಗಿದೆ? ನಿಮಗೆ ಇದೆಲ್ಲ ಸರಿಹೋಗುವದಿಲ್ಲ. ಸುಮ್ಮನೆ ನಿಮ್ಮ ಕರಿಯರ್ ಹಾಳು, ಆಯುಷ್ಯ ಹಾಳು. ಅಷ್ಟೆ...."

"ಕೋಮಲ ಹುಡುಗಿಯಾದರೇನಾಯ್ತು ಅಪ್ಪ? ನನಗೂ ದೇಶಪ್ರೇತಿ ಯಿಲ್ಲವೆ? ನಿನ್ನ ಮಗಳಲ್ಲವೇ ನಾನು? ಅದನ್ನು ಮರೆತುಬಿಡುತ್ತೀಯಾ?"

"ನನ್ನ ಮಗಳು ಅಂತಲೇ ನಿನಗೆ ಈ ರೀತಿ ಹೇಳುತ್ತಿರೋದು ಹೇಮಾ. ಇನ್ನು ಯಾವ ರೀತಿ ನಿನಗೆ ಹೇಳಲಿ? ಹೇಗೆ ಹೇಳಿದರೆ ನನ್ನ ಮನಸ್ಸು ಅರ್ಥವಾದೀತು ನಿನಗೆ?"

ಅವರ ಹೃದಯದಲ್ಲಿ ನಡೆದಿರಬಹುದಾದ ಕೋಲಾಹಲದ ಕಲ್ಪನೆ ಅವಳಿಗಾಗ ಬಂದಿದ್ದಿತು. ದೇಶಪ್ರೇಮಕ್ಕೂ, ಸಂತಾನದ ಬಗೆಗಿದ್ದ ವಾತ್ಸಲ್ಯಕ್ಕೂ ನಡೆದಿದ್ದ ಆ ತುಮುಲ ಹೋರಾಟ ಅವರ ಮುಖದಲ್ಲಿ ಸ್ಪಷ್ಟವಾಗಿ ಗೋಚರವಾಗಿದ್ದಿತು. ಅವರನ್ನು ಈ ಕಷ್ಟದಿಂದ ತಪ್ಪಿಸಲು ಒಂದೇ ಉಪಾಯವಿದ್ದಿತು—ತಾನು ಅಲ್ಲಿಂದ ಕೂಡಲೆ ಹೊರಟುಬಿಡುವುದು. ಹೇಮಾ ಹೊರಡುವ ಸಿದ್ಧತೆಗಾರಂಭಿಸಿದ್ದಳು. ಅದನ್ನು ಗುರುತಿಸಿ ಅವರು ಹೇಳಿದ್ದರು. "ನನ್ನ ಮಾತು ಅರ್ಥವಾಯಿತೇ ಹೇಮಾ? ಈ ಚಳವಳಿಯ ಗಲಾಟೆಗೇ ಬರಬೇಡ ನೀನು. ಪುಣೆಯಲ್ಲಿ ಆರಾಮವಾಗಿ ಇರು. ಅಲ್ಲಿ ದಿನ ಕಳೆಯಲಾಗದಿದ್ದರೆ ಬೆಳಗಾವಿಗೆ ಹೋಗಿ ಅತ್ತೆಯ ಹತ್ತಿರ ಇರು. ಈ ಗೊಂದಲವೆಲ್ಲಾ ಮುಗಿದ ಮೇಲೆ ನಿನ್ನ ತಲೆಯ ಮೇಲೆ ಅಕ್ಷತೆ ಹಾಕಿಬಿಡೋಣವಂತೆ...."

"ಅಕ್ಷತೆಯ ಮಾತು ಈಗೇತಕ್ಕಪ್ಪ? ನಾನಂತೂ ಪುಣೆಯಲ್ಲಿ ಇರುವದು ಸಾಧ್ಯವಿಲ್ಲ. ಬೆಳಗಾವಿಗೇ ಹೋಗುತ್ತೇನೆ."

"ಚಿಂತೆಯಿಲ್ಲ. ಅಲ್ಲಿಯಾದರೂ ಸುಖವಾಗಿ ಇದ್ದು ಪುಸ್ತಕ ಓದುತ್ತ ಕಾಲ ಕಳೆಯುತ್ತಿರು. ಯಾವ ಗಲಾಟೆಗೂ ಹೋಗಬೇಡ."

"ಗಲಾಟೆ ಗಿಲಾಟೆ ಅಂದರೇನಪ್ಪ? ಈ ಚಳವಳಿಯಲ್ಲಿ ನನ್ನಿಂದ ಆಗುವದನ್ನೆಲ್ಲ ನಾನು ಮಾಡುವವಳೇ," ಎಂದು ದೃಢಸ್ವರದಲ್ಲಿ ನುಡಿದು, ಆಕೆ ತಂದೆಗೆ ನಮಸ್ಕಾರ ಮಾಡಿ ಎದ್ದುಬಿಟ್ಟಿದ್ದಳು.

ಕೊಟಡಿಯ ಬಾಗಿಲನ್ನು ತೆರೆದು ಆಕೆ ಹೊರಕ್ಕೆ ಹೊರಡುತ್ತಿರುವಷ್ಟರಲ್ಲೇ ತಂದೆ ಕಳವಳದಿಂದ ಕೂಗಿದ್ದರು: "ಹೇಮಾ, ಹೇಮಾವತಿ, ಹುಚ್ಚು ಕೆಲಸಕ್ಕೆ ಬೀಳಬೇಡಮ್ಮ...."

ರಭಸದಿಂದ ಬಾಗಿಲನ್ನು ನೂಕಿ ಆಕೆ ಹೊರಡುತ್ತಿದ್ದಾಗ ಎದುರಿಗೆ ಕಟ್ಟೆಯ ಮೇಲೆ ಯಾರೋ ನಿಂತುಕೊಂಡು ತನ್ನನ್ನೇ ಕುತೂಹಲದಿಂದ ನಿಟ್ಟಿಸುತ್ತಿದ್ದುದು ಕಾಣಿಸಿದ್ದಿತು. ಕಣ್ಣರಳಿಸಿ ನೋಡಿದಾಗ ಹೊಸ ಸರ್ಜ್ ಸೂಟಿನಲ್ಲಿದ್ದ ಕೀರ್ತಿನಾಥ ಮುಗುಳುನಗೆ ಬೀರುತ್ತ ನಿಂತಿದ್ದುದು ಕಂಡುಬಂದಿದ್ದಿತು....

ಅಕಸ್ಮಾತ್ತಾಗಿ ಅವನ ದರ್ಶನವಾದುದನ್ನು ಕಂಡು ಅವಳ ಬೇಸರವಿನ್ನೂ ಹೆಚ್ಚಿದ್ದಿತು. ಅವನೊಂದಿಗೆ ಒಂದು ಮಾತನ್ನೂ ಆಡದೆ ಮೆಟ್ಟಲುಗಳನ್ನಿಳಿದು ಹೊರಟುಬಿಡಬೇಕೆಂದು ಅವಳ ಮನಸ್ಸಿನಲ್ಲಿ ಬಂದಿದ್ದಿತು. ಆದರೆ–ಆತ ಬಿಡಲಿಲ್ಲ. ಅನಂತರ ಮತ್ತೆ ಅದೇ ಕೊಟಡಿ....ಅಲ್ಲಿ ನಡೆದ ಆ ಮಾತುಕತೆ....

....ರೈಲು ಮತ್ತೆ ಕರ್ಕಶವಾಗಿ ಸಿಳ್ಳು ಹಾಕಿತು. ಯಾವುದೋ ಸಿಲ್ವಾಣದ ಆಚೆ ಗಾಡಿ ನಿಂತುಕೊಳ್ಳುವುದರಲ್ಲಿದ್ದಿತು. ಕೈಮರ ಬಿದ್ದಿರಲಿಲ್ಲವೊ ಏನೊ. ಅದು ಬೀಳುವವರೆಗೂ ಕಾಯಬೇಕು. ಮೆಲ್ಲಮೆಲ್ಲನೆ ನಡೆಯುತ್ತಿದ್ದ ಗಾಡಿ ಕೊನೆಗೆ ನಿಂತುಕೊಂಡಿದ್ದೂ ಆಯಿತು. ಹೇಮಾವತಿಯ ಬಗೆಗಣ್ಣಿನೆದುರಿಗೆ ನಡೆಯುತ್ತಿದ್ದ ಚಿತ್ರಪಟವೂ ನಿಂತುಹೋಯಿತು. ಕಿಟಕಿಯಾಚೆ ದೃಷ್ಟಿ ತೂರಿ ಸೃಷ್ಟಿಯನ್ನು ನಿಟ್ಟಿಸಿದಳು. ಕತ್ತಲೆ ಯಾವಾಗಲೋ ಕವಿದು ನಿಸರ್ಗವನ್ನೆಲ್ಲ ತಬ್ಬಿಕೊಂಡಿದ್ದಿತು.ಮುಗಿಲಲ್ಲಿನ ಚಿಕ್ಕೆಗಳ ಬಳಗ ಕಣ್ಣುಮುಚ್ಚಾಲೆಯಾಟಕ್ಕೆ ತೊಡಗಿದ್ದಿತು. ಆಕಾಶಕ್ಕೆ ಹೊಂದಿಕೊಂಡು ತಲೆಯೆತ್ತಿ ನಿಂತಿದ್ದ ಬೆಟ್ಟದ ಸಾಲು ಆ ಕತ್ತಲೆಯಲ್ಲಿ ವಿಲಕ್ಷಣ ರಮ್ಯತೆಯಿಂದ ಕಣ್ಣು ಸೆಳೆಯುತ್ತಿತ್ತು. ಪೂರ್ವದಿಕ್ಕಿನಿಂದ ತಂಪುಗಾಳಿಯೂ ಬೀಸತೊಡಗಿದ್ದಿತು.

ಬಾಗಿಲಿನ ಮೇಲಿದ್ದ ಕಿಟಕಿಯನ್ನು ಮುಚ್ಚಲೆಂದು ಹೇಮಾ ಮೇಲಕ್ಕೆದ್ದ ಹಾಗೇ ಗಾಡಿ ಹೊರಟುಬಿಟ್ಟಿತು.

ಕಿಟಕಿಯನ್ನು ಮುಚ್ಚಲು ಆಕೆ ಕೈಯೆತ್ತುತ್ತಿದ್ದ ಹಾಗೇ ಅಕಸ್ಮಾತ್ತಾಗಿ ಬಾಗಿಲು ತೆರೆಯಿತು.

ಈ ರೀತಿಯಾಗಿ ನಡುದಾರಿಯಲ್ಲಿ ಬಾಗಿಲು ತೆರೆಯಲ್ಪಟ್ಟುದನ್ನು ಕಂಡಾಗ ಹೇಮಾಗೆ ಕೊಂಚ ಭಯವಾಗದಿರಲಿಲ್ಲ. ಮುಂದೇನು ಮಾಡಬೇಕೆಂದು ಆಕೆ ಯೋಚಿಸುತ್ತಿದ್ದ ಹಾಗೇ ದೃಢಕಾಯದ ತರುಣನೊಬ್ಬ ಬಾಗಿಲನ್ನು ಮೆಲ್ಲನೆ ನೂಕಿ ಡಬ್ಬಿಯನ್ನೇರಿ ಬಂದ.

ಹೇಮಾ ಶಿಲಾಮೂರ್ತಿಯಂತೆ ಸ್ತಬ್ಧವಾಗಿ ನಿಂತಿದ್ದಳು.

ಆತ ಬಂದವನೆ ಬಾಗಿಲನ್ನು ಭದ್ರವಾಗಿ ಮುಚ್ಚಿ, ಅನಂತರ ಸುತ್ತುಮುತ್ತಲಿನ ಕಿಟಕಿಗಳನ್ನೆಲ್ಲ ಮುಚ್ಚಿಬಿಟ್ಟು ಅವಳ ಕಡೆಗೆ ದೃಷ್ಟಿ ತೂರಿದ.

೨

ಅವಳೂ ಅವನನ್ನೇ ದೃಷ್ಟಿಸುತ್ತಿದ್ದಳು.

ಅವನಿಗೆ ಇಪ್ಪತ್ತೈದು ಇಪ್ಪತ್ತಾರು ವರ್ಷ ವಯಸ್ಸಿರಬಹುದು. ಸಾಕಷ್ಟು ಎತ್ತರವೂ, ಹೃಷ್ಟಪುಷ್ಟವೂ ಆದ ದೇಹಕ್ಕೆ ಖಾದಿಯ ನೆಹರೂ ಬನೀನು, ಖಾದಿಯ ಧೋತರ, ಗಾಂಧೀ ಟೋಪಿ ಕಳೆ ತಂದುಕೊಟ್ಟಿದ್ದುವು. ಕೊಂಚ ಉದ್ದವಾಗಿದ್ದ ಮುಖದಲ್ಲಿ ನಿಡಿದಾದ ಮೂಗಿನ ಕೆಳಗಡೆ ಸಣ್ಣಗೆ ಬೆಳೆದ ಮೀಸೆಯೂ ಅವನ ತಾರುಣ್ಯಕ್ಕೆ ಒಪ್ಪ ಕೊಟ್ಟಂತಿತ್ತು. ಕೊಂಚ ದಪ್ಪಗೆ ಬೆಳೆದ ಹುಬ್ಬಿನ ಕೆಳಗಡೆ ಅಸ್ಥಿರತೆಯಿಂದ ಮಿನುಗುವ ಆ ಕಣ್ಣ ಬೊಂಬೆಗಳೂ ಅವನ ರೂಪಕ್ಕೆ ಶೋಭೆಯನ್ನುಂಟುಮಾಡಿದ್ದುವು.

ಅವನೂ ಅವಳನ್ನೇ ದೃಷ್ಟಿಸುತ್ತಿದ್ದ.

ಅವಳಿಗೆ ಹದಿನೆಂಟು ವರ್ಷ ವಯಸ್ಸಾಗಿರಬಹುದೆಂಬುದನ್ನು ಸೂಚಿಸುವಂಥ ದೇಹ. ಅಷ್ಟು ಎತ್ತರವೂ ಅಲ್ಲದ, ಅಷ್ಟು ಕುಳ್ಳಗಿನದೂ ಅಲ್ಲದ, ಅಷ್ಟು ದಪ್ಪವೂ ಅಲ್ಲದ, ಅಷ್ಟು ತೆಳ್ಳಗಿನದೂ ಅಲ್ಲದ ಶರೀರಕ್ಕೆ ಒಪ್ಪುವ ಖಾದಿಯ ಬಿಳಿಯ ಸೀರೆ, ಬಿಳಿಯ ರವಕೆ, ಗೌರವರ್ಣದ ಕಾಂತಿಯನ್ನು ಹೆಚ್ಚಿಸುವ ಕೇಶರಾಶಿ. ಬುದ್ಧಿವಂತಿಕೆಯನ್ನೂ, ಸುಶಿಕ್ಷಿತತನವನ್ನೂ ಸೂಚಿಸುವ ಸ್ಥಿರವಾದ ಶಾಂತವಾದ ದೃಷ್ಟಿ.

ಹಠಾತ್ತಾಗಿ ಅವನಿಗೆ ಏನೋ ಜ್ಞಾಪಕವಾದಂತಾಯಿತು.

ಹಠಾತ್ತಾಗಿ ಅವಳಿಗೂ ಏನೋ ಜ್ಞಾಪಕವಾದಂತಾಯಿತು.

" ಇರಬಹುದೇ ?" ಎಂದುಕೊಂಡನಾತ.

" ಓ ? ಇರಬಹುದೇ ?" ಎಂದುಕೊಂಡಳಾಕೆ.

ಇದೆಲ್ಲವೂ ನಡೆದುದು ಒಂದೆರಡು ನಿಮಿಷಗಳಲ್ಲಿ.

ಗಾಡಿ ನಿಲ್ದಾಣಕ್ಕೆ ಬಂದು ಸೇರುತ್ತಿತ್ತು. ಇನ್ನೇನು ನಿಂತುಬಿಡುವುದರಲ್ಲಿತ್ತು.

ಎಡಗೈಯಲ್ಲಿದ್ದ ಚೀಲವನ್ನು ಬೆಂಚಿನ ಕೆಳಗಡೆ ತೂರಿ ಆತ ಕುಳಿತುಕೊಂಡ. ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದು ಕೈಯಲ್ಲಿ ಹಿಡಿದು, ಅದರ ಮಡಿಕೆಗಳೊಂದಿಗೆ ಬೆರಳುಗಳನ್ನಾಡಿಸುತ್ತ ಅವಳ ಕಡೆ ನೋಡಿದ.

ಆಕೆಯೂ ಕುಳಿತುಕೊಂಡಳು—ಅವನಿಂದ ಕೊಂಚ ದೂರದಲ್ಲಿ. ಸೀರೆಯ ಸೆರಗಿನೊಂದಿಗೆ ಬೆರಳುಗಳನ್ನಾಡಿಸುತ್ತ ಅವನ ಕಡೆ ನೋಡಿದಳು.

"ಮಾತನಾಡಬೇಡ, ಸುಮ್ಮನಿರು" ಎಂದು ಆತ ಹೇಳುವ ಅಗತ್ಯವಿರಲಿಲ್ಲವೇನೊ. ಅವನ ದೃಷ್ಟಿಯೆ ಆ ಅರ್ಥ ಬರುವ ಭಾವವನ್ನು ಸೂಚಿಸಿರಬೇಕು. ಅವಳ ದೃಷ್ಟಿಯೂ ಅದನ್ನು ಅರ್ಥಮಾಡಿಕೊಂಡಿರಬೇಕು.

ಆಕೆ ಉಸಿರು ಬಿಗಿಹಿಡಿದು ಮೌನವಾಗಿ ಕುಳಿತಿದ್ದಳು. ಏನೋ ಭೀತಿ. ಏನೋ ಸಂದೇಹ. ಎಂತಹದೋ ದಿಗಿಲು.

ನಿಲ್ದಾಣದಿಂದ ಗಾಡಿ ಹೊರಡುವವರೆಗೂ ಅವಳ ಎದೆ ಡವಡವನೆ ಹೊಡೆದು ಕೊಳ್ಳುತ್ತಿತ್ತು. ಯಾರಾದರೂ ಬಂದರೆ? ಬಂದು ಬಾಗಿಲು ತೆರೆದರೆ? ಹೆಣ್ಣು ಮಕ್ಕಳ ಡಬ್ಬಿಯಲ್ಲಿ ಈತನನ್ನು ನೋಡಿಬಿಟ್ಟರೆ?—ಅದರಲ್ಲೂ ಈತ....

ಮತ್ತೆ ಸಿಳ್ಳು ಹಾಕಿ ಗಾಡಿ ಹೊರಟಿತು.

ಧಡ ಧಡ್, ಧಡ ಧಡ ಧಡ್....

ವೇಗವಾಗಿ ಓಡತೊಡಗಿತು.

ಯಾರೂ ಬರಲಿಲ್ಲ. ಯಾರೂ ಆತನನ್ನು ನೋಡಲಿಲ್ಲ.

ಹಾಯೆಂದು ಉಸಿರುಗರೆದು ಹೇಮಾ ಕತ್ತೆತ್ತಿ ನೋಡಿದಳು.

ಆತನೂ ಅವಳನ್ನೇ ನೋಡುತ್ತಿದ್ದ.

"ಇರಬಹುದೇ?" ಎಂದು ಅವನ ಯೋಚನೆ.

"ಇರಬಹುದೇ?" ಎಂದು ಅವಳ ಯೋಚನೆ.

ಆ ವಿಚಿತ್ರ ಮೌನವನ್ನು ಮುರಿದು ಆತನೇ ಮಾತಿಗಾರಂಭಿಸಿದ.

"ಆಪ್ ಕಹಾಂ ಜಾ ರಹೇ ಹೈಂ?"

ಅವಳಿಗೆ ಇನ್ನೂ ಸಂದೇಹಕ್ಕಿಟ್ಟುಕೊಂಡಿತು. "ಇರಬಹುದೇ?" ಎಂಬ ತನ್ನ ಪ್ರಶ್ನೆಗೆ "ಇದ್ದರೂ ಇರಲಿಕ್ಕಿಲ್ಲ" ಎಂದು ತಾನೇ ಉತ್ತರ ಹೇಳಿಕೊಂಡಳು. "ಇರಲಿಕ್ಕಿಲ್ಲ. ಹಿಂದುಸ್ಥಾನಿಯಲ್ಲಿ ಮಾತನಾಡುವ ಈ ರೀತಿ! ಆದರೂ ಪರೀಕ್ಷೆ ಮಾಡಿ ನೋಡುವ" ಎಂದುಕೊಂಡು, "ಈ ಭಾಷೆ ನನಗೆ ತಿಳಿಯುವುದಿಲ್ಲ" ಎಂದು ಸೂಚಿಸುವ ಹಾಗೆ ಕೈ ಅಲುಗಾಡಿಸಿದಳು.

"ಆಪ್‌ಕಿ ಮಾತೃಭಾಷಾ?" ಎಂದು ಆತ ಮತ್ತೆ ಕೇಳಿದ.

"ಕನ್ನಡ."

ಅವಳ ಆ ಉತ್ತರದೊಂದಿಗೆ ಅವನ ಸಂದೇಹ ದೂರವಾಯಿತು. "ಇರ ಬಹುದು ಎಂದರೇನು, ಇರುವ ಹಾಗೇ ಸರಿ"—ಎಂದುಕೊಂಡ ಆತ.

"ನೀವು ಕನ್ನಡದವರು ಹೌದೊ ಅಲ್ಲವೊ ಅಂತಿದ್ದೆ. ಅಂತೂ ನಮ್ಮ ಕಡೆಯವರೇ ಆದಿರಿ. ನಿಮ್ಮನ್ನು ಎಲ್ಲೋ ನೋಡಿದ ಹಾಗೆ ನೆನಪೂ ಐತಿ ನನಗ ..." ಎಂದ.

"ನಿಮ್ಮನ್ನೂ ನಾ ನೋಡಿದ ಹಾಗೆ ನೆನಪು. ಬೆಳಗಾವಿಯೊಳಗೊ ಏನೊ. ನಿಮ್ಮ ಹೆಸರೇನು ?"

"ಶೇಖರಪ್ಪ...."

"ಓಹ್ಹೊ, ನೆನಪಾಯ್ತು ಬಿಡ್ರಿ. ಕಲ್ಲಾಪುರದವರಲ್ಲೇನು ನೀವು ? ನಮ್ಮ ಮನೆಗೆ ಎಷ್ಟೋ ಸಾರಿ ಬಂದಿರಬೇಕು ನಮ್ಮ ತಂದೆಯ ಹತ್ತಿರ...."

"ನಮ್ಮ ಶಾಮರಾಯರ ಮಗಳು ನೀವೇ ಏನು ? ಬಹಳ ವರ್ಷ ಆಯ್ತು ಹೇಮಕ್ಕಾ ನಿಮ್ಮನ್ನು ನೋಡಿ. ಗುರುತೇ ಸಿಗಲಿಲ್ಲ ಬಿಡ್ರಿ ಒಮ್ಮೆಲೆ. ಬಹಳ ಬದಲಾಗಿಬಿಟ್ಟದ್ದೀರಿ."

"ಬದಲಾಗದಿರಲಿಕ್ಕಾಗುತ್ತೈತೇನ್ರಿ ? ನಾನು ಪುಣೆಗೆ ಹೋದವ್ಯಾಲ ಬೆಳಗಾವಿಗೆ ಬರಲೇ ಇಲ್ಲ. ನಡುವೆ ನಿಮ್ಮ ಭೆಟ್ಟಿ ಆಗಲಿಲ್ಲ. ಈಗ ಎಲ್ಲಿ, ಮುಂಬಯಿಯಿಂದ ಬಂದಿರಂತ ಕಾಣುತದ ?"

"ಹೌದು. ಈ ಗಾಡಿಯ ತನಕ ಬರೂದೂ ಬಹಳ ತ್ರಾಸ ಆಯ್ತು. ಏನೇನೋ ಮಾಡಿ ತಪ್ಪಿಸಿಕೊಂಡು ಬಂದೆ. ಈಗ ಮತ್ತೆ ತಪ್ಪಿಸಿಕೋಬೇಕು."

"ಅಂದರೆ ?"

"ಒಬ್ಬ ಸಿ. ಐ. ಡಿ. ಗಂಟುಬಿದ್ದಾನ ಶನಿ ಗಂಟುಬಿದ್ದ ಹಾಗ."

"ಮುಂಬಯಿಯೊಳಗೆ ಯಾರಪಾ ಅವ ಸಿ. ಐ. ಡಿ. ನಿಮ್ಮನ್ನು ಗುರುತು ಹಿಡಿಯುವವ ?"

"ನಮ್ಮ ಹಿಂದೇ ಹೊರಟವನಿರಬೇಕು ಅವ ಬೆಳಗಾವಿಯಿಂದ. ಆಗಿಂದಲೂ ನಮ್ಮ ವ್ಯಾಲ ಕಣ್ಣಿಟ್ಟಾನ."

"ಈಗ ಎಲ್ಲಿದಾನೆ ಅವ ?"

"ಈ ಗಾಡಿಯಲ್ಲೇ ಇದಾನೆ. ಪುಣೆ ಸ್ಟೇಶನ್ನಿನೊಳಗ ಅವನ ಕಣ್ಣು ತಪ್ಪಿಸಬೇಕಂತ ಬಹಳ ಪ್ರಯತ್ನಪಟ್ಟೆ. ಅವನೂ ಬಹಳ ಬೆರಕಿ ಇದ್ದ ಹಾಗ ಕಾಣುತ್ತೈತಿ. ನನ್ನ ಬೆನ್ನು ಬಿಡವೊಲ್ಲ."

"ಯಾವ ಡಬ್ಬಿಯೊಳಗಿದಾನೆ ?"

"ಎಂಜಿನ್ ಹತ್ತಿರ ದೊಡ್ಡದೊಂದು ಡಬ್ಬಿ ಐತಿ. ಅದರೊಳಗ ಹತ್ತಿ ವ್ಯಾಲಿನ ಬೆಂಚಿನ ವ್ಯಾಲ ನಾ ಮಲಗಿದ್ದೆ. ಅವ ಯಾವಾಗ ನನ್ನ ನೋಡಿದನೋ ಏನೊ, ಕೆಳಗೆ ಬಂದು ಸಿಗರೇಟು ಸೇದುತಾ ಕೂತುಕೊಂಡ. ಅವ ಬರೋದನ್ನ ನಾನೂ ನೋಡಿದ್ದೆ. ನಡುವೆ ಸಿಗ್ನಲ್ ಬೀಳದೆ ಗಾಡಿ ನಿಂತಾಗ ಅವ ಎದ್ದು ಆ ಕಡೆ ಕಿಟಕಿಯೊಳಗಿಂದ ಹೊರಗೆ ನೋಡುತಾ ಇದ್ದ. ಆ ಸಂಧಿ ಸಾಧಿಸಿ ನಾನಿತ್ತ ಇಳಿದು ಪಾರಾಗಿ ಇಲ್ಲಿಗೆ ಬಂದೆ. ಅವನ ಕೈಯಿಂದ ತಪ್ಪಿಸಿಕೋಬೇಕಾದರೆ ಹೆಂಗಸರ ಡಬ್ಬೀನೇ ಸರಿ ಎಂದುಕೊಂಡು ಇಲ್ಲಿ ಹತ್ತಿದೆ. ನೀವೊಬ್ಬರು ಇದ್ದದ್ದೂ ಒಳ್ಳೆಯದೇ ಆಯ್ತು. ಅಲ್ಲದೆ, ಗುರುತಿನವರೂ ಹೌದು. ಬಹಳ ಚಲೋ ಆಯ್ತು."

"ಸರಿಯಪ್ಪ. ಈ ಡಬ್ಬೀನೂ ಎಂಜಿನ್ನಿನಿಂದ ಬಹಳ ದೂರ ಅದ. ಚಿಂತೆಯಿಲ್ಲ. ಅವ ಇಳಿದು ನಿಮ್ಮನ್ನ ಹುಡುಕಾಡಿರಬಹುದಲ್ಲ ?"

"ಹುಡುಕಿದ್ದಾನು. ಆದರೆ ಇಲ್ಲಿರುವ ತನಕ ನಾನಂತೂ ಅವನಿಗೆ ಸಿಕ್ಕುವ ಹಾಗಿಲ್ಲ."

"ನಿಮ್ಮ ವ್ಯಾಲ ವಾರಂಟ್ ಬಂದಿದೆಯೇನು ಆಗಲೆ ?"

"ಇರಬೇಕು. ೪೧ರ ವೈಯಕ್ತಿಕ ಸತ್ಯಾಗ್ರಹದೊಳಗ ಭಾಗವಹಿಸಿದವರದೆಲ್ಲ ಒಂದು ಯಾದಿ ಐತೆಲ್ಲ–ಅವರನ್ನೆಲ್ಲ ಹಿಡಿಯುವ ಹೊಂಚಿರಬೇಕು ಪೋಲೀಸರದು. ಅದರಲ್ಲಿ ನನ್ನವ್ಯಾಲಂತೂ ಬಹಳ ಕಣ್ಣು ಅವರಿಗೆ. ನಮ್ಮ ಜಿಲ್ಲೆ ಎಲ್ಲಾ ಚೆನ್ನಾಗಿ ಗುರುತು ನನಗೆ. ಧಾರವಾಡ, ವಿಜಾಪುರ ಜಿಲ್ಲಾ ಕೂಡ ಗುರುತೈತಿ. ಅದಕ್ಕs ಸರಕಾರಕ್ಕ ಹೆದರಿಕೆ."

"ಎ. ಐ. ಸಿ. ಸಿ.ಗೆ ಹೋದವರ ವ್ಯಾಲ ಕಣ್ಣಿಡೂದಕ್ಕಂತ ಈ ಸಿ.ಐ.ಡಿ.ಗಳನ್ನ ಕಳಿಸಿದ್ದಾರೇನು ?"

"ಇರಬೇಕು. ನಾನು ಬೆಳಗಾವಿಯನ್ನ ಬಿಟ್ಟಾಗಿನಿಂದ ಯಾರೋ ನೆರಳಿನ ಹಾಗೆ ಹಿಂಬಾಲಿಸುತಾರಂತ ಸಂಶಯ ಬಂತು. ಇನ್ನೊತ್ತು ಮುಂಜಾನೆ ಪುಣೇ

ದೊಳಗಿದ್ದಾಗಲೂ ಹಾಗೇ. ಸ್ಟೇಶನ್ನಿಗೆ ಬಂದ ಮೇಲೂ ಸಂಶಯ ಬಲ ಆಯ್ತು. ಆವ್ಯಾಲ ಪಕ್ಕಾ ಖಾತ್ರೀ ಆಯ್ತು. ಆತ ಬಹಳ ಮುತ್ಸದ್ದಿ ಇದ್ದಾಂಗ ಕಾಣುತೈತಿ. ನಾನು ಬೆಳಗಾವಿಗೆ ಹೋಗೂದರೊಳಗ ನಡುವೇ ಎಲ್ಲಾದರೂ ಹಿಡಿದರೂ ಹಿಡಿದನೆ. ನಾ ಬೆಳಗಾವಿಗಂತೂ ಹೋಗಲೇಬೇಕು. ಇವನ ಕೈಗೆ ಸಿಗೂದು ಸಾಧ್ಯವೇ ಇಲ್ಲ. ಹ್ಯಾಗೆ ಮಾಡೋದು ಈಗ? ವೇಷ ಬದಲಿಸೋದೊಂದೇ ಉಪಾಯ."

"ಬದಲಿಸಬಹುದು. ಆದರೆ ಇದು ಹೆಣ್ಣುಮಕ್ಕಳ ಡಬ್ಬಿ. ಇಲ್ಲಿ ಬೇರೆ ಯಾವ ವೇಷ ಹಾಕಿದರೂ ಕಷ್ಟವೇ. ಮಿರಜ ಸ್ಟೇಶನ್ನಿಗೆ ತಟಕ್ಕನೆ ಯಾರಾದರೂ ಬಂದರೆ ಕಷ್ಟ. ಡಬ್ಬಿ ಈಗೇನೋ ಖಾಲಿ ಅದ. ಆದರೆ ಯಾವ ಸ್ಟೇಶನ್ನಿಗೆ ಜನ ಬಂದಾರೆಂಬುದನ್ನು ಹೇಳೂದಕ್ಕಾಗುವಂತಿಲ್ಲ. ಆದ್ದರಿಂದ ವೇಷ ಹಾಕೋದಿದ್ದರೆ ಲಗೂ ಹಾಕಿಬಿಡಿರಿ. ಮುಂದಿನ ಸ್ಟೇಶನ್ನಿಗೆ ನೀವು ಇಳಿದುಬಿಡೂದೇ ಒಳ್ಳೆಯದು. ಬೇರೆ ಬಟ್ಟೆಬರೆ ತಂದಿದ್ದೀರೇನು ?"

"ಹೌದು. ಎಲ್ಲಾ ತಯಾರಿ ಮಾಡಿಕೊಂಡೇ ಬಂದಿದ್ದೀನಿ. ನಾಲ್ಕೈದು ತರದ ವೇಷ ಹಾಕಿಸುವ ಶಕ್ತಿ ಐತಿ ಈ ಚೀಲದೊಳಗ. ಮುಂಜಾನೆ ಪುಣೇದೊಳಗ ಎಲ್ಲಾ ಖರೀದಿ ಮಾಡಿದೆವು."

"ಮಾಡಿದೆವು ಅಂದರೆ ? ಇನ್ನೂ ಎಷ್ಟು ಜನರಿದಾರೆ ನಿಮ್ಮ ಸಂಗಡ ?"

"ನಾವು ಒಟ್ಟು ನಾಲ್ಕು ಜನ ಇದ್ದೇವೆ."

"ಅವರೆಲ್ಲಾ ಎಲ್ಲಿದಾರೆ ?"

"ಬೇರೆ ಬೇರೆ ಡಬ್ಬಿಗಳೊಳಗೆ ಕೂತಿದ್ದಾರೆ. ಪೋಲೀಸರಿಗೆ ಸಂಶಯ ಬರಬಾರದು ಅಂತ ಹಾಗೆ ಉಪಾಯ ಮಾಡಬೇಕಾಗುತೈತಿ. ಅವರ ಮ್ಯಾಲ ಅಷ್ಟೇನೂ ಕಣ್ಣಿಲ್ಲ ಅನ್ನಿರಿ."

"ಮುಂಬಯಿಯಿಂದ ತಪ್ಪಿಸಿಕೊಂಡು ಬಂದದ್ದೇ ಸಾಹಸವಾಗಿರಬಹುದಲ್ಲ? ಅಲ್ಲಿ ಕಾಂಗ್ರೆಸ್ಸಿನವರಾರಾದರೂ ಭೆಟ್ಟಿಯಾಗಿದ್ದರೇನು ?"

"ಕರ್ನಾಟಕದವರೆಲ್ಲ ಒಂದು ಮನೆಯೊಳಗ ಒಟ್ಟುಗೂಡಿದ್ದೆವು ಒಂಬತ್ತನೇ ತಾರೀಖಿನ ಸಾಯಂಕಾಲ. ನಿಮ್ಮ ತಂದೆಯವರೂ ಬಂದಿದ್ದರು. ಧಾರವಾಡ, ಹುಬ್ಬಳ್ಳಿ, ಬೆಳಗಾವಿ, ವಿಜಾಪುರದ ಮುಖಂಡರೆಲ್ಲಾ ಇದ್ದರು."

"ಆಮೇಲೆ ?"

“ಮುಂದಿನ ಕಾರ್ಯಕ್ರಮ ಏನು ಅಂತ ವಿಚಾರ ಆಯ್ತು. ಮುಖಂಡರಾರೂ ಏನೂ ಹೇಳಲಿಲ್ಲ. ಮೊದಲಿನ ಹಾಗೆ ಅವರಿಗೆ ಹುರುಪು ಇದ್ದಂಗ ಕಾಣಿಸಲಿಲ್ಲ. ನಿಮ್ಮ ತಂದೆಯುವರಂತೂ ಸುಮ್ಮನೆ ಕೂತುಕೊಂಡುಬಿಟ್ಟಿದ್ದರು. ಒಂದು ಮಾತೂ ಆಡಲಿಲ್ಲ. ಏನು ಮಾಡಬೇಕು ಹೇಳಿರಿ ಅಂತ ಕೇಳಿದೆವು. ‘ನನಗ ಒಂದೂ ಹೊಳೀಲೊಲ್ಲದು, ನೀವೇ ಏನಾದರೂ ಮಾಡಿಕೊಳ್ರಿ’ ಅಂದರು. ಆಯ್ತು, ಸಭೆ ಮುಗೀತು.”

“ಹಾಗಾದರ ನೀವೇ ಇನ್ನು ಮ್ಯಾಲ ನಿಮಗೆ ತಿಳಿದದ್ದು ಮಾಡುವವರು ಅನ್ನಿರಿ.”

“ಹೌದು ಇನ್ನೇನು ಮಾಡಬೇಕು ಹೇಳಿರಿ. ಎಲ್ಲರೂ ಮಾಡಬೇಕು ಇಲ್ಲಾ, ಮಡೀಬೇಕು ಅಂತ ಬಾಪೂಜಿ ಅಪ್ಪಣೆ ಕೊಟ್ಟಿದ್ದಾರೆ. ಅಷ್ಟು ಸಾಕಲ್ಲ ನಮಗೆ? ಅವರ ಅಪ್ಪಣೆಯಂತೆ ನಾವೆಲ್ಲ ನಮಗೆ ತಿಳಿದ ರೀತಿ ಸರಕಾರದ ವಿರುದ್ಧ ಯುದ್ಧ ಹೂಡಬೇಕು, ಅದರ ಕೆಲಸ ಯಾವುದೂ ನಡೆಯದಾಂಗ ಮಾಡಬೇಕು. ಕಾಂಗ್ರೆಸ್ ಸೋಶಲಿಸ್ಟ ಪಾರ್ಟಿಯವರೂ ಹೀಗೇ ಹೇಳುತ್ತಿದ್ದಾರೆ. ಪುಣೇದೊಳಗ ನಾಲ್ಕೈದು ಜನ ನನಗೆ ಭೆಟ್ಟಿಯಾಗಿದ್ದರು. ಅವರು ನಮಗ ಪೂರಾ ಕಾರ್ಯಕ್ರಮ ಕೊಟ್ಟಿದ್ದಾರೆ.”

“ಆ ಕಾರ್ಯಕ್ರಮಕ್ಕೆ ಗಾಂಧೀಜಿಯವರ ಒಪ್ಪಿಗೆ ಇದೆಯೊ ಇಲ್ಲೋ ಅನ್ನೂದರ ವಿಚಾರ ಏನಾದರೂ....?”

“ಯುದ್ಧ ಸಾರಿಬಿಟ್ಟಿದ್ದಾರೆ ಅವರು. ಸೈನಿಕರಿಗೆ ಕಾರ್ಯಕ್ರಮ ಕೊಡೋದಕ್ಕೆ ಮೊದಲೇ ಅವರನ್ನು ಹಿಡಿದುಕೊಂಡು ಹೋದರಲ್ಲ! ಹಾಗಂತ ನಾವು ಸುಮ್ಮನೆ ಕೂಡ್ರಲಿಕ್ಕಾಗ್ತದೇನು? ಸೇನಾಪತಿಯನ್ನು ಹಿಡಿದುಕೊಂಡು ಹೋದಷ್ಟಕ್ಕೇ ಸೈನ್ಯ ಯುದ್ಧ ನಿಲ್ಲಿಸಬೇಕೇನು? ನುಗ್ಗಬೇಕು ಎಂಬುವ ಅಪ್ಪಣೆ ಕೊಟ್ಟು ಹೋದ ಸೇನಾಪತಿ. ಸೈನ್ಯ ಇನ್ನು ನುಗ್ಗಬೇಕು. ಯಾವ ರೀತಿ ನುಗ್ಗಬೇಕು, ಹೇಗೆ ನುಗ್ಗಬೇಕು ಎಂಬುದರ ಬಗ್ಗೆ ಒಣ ಚರ್ಚೆಯಿಂದ ಏನು ಉಪಯೋಗ? ಅಂತೂ ನುಗ್ಗಬೇಕು, ಸರಕಾರದ ವಿರುದ್ಧ ಬಂಡು ಹೂಡಬೇಕು. ಇಷ್ಟು ಮಾತ್ರ ನಮಗೆ ಗೊತ್ತು.”

“ಅಂತೂ ಮೊದಲಿನ ಹಾಗೆ ಸತ್ಯಾಗ್ರಹ ಮಾಡಿ ಜೇಲಿಗೆ ಹೋಗುವ ಕಾಲ ಇದಲ್ಲ ಅನ್ನೋದಂತೂ ನಿಜ ಅನ್ನಿರಿ.”

“ಅದು ಮಾತ್ರ ಖಂಡಿತ. ಬೇರೆ ಚಳವಳಿಗಳ ಹಾಗಲ್ಲ ಈ ಚಳವಳಿ. ಜೇಲಿಗೆ ಹೋಗಿ ಕೂತುಕೊಳ್ಳುವುದರಿಂದ ಏನೂ ಉಪಯೋಗವಿಲ್ಲ. ಹೊರಗಿದ್ದು ಕೊಂಡೇ ಹೋರಾಡಬೇಕು. ಸರಕಾರದ ಯಂತ್ರವನ್ನು ಮುರಿದು ನಾಶ ಮಾಡಬೇಕು.”

ಆವೇಶದಿಂದ ತುಂಬಿದ್ದ ಅವನ ಮಾತುಗಳಿಂದ ಹೇಮಾವತಿಯಲ್ಲೂ ಆವೇಶ ಬಂದಂತಾಯಿತು. ಕೇಳಿದಳು: “ನಿಮ್ಮ ಕಾರ್ಯಕ್ಷೇತ್ರ ಯಾವುದು?”

“ಮತ್ತಿನ್ನಾವದು? ಕರ್ನಾಟಕವೇ ಸರಿ.”

“ಹಾಗಲ್ಲ. ಹೆಚ್ಚಾಗಿ ನೀವು ಎಲ್ಲಿ ಕೆಲಸ ಮಾಡುವವರು?”

“ಸದ್ಯಕ್ಕಂತೂ ಬೆಳಗಾವಿ ಜಿಲ್ಲೆಯಲ್ಲಿ. ಅದೂ ನಮ್ಮೂರಿನ ಸುತ್ತ ಮುತ್ತ. ಮೊದಲು ಸಣ್ಣದಾಗಿ ಆರಂಭ ಮಾಡಿ ಆಮ್ಯಾಲ ಸಂಘಟನೆ ಮಾಡಿ ಬೆಳಿಸಬೇಕು. ಕರ್ನಾಟಕಕ್ಕೆಲ್ಲಾ ಒಂದೇ ಸಂಘಟನೆ ಕಟ್ಟಿ ಶಿಸ್ತಿನಿಂದ ಕೆಲಸ ಸಾಗಿಸಬೇಕೆಂಬ ವಿಚಾರ ಮಾಡಿದ್ದೇವೆ. ನೋಡಬೇಕು ಏನಾಗುವದೊ....”

“ನಾನೂ ಭಾಗವಹಿಸಬೇಕಂತ ಮಾಡಿದ್ದೇನೆ ಈ ಚಳವಳಿಯೊಳಗೆ. ನನ್ನಿಂದ ಏನಾದರೂ ಉಪಯೋಗವಾದೀತಷ್ಟೆ?” ಎಂದು ಉತ್ಸುಕತೆಯಿಂದ ಕೇಳಿದಳು ಹೇಮಾ.

“ಓ! ಬಹಳ ಒಳ್ಳೇದೇ ಆಯ್ತು. ಯಾಕೆ ಉಪಯೋಗವಾಗಲಿಕ್ಕಿಲ್ಲ? ಬೇಕಾದಷ್ಟು ಆದೀತು. ನಿಮ್ಮಂಥ ವಿದ್ಯಾವಂತರೂ, ಓದುಬರಹ ಬಲ್ಲವರೂ ನಮಗೆ ಸಹಾಯ ಮಾಡಿದರೆ ನಾವೇನು ಸಾಧಿಸಲಾರೆವು? ಕರಪತ್ರ ಹೊರಡಿಸುವದು, ಟೈಪ್ ಮಾಡುವದು ಇನ್ನೂ ಎಷ್ಟೋ ಕೆಲಸ ನೀವು ಮಾಡಬಹುದಲ್ಲ?”

ಸಂತೋಷದಿಂದ ಹೇಮಾ ಮುಖ ಅರಳಿದಂತಾಯಿತು. ಸ್ವಾತಂತ್ರ್ಯದ ಈ ಮಹಾ ಯಾಗದಲ್ಲಿ ತನಗೂ ಒಂದು ಎಡೆಯುಂಟು, ಹೆಣ್ಣಾದ ಮಾತ್ರಕ್ಕೇ ತನಗೆ ಇಲ್ಲಿ ಬಹಿಷ್ಕಾರವಿಲ್ಲ ಎಂಬುದು ಮನವರಿಕೆಯಾಗುತ್ತಲೂ ಆಕೆಗೆ ಎದೆ ತುಂಬಿ ಬಂದಿತು. ತಾನು ಚಳವಳಿಗೆ ಸೇರುವುದಾಗಿ ಹೇಳಿದಾಗ ತಂದೆ ಆಡಿದ ಮಾತುಗಳನ್ನೂ, ಈಗ ಶೇಖರನಾಡಿದ ಮಾತುಗಳನ್ನೂ ಒಂದೆಡೆಗೆ ತಂದು ಹೋಲಿಸಿ ನೋಡಿದಳು. ವೃದ್ಧಾಪ್ಯದಲ್ಲಿ ಅಡಿಯಿರಿಸುತ್ತಿದ್ದ ಮನೋಭಾವಕ್ಕೂ, ತಾರುಣ್ಯದ ಕೆಚ್ಚಿನಿಂದ ಬಲಶಾಲಿಯಾಗಿದ್ದ ಮನೋಭಾವಕ್ಕೂ ಇರುವ ವ್ಯತ್ಯಾಸ ವೇನೆಂಬುದನ್ನು ಕಂಡುಕೊಂಡಳು. ತನ್ನ ತಂದೆ ಹಳೆಯ ಕಾಂಗ್ರೆಸ್ ಮುಖಂಡರು,

ಮಡಿ ಸ್ವಭಾವದವರು, ಸುಶಿಕ್ಷಿತರು, ನಗರದಲ್ಲಿ ವಾಸಿಸುವವರು; ಈ ಶೇಖರ ಹೊಸ ಕಾಂಗ್ರೆಸ್ ಮುಖಂಡತ್ವದ ಪ್ರತೀಕ, ಹರಯದ ಉತ್ಸಾಹಿ, ಕೇವಲ ಮುಲ್ಕೀ ಪರೀಕ್ಷೆ ಮಾಡಿ ಮುಗಿಸಿದವ, ಹಳ್ಳಿಯಲ್ಲಿ ಹಳ್ಳಿಗರ ನಡುವೆ ರೈತನಾಗಿ ಜೀವಿಸುವವ. ನಲವತ್ತೆರಡರ ಹೋರಾಟದ ಸ್ವರೂಪವೆಂಥದೆಂಬುದು ಆಕೆಗೆ ಮಸಕುಮಸಕಾಗಿ ತೋರತೊಡಗಿತು.

—ಅದು ಜನತೆಯ ಹೋರಾಟವಾಗಬಹುದು. ಸಾಮಾನ್ಯ ಜನತೆಯ, ರೈತರ, ಕಾರ್ಮಿಕರ, ಅಶಿಕ್ಷಿತ ದೇಶಪ್ರೇಮಿಗಳ ಹೋರಾಟವಾಗಬಹುದು. ಹೆಚ್ಚಾಗಿ ತರುಣರ ಹೋರಾಟವಾಗಬಹುದು....

ಒಳಗಿನ ವಿಭಾಗಕ್ಕೆ ಹೋಗಿ ಶೇಖರಪ್ಪ ಮೊದಲಿನ ವೇಷವನ್ನು ತೆಗೆದು ಗಡ್ಡವನ್ನೂ, ದೊಡ್ಡ ಮೀಸೆಯನ್ನೂ ಇಟ್ಟುಕೊಂಡು, ತಲೆಗೆ ದಪ್ಪಗಿನ ರುಮಾಲು ಸುತ್ತಿ, ಅಗಲವಾದ ಪೈಜಮಾ ಹಾಕಿ, ಒಂದು ಉದ್ದವಾದ ಶೆರ್‌ವಾನಿ ತೊಟ್ಟು ಕೊಂಡ. ಚೀಲದಲ್ಲಿದ್ದ ಪುಟ್ಟ ಕನ್ನಡಿಯಲ್ಲಿ ಒಂದು ಸಲ ಮುಖ ನೋಡಿಕೊಂಡು ತೃಪ್ತಿಸೂಚಕ ನಗೆ ಬೀರುತ್ತ ಮೊದಲಿನ ಬಟ್ಟೆಗಳನ್ನೆಲ್ಲ ಚೀಲಕ್ಕೆ ಹಾಕಿ ಮುಚ್ಚಿ ಹೇಮಾ ಕುಳಿತಲ್ಲಿಗೆ ಬಂದ.

ಒಂದೆರಡು ನಿಮಿಷಗಳವರೆಗೆ ಆಕೆ ಬೆರಗುಗೊಂಡ ಕಣ್ಣುಗಳಿಂದ ಅವನನ್ನೆ ನಿಟ್ಟಿಸುತ್ತಿದ್ದಳು. ವೇಷ ಬದಲಾಯಿಸುವುದರಲ್ಲಿನ ಆ ಕೌಶಲ್ಯ ನಿಜಕ್ಕೂ ಮೆಚ್ಚುವಂಥದಾಗಿದ್ದಿತು. ಐದು ನಿಮಿಷಗಳಿಗೆ ಹಿಂದೆ ಅವನನ್ನು ಕಂಡವರಾರೂ ಈಗ ಆತನನ್ನು ಈ ವೇಷದಲ್ಲಿ ಗುರುತಿಸುವುದು ಸಾಧ್ಯವಿರಲಿಲ್ಲ. ಎಂಥ ಚಾಣಾಕ್ಷ ಸಿ. ಐ. ಡಿ.ಯೂ ಅವನ ಬಗ್ಗೆ ಸಂದೇಹಪಟ್ಟುಕೊಳ್ಳುವುದು ಅಸಾಧ್ಯ ವಾಗಿದ್ದಿತು.

"ಇದನ್ನೆಲ್ಲ ಎಲ್ಲಿ ಕಲಿತಿರಿ ಶೇಖರಣ್ಣ?" ಎಂದು ಕುತೂಹಲದಿಂದ ಕೇಳಿದಳಾಕೆ.

"ಕಲಿಯಬೇಕಾದ್ದೇನೈತಿ ಇದರೊಳಗ ಹೇಮಕ್ಕ? ಪ್ರಸಂಗ ತಾನೇ ಕಲಿಸುತ್ತೈತಿ. ಆಗಲಿ ಹಾಗಾದರ, ನಾ ಇಲ್ಲೇ ಇಳೀತೀನಿ ಮುಂದಿನ ಸ್ಟೇಶನಕ್ಕೆ. ನೀವು ನೆಟ್ಟಗೆ ಬೆಳಗಾವಿಗೆ ಹೋಗುತೀರಿ ಹೌದಲ್ಲೊ?"

"ಹೂಂ. ಊರು ಮುಟ್ಟಿದ ಮ್ಯಾಲೆ ನಮ್ಮ ಮನೆಯ ಕಡೆ ಬರಬೇಕು ನೀವು. ಮರೀಬ್ಯಾಡ್ರಿ ಮತ್ತೆ. ನಾನೂ ನಿಮ್ಮ ಸಂಗಡ ಕೆಲಸ ಮಾಡಬೇಕು."

"ಹೋ! ತಪ್ಪದೆ ಬರ್ತೇನೆ. ನಾಳೆ ರಾತ್ರಿ ಹತ್ತು ಗಂಟೆಯ ಸುಮಾರಿಗೆ ಬಂದರಾದೀತೇ ?"

"ಬರ್ರಿ. ನಾನು ಹಾದೀ ಕಾಯ್ತೇನೆ."

ಗಾಡಿ ನಿಂತುಕೊಂಡಿತು. ಶೇಖರ ಚೀಲವನ್ನೆತ್ತಿಕೊಂಡು ಪ್ಲಾಟ್‌ಫಾರ್ಮಿನ ಹಿಂಬದಿಯಿಂದ ಇಳಿದು ಬಾಗಿಲನ್ನು ಮುಚ್ಚಿ "ನಮಸ್ಕಾರ" ಎಂದು ಮೆಲ್ಲಗಿನ ದನಿಯಲ್ಲಿ ನುಡಿದು ಕತ್ತಲಲ್ಲಿ ಮಾಯವಾದ.

೩

ಆ ನಿಲ್ದಾಣದಲ್ಲಿ ನಿಂತುಕೊಂಡ ರೈಲು ಯಾವ ಕಾರಣದಿಂದಲೋ ಏನೋ ಬೇಗ ಹೊರಡಲಿಲ್ಲ. ಹತ್ತು ಹದಿನೈದು ನಿಮಿಷಗಳು ಕಳೆದರೂ ಅದು ಹೊರಡುವ ಲಕ್ಷಣ ತೋರಿಬರಲಿಲ್ಲವಾದುದರಿಂದ ಹೇಮಾ ಕಿಟಕಿಯನ್ನು ತೆರೆದು ಹೊರಕ್ಕೆ ಇಣಿಕಿನೋಡಿದಳು. ಗಾಡಿಯ ಮುಂದೆ ಎಂಜಿನ್ ಇದ್ದಂತಿರಲಿಲ್ಲ. ಎಂಜಿನ್ನು ನೀರು ತುಂಬಿಸಿಕೊಳ್ಳುವ ನಿಲ್ದಾಣವಿದ್ದೀತು ಎಂದು ಬಗೆದು ಅತ್ತ ಇತ್ತ ದೃಷ್ಟಿ ತೂರಿದಳು.

ಅವಳಂತೆಯೆ ನಿದ್ರೆಹೋಗದೆ ಕುಳಿತಿದ್ದ ಪ್ರವಾಸಿಕರು ಕೆಲವರು ಡಬ್ಬಿಗಳಿಂದ ಇಳಿದು ಪ್ಲಾಟ್‌ಫಾರ್ಮಿನ ಮೇಲೆ ಶತಪಥ ಹಾಕುತ್ತಿದ್ದರು. ಅವರಲ್ಲೊಬ್ಬ ಅವಳ ಡಬ್ಬಿಯೆದುರಿಗೆ ಹಾಯ್ದು ಹೋಗುವಾಗ ಕಿಟಕಿಯಲ್ಲಿ, ದೀಪದ ಬೆಳಕಿನಲ್ಲಿ ಎದ್ದು ಕಾಣುತ್ತಿದ್ದ ಅವಳ ಮುಖವನ್ನು ಕಂಡು ಹಠಾತ್ತಾಗಿ ನಿಂತುಕೊಂಡ. ಎಡಗೈಯಲ್ಲಿ ಉರಿಯುತ್ತಿದ್ದ ಸಿಗರೇಟನ್ನು ನೆಲಕ್ಕೆ ಬಿಸುಟು ಅವಳ ಬಳಿ ಬಂದು ಮತ್ತೊಂದು ಸಲ ಅವಳನ್ನು ನಿಟ್ಟಿಸಿ ನೋಡಿ ಆಶ್ಚರ್ಯದಿಂದ ಉದ್ಗಾರ ತೆಗೆದ : "ಯಾರು ? ಹೇಮಾವತಿ! ನೀವು ಈ ಗಾಡಿಯಲ್ಲಿ ?"

ಆ ಸೂಟುಧಾರಿ ಯುವಕನನ್ನು ಆಕೆಯೂ ಆಗಲೆ ಗುರುತಿಸಿದ್ದಳು. ಅವಳನ್ನು ಕಂಡು ಅವನಿಗೆ ಆಶ್ಚರ್ಯವಾದ ಹಾಗೆಯೆ ಅವಳಿಗೂ ಅವನನ್ನು ಕಂಡು ಆಶ್ಚರ್ಯವಾಗಿದ್ದಿತು. "ನೀವೂ ಪ್ರವಾಸ ಮಾಡುತ್ತಿದ್ದೀರಾ ?" ಎಂದಳು.

"ಹೂ. ಬೆಳಗಾವಿಗೆ ಹೋಗಬೇಕು. ಕಾಲೇಜಂತೂ ಮುಚ್ಚಿದ ಹಾಗಾಯಿತಲ್ಲ? ಇನ್ನು ಅಲ್ಲಿ ಕುಳಿತೇನು ಮಾಡೋದು? ಹೊರಟುಬಿಟ್ಟೆ. ನೀವು ಯಾವಾಗ ಹೊರಟದ್ದು?"

ಹೇಮಾ ಎಲ್ಲವನ್ನೂ ವಿವರಿಸಿದ ತರುವಾಯ ಆತ: "ಈ ರೈಲ್ವೆ ಪ್ರವಾಸ ಬಹಳ ಬೇಸರದ್ದು ನೋಡ್ರಿ ಹೇಮಾವತಿ. ಯಾರಾದರೂ ಜೊತೆಗಿದ್ದರೆ ಸರಿ. ಮಾತಾಡುತ್ತಾ ಹೋಗಬಹುದು. ಇಲ್ಲಾಂದರೆ ನರಕದ ಪ್ರವಾಸ ಮಾಡಿದ ಹಾಗೆ. ಅಲ್ಲವೇ? ನೀವೇನನ್ನುತ್ತೀರಿ?" ಎಂದ.

"ನನಗೆ ಸ್ವರ್ಗದ ಅನುಭವವೂ ಇಲ್ಲ, ನರಕದ ಅನುಭವವೂ ಇಲ್ಲ, ಮಿಸ್ಟರ್ ದೇಸಾಯಿ. ಇನ್ನು ಈ ಬಗ್ಗೆ ಏನು ಅಭಿಪ್ರಾಯ ಕೊಡಲಿ?" ಎಂದು ಹೇಳಿ ಆಕೆ ಮನಸೋಕ್ತವಾಗಿ ನಕ್ಕಳು.

"ಒಬ್ಬರೇ ಇದ್ದೀರಾ ಈ ಡಬ್ಬಿಯಲ್ಲಿ? ಬೇಸರು ಬರೋದಿಲ್ಲವೆ? ಬರ್ರಿ. ಆ ಕಡೆ ಸೆಕಂಡ್ ಕ್ಲಾಸಿಗಾದರೂ ಬರ್ರಿ. ಅಲ್ಲೂ ಯಾರೂ ಇಲ್ಲ. ಇಬ್ಬರೂ ಮಾತಾಡುತಾ ಹೋದರಾಯಿತು. ಬರ್ತೀರಾ?" ಎಂದನಾತ.

ಅವನ ಮಾತಿನಿಂದ ಆಕೆಯ ಮನಸ್ಸಿನಲ್ಲಿ ಯಾವ ವಿಕಲ್ಪವೂ ಹುಟ್ಟಲಿಲ್ಲ. ಪುಣೆಯಂಥ ನಗರದಲ್ಲಿ ನಾಲ್ಕಾರು ವರ್ಷ ಇದ್ದು, ಕಾಲೇಜಿನಲ್ಲಿ ಕಲಿಯುತ್ತ ವಿದ್ಯಾರ್ಥಿಗಳೊಂದಿಗೆ ಬೆರೆತು ಇದ್ದುದರಿಂದ ಅಂಥ ಮಾತಿನಿಂದ ತಪ್ಪು ಕಲ್ಪನೆ ಮಾಡಿಕೊಳ್ಳುವ ಸ್ಥಿತಿಯಲ್ಲೂ ಅವಳಿರಲಿಲ್ಲ. ಆ ಯುವಕನೊಂದಿಗೆ ಒಂದೇ ಡಬ್ಬಿಯಲ್ಲಿ ರಾತ್ರಿಯನ್ನೆಲ್ಲ ಕಳೆಯುವ ಮನೋಧೈರ್ಯವೂ, ನೈತಿಕಬಲವೂ ಅವಳಲ್ಲಿದ್ದುದರಿಂದ ಆ ಬಗ್ಗೆ ಸಂದೇಹಪಟ್ಟುಕೊಳ್ಳುವ ಅಗತ್ಯವೂ ಇರಲಿಲ್ಲ. ಆದರೂ ಅವನ ಕರೆಯನ್ನು ಆಕೆ ಮನ್ನಿಸಲಿಲ್ಲ. "Thanks. ಇಲ್ಲೇ ಆರಾಮಾಗಿದೆ, ಮತ್ತೆ ಯಾವಾಗಲಾದರೂ ಭೆಟ್ಟಿಯಾಗೋಣವಂತೆ. ಬೆಳಗಾವಿಯೊಳಗ ಎಷ್ಟು ದಿನ ಇರ್ತೀರಿ?" ಎಂದು ಕೇಳಿದಳು.

ಅವಳ ಉತ್ತರದಿಂದ ದೇಸಾಯಿಗೆ ನಿರುತ್ಸಾಹವೇನೂ ಆಗಲಿಲ್ಲ. ಅಂಥ ಉತ್ತರ ಬರಬಹುದೆಂದು ಆತ ನಿರೀಕ್ಷಿಸಿಕೊಂಡೇ ಇದ್ದಿರಬೇಕು. "ಅಚ್ಛಾ, ನಿಮ್ಮ ಮನಸ್ಸು. ನನಗೇನು ಇದ್ದೇ ಇದೆಯಲ್ಲ ನನ್ನ ಸದಾ ಜತೆಗಾತಿ....ಈ ಗೋಲ್ಡ್‌ಫ್ಲೇಕ್...." ಎಂದು ನಗುತ್ತ ನುಡಿದು ಮತ್ತೊಂದು ಸಿಗರೇಟನ್ನು ತೆಗೆದು ಹೊತ್ತಿಸಿದ. ಒಂದೆರಡು ಸಲ ಅದನ್ನು ಸುಖವಾಗಿ ಸೇದುತ್ತಿದ್ದು ಅನಂತರ—

"ಬೆಳಗಾವಿಯಲ್ಲಿ ಭೆಟ್ಟಿಯಾಗೋಣ ಹಾಗಾದರೆ....ಎಂದು ಬರಲಿ ಮನೆಗೆ ?" ಎಂದ.

ನೀರು ತುಂಬಿಸಿಕೊಂಡ ಎಂಜಿನ್ ಮರಳಿ ಬಂದು ಗಾಡಿಗೆ ಅಂಟಿಕೊಂಡಾಗಿದ್ದಿತು. ಸ್ಟೇಶನ್ ಮಾಸ್ತರ ಕೊಟಡಿಯಲ್ಲಿ ಧೂಮ್ರಪಾನ ಮಾಡುತ್ತಿದ್ದ ಗಾರ್ಡುಗಳು ಹೊರಗೆ ಬಂದು ಕೈಕಂದೀಲುಗಳನ್ನು ಅಣಿಗೊಳಿಸುತ್ತಿದ್ದರು. ಒಂದೆರಡು ಕ್ಷಣಗಳಲ್ಲಿಯೆ ಎಂಜಿನ್ನಿನ ಸಿಳ್ಳು ಕೇಳಬಂದಿತು.

"ನಾಳೆ ಬರ್ರಿ. ನಮ್ಮ ಮನೆ ನೋಡಿದ್ದೀರಷ್ಟೆ ?" ಎಂದು ಕೇಳಿದಳು ಹೇಮಾ.

"ಯಾವ ಓಣಿಯಲ್ಲಿದೆ ಎಂಬುದನ್ನಷ್ಟು ಹೇಳಿದರೆ ಸಾಕು. ಪತ್ತೆ ಮಾಡುತ್ತೇನೆ."

ಆಕೆ ವಿಳಾಸವನ್ನು ತಿಳಿಸಿದಳು. "ಗಾಡಿ ಬಿಡುತ್ತಿದೆ, ಹೊರಡಿರಿ. ಎಲ್ಲಿದೆ ನಿಮ್ಮ ಡಬ್ಬಿ ?" ಎಂದಳು.

ಆತ ಹೊರಡುವುದಕ್ಕಾಗಿ ಮುಂದೆ ಅಡಿಯಿರಿಸಿದಾಗಲೆ ಗಾಡಿಯೂ ಹೊರಟಿತು. "ದೂರ ಉಳಿಯಿತು—ಬಹಳ ದೂರ. ನಾಲ್ಕೈದು ಡಬ್ಬಿ ಆದರೂ ದಾಟಿ ಹೋಗಬೇಕು....ಅಷ್ಟರೊಳಗೆ...." ಎಂದು ಆತ ಹೇಳುತ್ತಿರುವಾಗಲೇ ರೈಲು ಧಾವಿಸತೊಡಗಿತು.

ಡಬ್ಬಿಯ ಬಾಗಿಲಿನ ಬಳಿಯಿದ್ದ ಸಲಾಕೆಯನ್ನು ಹಿಡಿದುಕೊಂಡು ಓಡುತ್ತ ದೇಸಾಯಿ—"ಇನ್ನು ಡಬ್ಬಿ ಸಿಗುವಂತೇ ಇಲ್ಲ ಅನ್ನಿರಿ. ಇನ್ನೇನು ಮಾಡೋದು, ಯಾವುದಾದರೂ ಥರ್ಡ್ ಕ್ಲಾಸ್ ಡಬ್ಬಿ ಸೇರಬೇಕಾಗುವದೇನೊ," ಎಂದು ಗೊಣಗುತ್ತಿದ್ದುದು ಕೇಳಿಸಿತು.

ಕ್ಷಣಕ್ಷಣಕ್ಕೂ ರೈಲಿನ ವೇಗ ಹೆಚ್ಚುತ್ತಿತ್ತು. ಆತ ಹಾಗೇ ಆ ಸಲಾಕೆಯನ್ನು ಹಿಡಿದು ಓಡುತ್ತಿದ್ದ. ಪ್ಲಾಟ್‌ಫಾರ್ಮನ್ನು ಹಿಂದೆ ಹಾಕಿ ರೈಲು ಮುನ್ನುಗ್ಗುತ್ತಲೂ ಆತ ಕಾಲುಮಣೆಯನ್ನೇರಿ ಅಲ್ಲಿಯೆ ನಿಂತುಕೊಂಡುಬಿಡಬೇಕಾಯಿತು.

ಇನ್ನು ಆತನನ್ನು ಒಳಕ್ಕೆ ಕರೆದುಕೊಳ್ಳದೆ ವಿಧಿಯಿರಲಿಲ್ಲ. "ಬರ್ರಿ. ಮುಂದಿನ ಸ್ಟೇಶನ್ನಿಗಿಳಿದೀರಂತೆ. ಅದುವರೆಗೆ ಕುಳಿತುಕೊಂಡಿರ್ರಿ. ಇನ್ನೇನು ಮಾಡೋದು ?" ಎಂದು ಹೇಮಾ ಬಾಗಿಲನ್ನು ತೆರೆದಳು.

"Thanks, Thanks" ಎಂದು ನಾಲ್ಕೈದು ಸಲ ನುಡಿದು ದೇಸಾಯಿ ಡಬ್ಬಿಯೊಳಗೆ ಬಂದ. ಬಾಗಿಲನ್ನು ಮುಚ್ಚಿ ಒಂದು ಸಲ ತನ್ನ ಕೋಟು. ಪ್ಯಾಂಟು ಗಳನ್ನು ಮೆಲ್ಲಗೆ ಜಾಡಿಸಿಕೊಂಡ, ಗಾಳಿಗೆ ಸಿಕ್ಕಿ ಅಸ್ತವ್ಯಸ್ತವಾಗಿದ್ದ ಕ್ರಾಪು ಕೂದಲಿನ ಮೇಲೆ ಎಡಗೈಯ ಬೆರಳುಗಳನ್ನು ಸೂಕ್ಷ್ಮವಾಗಿ ಆಡಿಸಿ ಸರಿಪಡಿಸಿ ಕೊಂಡ. ಅನಂತರ ಅವಳ ಪಕ್ಕದಲ್ಲಿದ್ದ ಸ್ಥಳವನ್ನು ಕರವಸ್ತ್ರದಿಂದ ಒರಸಿ ಅದರ ಮೇಲೆ ಠೀವಿಯಿಂದ ಕುಳಿತುಕೊಂಡು ಅವಳ ಕಡೆಗೆ ತಿರುಗಿ ನೋಡಿದ: "Well! Here we are!"

"Well!" ಎಂದಳು ಹೇಮಾ.

"Hello! What a Surprise! ಇದೇನು, ಈ ಖದ್ದರ್ ಸೀರೆ ಯಾವಾಗ ಬಂತು? ನೀವೂ ಸೇರಿದಿರೇನು ಈ ಚಳವಳಿಯೊಳಗೆ? ತಂದೆಯಂತೆ ಮಕ್ಕಳು. ನೀವು ಸೇರೋದೇನೂ ಆಶ್ಚರ್ಯ ಅಲ್ಲ ಅನ್ನಿರಿ!"

"ತಂದೆಯಂತೆ ಮಕ್ಕಳು ಅನ್ನೋದು ಪೂರಾ ನಿಜ ಇರಲಿಕ್ಕಿಲ್ಲ ದೇಸಾಯರೆ. ನಿಜ ಹೇಳಬೇಕಾದರೆ ನಾನು ಚಳವಳಿಯೊಳಗ ಸೇರಬೇಕೆಂಬ ವಿಚಾರ ನಮ್ಮ ತಂದೆಯ ಮನಸ್ಸಿಗೆ ಬರಲಿಲ್ಲ."

"ಓ! ಹೀಗೊ? ಅದೇಕೆ?"

"ಏಕೋ ಏನೊ. ಅಂತೂ ಅವರಿಗದು ಒಪ್ಪಿಗೆಯಾಗಲಿಲ್ಲ."

"ನಿಮಗಂತೂ ಆ ವಿಚಾರ ಇದೆ ಅನ್ನಿರಿ. ನಿಜ ಹೇಳಬೇಕೆಂದರೆ ನನಗೂ ಆ ವಿಚಾರ ಬಂದಿತ್ತು...." ಎಂದು ನುಡಿದು ದೇಸಾಯಿ ಅವಳ ಮುಖವನ್ನೇ ದೃಷ್ಟಿಸತೊಡಗಿದ.

"ಈಗ ನಾನೇ ಆಶ್ಚರ್ಯಪಡುವ ಪ್ರಸಂಗ..ನಿಮಗೆ ಚಳವಳಿಯ ವಿಚಾರ? ಏನು ಹೇಳುತ್ತೀರಿ ದೇಸಾಯರೆ? ನಿಮಗೆ?"

ದೇಸಾಯಿಯ ಸ್ವಾಭಿಮಾನಕ್ಕೆ ಬಲವಾದ ಆಘಾತವಾದಂತಾಯಿತೇನೊ, ಅವಳ ಈ ಮಾತಿನ ಸರಣಿಯಿಂದ. ತಟ್ಟನೆ ಆತನೆಂದ: "ಏಕೆ ಬರಬಾರದು ನನಗೆ ಈ ವಿಚಾರ ಹೇಮಾವತಿ? ನನಗೇನೊ ದೇಶಪ್ರೇಮ ಇಲ್ಲಾಂತ ತಿಳಿದಿದ್ದೀರಾ?"

"ಛೆ! ಹಾಗಲ್ಲ. ಆದರೆ ನಿಮ್ಮ ತಂದೆಯವರ ದೇಸಾಯಿ ವತನ್....

ಅದರಿಂದ ಹಾಗೆ ಅಂದೆ ಅಷ್ಟೆ. ಏನೂ ತಿಳಿದುಕೋ ಬೇಡ್ರಿ ಮತ್ತೆ...." ಎಂದು ನುಡಿದು ಹೇಮಾ ಮೃದುಹಾಸ್ಯ ಬೀರಿದಳು.

"ನಮ್ಮ ತಂದೆಯವರ ಮಾತು ಬೇರೆ, ನನ್ನ ಮಾತು ಬೇರೆ. ಅವರು ಮೊದಲಿನಿಂದಲೂ ಸರಕಾರಕ್ಕೆ ನಿಷ್ಠಾವಂತರಾಗಿದ್ದವರು. ನನಗೆ ಈ ಸರಕಾರದ ಹಂಗೇನು ? ಹಾಗೆ ಹೇಳಬೇಕೆಂದರೆ ನನಗೆ ಯಾರ ಹಂಗೂ ಇರಬೇಕಾದ ಅಗತ್ಯ ಇಲ್ಲ. ನನ್ನಷ್ಟಕ್ಕೆ ನಾ ಪೂರಾ ಸ್ವತಂತ್ರ ಇದೇನೆ."

"ಯಾರೂ ಪೂರಾ ಸ್ವತಂತ್ರರಲ್ಲ ದೇಸಾಯರೆ. ಈ ಸರಕಾರ ಇರುವವರೆಗೆ ಸ್ವಾತಂತ್ರ್ಯ ಅನ್ನೋ ಮಾತು ಸುಳ್ಳು. ಅದನ್ನು ಹೊಡೆದೋಡಿಸುವುದಕ್ಕಾಗಿಯೆ ಈ ಚಳವಳಿ ಸುರು ಆಯ್ತು. ಇದೇ ಕಡೆಯ ಚಳವಳಿ ನಮ್ಮದು...."

"ಪುಣೆ ಮುಂಬಯಿಯೊಳಗ ಆದ ಲಾಠೀ ಚಾರ್ಜು, ಫೈರಿಂಗ್ ನೋಡಿ ನನಗೂ ಈ ಸರಕಾರದ ಬಗ್ಗೆ ತಿರಸ್ಕಾರ ಬಂದುಬಿಟ್ಟದ ಹೇಮಾವತಿ. ನಿಜ ಹೇಳಬೇಕಾದರೆ ನಾನೂ ಚಳವಳಿಯೊಳಗ ಧುಮುಕಿ ಏನಾದರೂ ಮಾಡಬೇಕಂತ ಮಾಡಿದ್ದೇನೆ. ಆದರೆ ಏನು ಮಾಡಬೇಕು ಅನ್ನೋದು ಗೊತ್ತಿಲ್ಲ."

"ಅಂತೂ ಮಾಡಬೇಕು ಅನ್ನೋ ವಿಚಾರವಾದರೂ ಅದs ಹೌದಲ್ಲೋ ? ಇವತ್ತು ಇರೋ ವಿಚಾರ ನಾಳೆ ಇರೋದಿಲ್ಲ ಕೆಲವರಿಗೆ. ಅದರಲ್ಲೂ ನಿಮಗೇನಪ್ಪ! ದೇಸಾಯರು...." ಎಂದು ಹೇಮಾ ಸಂದೇಹ ವ್ಯಕ್ತಗೊಳಿಸಿದಳು.

ದೇಸಾಯಿಯ ಸ್ವಾಭಿಮಾನವನ್ನು ಮತ್ತೆ ಕೆರಳಿಸಿದಂತಾಯಿತು. ಆತ ಹಟದ ಧ್ವನಿಯಲ್ಲಿ ನುಡಿದ: "ನಾ ಅಂಥ ಚಂಚಲನಲ್ಲ ಹೇಮಾವತಿಯವರೆ, ಬೇಕಾದರೆ ಪರೀಕ್ಷೆ ಮಾಡಿ ನೋಡಿರಿ ನನ್ನ. ಯಾವ ರೀತಿಯಲ್ಲಿ ಬೇಕಾದರೂ ಪರೀಕ್ಷೆ ಮಾಡಬಹುದು. ದೇಶಕ್ಕಾಗಿ ಕೊರಳು ಕೊಯ್ದು ಇಡುವ ಪ್ರಸಂಗ ಬಂದರೂ ತಯಾರಾಗಿದ್ದೀನಿ ನಾನು...."

"ಕೊಯ್ದಿಡುವ ಪ್ರಸಂಗ ಬರಲಿಕ್ಕಿಲ್ಲ. ಆದರೆ ಪೋಲೀಸರ ಬಂದೂಕಿಗೆ, ಬಯನೆಟ್ಟಿಗೆ ಎದೆ ಒಡ್ಡುವ ಪ್ರಸಂಗ ಬರಬಹುದು. ಫಾಸಿ ಹೋಗುವ ಪ್ರಸಂಗವೂ ಬರಬಹುದು. ಎಲ್ಲದಕ್ಕೂ ಸಿದ್ಧವಾಗಿಯೇ ಬರಬೇಕಾಗುತ್ತೆ ಈ ಹೋರಾಟದೊಳಗೆ..."

"ನೀವು ಒಂದು ಮಾತು ಹೇಳಿದರೆ ಯಮನ ದವಡೆಯೊಳಗ ಹೋಗುವದಕ್ಕೂ ಸಿದ್ಧನಾಗ್ತೀನಿ ನಾನು!" ಎಂದು ನಗುತ್ತ ನುಡಿದ ದೇಸಾಯಿ.

ಹೇಮಾವತಿಗೂ ನಗು ಬಂದಿತು. "ನಾ ಹೇಳಿದರೆ ಹೋಗಬೇಕಾದ ಅಗತ್ಯ ಏನೂ ಇಲ್ಲ. ಅಂಥ ಪ್ರಸಂಗ ಬಂದರೆ ಹೋಗಬೇಕಾಗುತ್ತದೆ, ಅಷ್ಟೆ...."

"ನಿಮ್ಮಂಥವರೂ ಎಲ್ಲವಕ್ಕೂ ಸಿದ್ಧವಾಗಿರುವಾಗ ಮೀಸೆ ಹೊತ್ತ ನಮ್ಮಂಥವರು ಸಿದ್ಧವಾಗೋದು ಏನು ದೊಡ್ಡ ಮಾತು ಬಿಡ್ರಿ. ಆದರೆ, ಏನು ಮಾಡಬೇಕು ಅನ್ನೋದೇ ಗೊತ್ತಿಲ್ಲವಲ್ಲ? ಚಳವಳಿಯ ಕಾರ್ಯಕ್ರಮವಾದರೂ ಏನು? ಕುರಿಗಳ ಹಾಗೆ ಜೇಲಿಗೆ ಹೋಗೋದು ಮಾತ್ರ ನನಗೆ ಅಸಹ್ಯ ಅನ್ನಿಸುತ್ತದೆ. ಅದೊಂದನ್ನು ಬಿಟ್ಟು ನಾ ಬೇಕಾದ್ದ ಮಾಡಬಲ್ಲೆ...."

"ನಿಮ್ಮ ತಂದೆಯವರು ವಿರೋಧ ಮಾಡುವರಲ್ಲ? ಅವರಿಗೇನು ಸಮಾಧಾನ ಹೇಳ್ತೀರಿ?"

"ಸಮಾಧಾನ ಹೇಳುವ ಪ್ರಸಂಗವೇ ಬರಲಾರದು. ನಾನು ಅವರಿಗೆ ಭೆಟ್ಟಿಯಾದರಲ್ಲವೆ ಆ ಮಾತು??

"ಮತ್ತೆ? ಭೆಟ್ಟಿಯಾಗದೆ ಹಾಗೇ ಇರ್ತೀರಾ?" ಊರಿಗೆ ಹೋಗೋದೇ ಇಲ್ಲವೆ?"

"ಊರಿಗೆ ಹೋದರೆ ಪಾರಾಗಿ ಬರೂದು ಕಷ್ಟ. ನನ್ನ ಹಾಗೇ ನನ್ನ ತಂದೆ–ಮಹಾ ಹಟದ ಮನುಷ್ಯ. ಅಂತೇ ಈಗ ಬೆಳಗಾವಿಗೆ ಹೋದರೆ ಮುಗೀತು. ಚಳವಳಿ ಮುಗಿಯುವ ತನಕ ಅವರ–ನನ್ನ ಭೆಟ್ಟಿ ಸಾಧ್ಯವೇ ಇಲ್ಲ."

"ಛೆ! ಹಾಗೆ ಮಾಡಬ್ಯಾಡ್ರಿ. ನಿಮ್ಮನ್ನ ಬಿಟ್ಟರೆ ಅವರಿಗೆ ಇನ್ನ್ಯಾರಿದಾರ? ಒಬ್ಬರೇ ಒಬ್ಬ ಮಗ ಅಲ್ಲವೆ ನೀವು?"

"ಇರಬಹುದು. ಆದರೇನು ಮಾಡೋದು? ಬೇರೆ ಉಪಾಯ ಏನೂ ಇಲ್ಲವಲ್ಲ. ಚಳವಳಿಯೊಳಗಾದರೂ ಬೀಳಬೇಕು, ಇಲ್ಲ ಅದರ ಆಸೆ ಬಿಟ್ಟು ಮನೆಗೆ ಹೋಗಿ ಕೂತುಕೋಬೇಕು. ಅಲ್ಲೂ ಹಾಗೇ ಬಿಡುವವರಲ್ಲ ಅವರು. ಕಾಲೇಜು ಬಿಟ್ಟು ಯಾಕೆ ಬಂದೆ, ಹೋಗು ಅಂತ ಒತ್ತಾಯ ಮಾಡಿದರೂ ಮಾಡಿದರೇ. ಇಂಥ ಪ್ರಸಂಗದೊಳಗ ಕಾಲೇಜಿಗೆ ಹೋಗೋದು ಯಾವ ಮೋರೆಯಿಂದ? ನೀವೇ ಹೇಳ್ರಿ. ಅದಕ್ಕೇ ನಿಮ್ಮ ಸಂಗಡ ಇದ್ದುಕೊಂಡು ಚಳವಳಿಯೊಳಗ ಕೆಲಸ ಮಾಡೋದಾದರೆ ಬಹಳ ಒಳ್ಳೇದಾದೀತು...."

"ನೋಡ್ರಿ. ನಿಮ್ಮ ಮನಸ್ಸು ಹ್ಯಾಗಿದೆಯೋ ಹಾಗೆ ಮಾಡ್ರಿ. ನಾನೇನೂ ಒತ್ತಾಯ ಮಾಡೋದಿಲ್ಲ. ಅವರವರ ಮನಸ್ಸು ಗಟ್ಟಿಯಾಗಬೇಕು ಮೊದಲು,

ಈ ವಿಚಾರವನ್ನೆಲ್ಲ ಸರಿಯಾಗಿ ಆಲೋಚನೆ ಮಾಡಿರಿ. ನಾಳೆ ಮಧ್ಯಾಹ್ನ ನಮ್ಮ ಮನೆಯ ಕಡೆಗೆ ಬರ್‍ರಿ. ಮಾತಾಡೋಣ"

"ಹೂಂ, ಬರ್‍ತೇನೆ. ಅಂತೂ ಇಂದು ನಿಮ್ಮ ಭೆಟ್ಟಿ ಆದದ್ದು ಒಳ್ಳೇದಾಯ್ತು. ಇಲ್ಲದಿದ್ದರೆ ನಾನು ಏನೇನು ಮಾಡುತ್ತಿದ್ದೆನೊ ಯಾರಿಗೆ ಗೊತ್ತು? ಗಾಂಧೀ ಟೋಪಿಯವರು, ನಮ್ಮ ಕಡೆಯವರು ಯಾರಾದರೂ ಭೆಟ್ಟಿಯಾದರೆ ಅವರ ಸಂಗಾತ ಸೇರಿಬಿಡಬೇಕೆಂದೂ ವಿಚಾರ ಮಾಡಿದ್ದೆ. ಗಾಡಿಯೊಳಗ ಒಬ್ಬಿಬ್ಬರು ಇದ್ದ ಹಾಗೂ ಇತ್ತು. ಆದರೆ ಅವರು ನನ್ನ ನೋಡುತ್ತಲೂ ಎಲ್ಲೋ ಮಾಯ ಆದರು."

"ನಿಮ್ಮ ಈ ಸೂಟು ನೋಡಿ ಸಂಶಯ ಬಂದಿರಬೇಕು ಅವರಿಗೆ," ಎಂದು ಹೇಮಾ ನಗುತ್ತ ನುಡಿದಳು.

"ಯಾಕೆ? ಈ ವೇಷದೊಳಗೆ ನಾನು ಸಿ. ಐ. ಡಿ. ಕಂಡ ಹಾಗೆ ಕಾಣಿಸುತ್ತೇನೊ ಏನು?" ಎಂದು ಕೌತುಕದಿಂದ ಕೇಳಿದ ದೇಸಾಯಿ.

"ಅಲ್ಲದಿನ್ನೇನು? ಪಕ್ಕಾ ಸಿ. ಐ. ಡಿ. ಇದ್ದ ಹಾಗೆ ಇದ್ದೀರಿ!"

"ಒಂದು ದೃಷ್ಟಿಯಿಂದ ಈ ಡ್ರೆಸ್ಸೂ ಅನುಕೂಲವೇ ಅನ್ನಿರಿ. ನಿಜವಾದ ಸಿ. ಐ. ಡಿ. ಗಳಿಗೆ ನನ್ನ ಬಗ್ಗೆ ಏನೂ ಸಂಶಯ ಬರಲಾರದು. ಎಂಥ ಭಯಂಕರ ಕೆಲಸ ಮಾಡುತ್ತಿದ್ದರೂ ಅವರ ಕೈಯಿಂದ ತಪ್ಪಿಸಿಕೊಳ್ಳಬಹುದಲ್ಲ?"

"ತಪ್ಪಿಸಿಕೊಳ್ಳೋದು ಅಷ್ಟು ಸುಲಭ ಅಂತ ತಿಳೀಬೇಡ್ರಿ. ನಿಮಗಿಂತಲೂ ಭಯಂಕರ ಇರ್‍ತಾರೆ ಆ ಸಿ. ಐ. ಡಿ.ಗಳು!"

"ಓ! ಇರಲಿ. ಇರಲಿ. ನೋಡಿದ್ದೇನೆ ಸಾವಿರ ಜನರನ್ನ. ನಮಗೂ ಸ್ವಲ್ಪ ಬುದ್ಧಿ ಇದೆ!"

"ನಿಮಗೆ ಸ್ವಲ್ಪ ಇದ್ದರೆ ಅವರಿಗೆ ವಿಪರೀತ ಇರುತ್ತದೆ ಅನ್ನೋದನ್ನ ಮರೀಬ್ಯಾಡ್ರಿ...." ಎಂದು ಆಕೆ ಹೇಳುತ್ತಿರುವಾಗಲೇ ರೈಲು ನಿಲ್ದಾಣಕ್ಕೆ ಬಂದು ಸೇರುತ್ತಿದ್ದಿತು.

ಡಬ್ಬಿಯಿಂದಿಳಿದು ದೇಸಾಯಿ ಅವಳನ್ನು ಬೀಳ್ಕೊಂಡ: "Well Good-bye till we meet again!"

"ಬಾಯ್! ಬಾಯ್!" ಎಂದು ನಕ್ಕಳು ಹೇಮಾ.

೪

ಮಧ್ಯರಾತ್ರಿ ಮೀರಿಹೋಗಿದ್ದಿತು.

ಆದರೂ ಹೇಮಾವತಿಗೆ ನಿದ್ರೆ ಬರುವ ಹಾಗಾಗಲಿಲ್ಲ.

ಡಬ್ಬಿಗೆಲ್ಲ ಒಬ್ಬಳೇ ಒಬ್ಬಳು. ಸ್ಥಳದ ಕೊರತೆಯಂತೂ ಇರಲೇ ಇಲ್ಲ. ಸುಖವಾಗಿ ಮಲಗಿಕೊಂಡು ರಾತ್ರಿಯೆಲ್ಲ ನಿದ್ರೆ ಮಾಡಿ ಬೆಳಗಿನಲ್ಲಿ ಬೆಳಗಾವಿಗೆ ಇಳಿಯಬಹುದಾಗಿದ್ದಿತು. ಕೆಳಗಿನ ಬೆಂಚಿನ ಮೇಲೆ ಹಾಸಿಗೆ ಹಾಸಿ ಕೊಂಚ ಕಾಲ ಒರಗಿ ನೋಡಿದ್ದೂ ಆಗಿತ್ತು. ಒಂದರ ಹಿಂದೆ ಇನ್ನೊಂದರಂತೆ ವಿಚಾರ ಗಳು ಬರುತ್ತಿದ್ದುವೇ ವಿನಾ ನಿದ್ರೆಯ ಸುಳಿವೂ ತೋರಲಿಲ್ಲ. ಹಾಸಿಗೆಯ ಮೇಲೊರಗಿಕೊಂಡು ಕಿಟಕಿಯ ಹತ್ತಿರ ತಲೆಯನ್ನಿರಿಸಿ ಕತ್ತಲೆಯಲ್ಲಿ ಎದುರಿಗೆ ಕಾಣುತ್ತಿದ್ದ ಅಸ್ಪಷ್ಟ ನೋಟಗಳ ಮೇಲೆ ಶೂನ್ಯದೃಷ್ಟಿಯನ್ನು ತೇಲಿಬಿಟ್ಟಿದ್ದಳು.

ಮಿರಜ ನಿಲ್ದಾಣದಲ್ಲಿ ರೈಲು ನಿಂತಾಗ ಇನ್ನೊಬ್ಬ ಸೂಟುಧಾರಿ ಯುವಕ ಅವಳನ್ನು ಕಂಡು ಅವಳ ಬಳಿ ಬಂದ. ಪ್ಲಾಟ್‌ಫಾರ್ಮಿನ ಮೇಲೆ ನಿಂತುಕೊಂಡು —"ಓಹ್ಹೊ! ನೀವೂ ಹೊರಟುಬಿಟ್ಟಿರಾ? ಇಷ್ಟು ಬೇಗ?" ಎಂದ. ಹೇಮಾ ನಿಟ್ಟಿಸಿ ನೋಡಿದಳು. ಆತ ಕೀರ್ತಿನಾಥ!

ಇಂಥ ಸಂದರ್ಭದಲ್ಲಿ ಅವನೊಂದಿಗೆ ಮಾತಾಡುವ ಅಪೇಕ್ಷೆ ಆಕೆಗೆ ಸ್ವಲ್ಪವೂ ಇರಲಿಲ್ಲ. ಆ ದಿನ ಸಾಯಂಕಾಲ, ತನ್ನ ತಂದೆಯಿಳಿದುಕೊಂಡ ಆ ಮನೆಯಲ್ಲಿ ನಡೆದ ವಾದವಿವಾದದ ಬಿರುಗಾಳಿ ಮತ್ತೆ ಅವಳೆದುರಿಗೆ ಬೀಸಿ ದಂತಾಯಿತು. ಏನಾದರೂ ಉಪಾಯ ಹೂಡಿ ಅವನಿಂದ ತಪ್ಪಿಸಿಕೊಳ್ಳಬೇಕೆಂದು ಬಗೆದು ಹೇಮಾ ಸ್ವಲ್ಪದರಲ್ಲಿಯೆ ಉತ್ತರವಿತ್ತಳು. "ಹೌದು. ಬೆಳಗಾವಿಗೆ ಹೊರಟಿದ್ದೇನೆ...."

"ಸರಿ. ಒಳ್ಳೇದಾಯ್ತು, ಚಹ ತೆಗೆದುಕೊಳ್ತೀರಾ ಸ್ವಲ್ಪ? ತರಿಸಿ ಕೊಡಲಾ?"

"ಬೇಡ. ಇಂಥ ಹೊತ್ತಿನಲ್ಲಿ ನಾನು ಚಹ ತೆಗೆದುಕೊಳ್ಳೋದಿಲ್ಲ. Thanks."

"ಇಂಥ ಹೊತ್ತು ಅಂದರೇನು? ಬೆಳಗಾಗ್ತಾ ಬಂತು. ತಗೊಳ್ಳಿರಿ, ತಗೊಳ್ಳಿರಿ. ರಾತ್ರಿಯೆಲ್ಲ ಮಲಗೇ ಇಲ್ಲ ಅಂತ ಕಾಣುತ್ತದಲ್ಲ?"

"ಹೌದು. ನಿದ್ರೆ ಬರಲಿಲ್ಲ."

"ಅದಕ್ಕೇ ಹೇಳಿದ್ದು ನಾನು. ಚಹ ತಕ್ಕೊಂಡರೆ ಒಳ್ಳೇದು," ಎಂದು ಹೇಳಿ, ಆತ ಚಹ ತೆಗೆದುಕೊಂಡು ಬರಲು ಉಪಾಹಾರಮಂದಿರದ ಕಡೆಗೆ ಹೊರಟ.

ಅಷ್ಟರಲ್ಲಿ ದೇಸಾಯಿಯೂ ಡಬ್ಬಿಯಿಂದಿಳಿದು ಆವಳ ಹತ್ತಿರ ಬಂದಿದ್ದ. "ನಿದ್ರೆ ಮಾಡಲೇ ಇಲ್ಲವೇನ್ರಿ ಹೇಮಾವತಿ ?"

"ಇಲ್ಲ. ನೀವು ?"

"ನನಗೂ ನಿದ್ರೆ ಬರಲೇ ಇಲ್ಲ. ಹಾಳಾದ್ದು-ಬಾ ಅಂದರೆ ಬರ್ತದೆಯೇ ಅದು ? ಮಹಾ ಖೋಡಿ ! ಚಹ ತಕ್ಕೊಳ್ತೀರಾ ಸ್ವಲ್ಪ ?"

"ಅದನ್ನು ತರಲಿಕ್ಕೇ ಒಬ್ಬರು ಹೋಗಿದಾರೆ ಇದೇ ಈಗ. ಅಲ್ಲಿ ನೋಡ್ರಿ. ಸೂಟು ಹಾಕಿಕೊಂಡು ನಿಂತಿರುವರಲ್ಲ—ಅವರೇ !"

"ಯಾರಪ್ಪಾ ಅವರು ?"

"ನಮ್ಮ ತಂದೆಯವರ ಪರಿಚಯದವರೊಬ್ಬರು. ಬೆಳಗಾವಿಯಲ್ಲೇ ಇದ್ದಾರೆ."

"ಏನು ಕೆಲಸ ಮಾಡ್ತಾರೆ ?"

"ನಿಮ್ಮಂಥ ಕ್ರಾಂತಿಕಾರರನ್ನ ಹಿಡಿಯುವ ಕೆಲಸ !" ಎಂದು ಹೇಮಾ ನಗತೊಡಗಿದಳು.

"ಓಹ್ಹೊ ! ಸಿ. ಐ. ಡಿ. ಏನು ? ನಿಮ್ಮ ತಂದೆಯವರಿಗೂ ಇವರಿಗೂ ಹೇಗೆ ಪರಿಚಯ ? ಕಾಂಗ್ರೆಸ್ ಮುಖಂಡರಿಗೆ ಸಿ. ಐ. ಡಿ. ಗಳ ದೋಸ್ತಿ ಅಂದರೆ ಆಶ್ಚರ್ಯವೇ !"

"ಅದರಲ್ಲೇನು ಆಶ್ಚರ್ಯ ! ಮೊನ್ನೆ ಕಾಂಗ್ರೆಸ್ ಮಂತ್ರಿ ಮಂಡಲ ಅಧಿಕಾರದಲ್ಲಿದ್ದಾಗ ನಮ್ಮ ತಂದೆಯವರೇ ಇವರಿಗೆ ಕೆಲಸ ಕೊಡಿಸಿದರು. ಇಬ್ಬರಿಗೂ ಬಹಳ ವಿಶ್ವಾಸ," ಎಂದು ಆಕೆ ಹೇಳುತ್ತಿರುವಾಗ ದೂರದಲ್ಲಿ ಕೀರ್ತಿನಾಥ ಚಹದ ಕಪ್ಪು ಹಿಡಿದ ಮಾಣಿಯೊಂದಿಗೆ ಬರುತ್ತಿರುವುದನ್ನು ಕಂಡು— "ನೀವೀಗ ಅವರ ಕಣ್ಣಿಗೆ ಬೀಳೋದು ಒಳ್ಳೇದಲ್ಲ. ಚಳವಳಿಯೊಳಗ ಸೇರುವವರು. ಈಗ ಹೊರಟು ಬಿಡ್ರಿ, ನಾಳೆ ಮಧ್ಯಾಹ್ನ ಬರ್ರಿ," ಎಂದು ದೇಸಾಯಿಯನ್ನು ಕಳುಹಿಸಿಕೊಟ್ಟಳು.

ಅವಸರವಸರವಾಗಿ ದೇಸಾಯಿ ಅಲ್ಲಿಂದ ಸಾಗಿಹೋದರೂ ಆ ಚಾಣಾಕ್ಷ ಯುವಕನಿಗೆ ಆತ ಬಂದುಹೋದುದು ಕಾಣಿಸದಿರಲಿಲ್ಲ. ಡಬ್ಬಿಯ ಬಳಿ ಬಂದು

ಚಹ ಕೊಟ್ಟ ತರುವಾಯ ಸಹಜವಾಗಿ ಕೇಳುವವನಂತೆ ಪ್ರಶ್ನೆ ಮಾಡಿದ :
"ಯಾರೋ ಇದೇ ಈಗ ನಿಮ್ಮ ಹತ್ತಿರ ಮಾತಾಡುತ್ತಿದ್ದ ಹಾಗಿತ್ತಲ್ಲ ?"

ಇನ್ನು ಅವನ ಹತ್ತಿರ ಸುಳ್ಳು ಹೇಳಿದರೆ ನಡೆಯಲಾರದೆಂಬುದು ಆಕೆಗೆ ಗೊತ್ತಾಗುತ್ತಲೂ ಆಕೆಯೂ ಸಹಜವಾಗಿ ಹೇಳುವವರಂತೆ ಉತ್ತರ ಕೊಟ್ಟಳು :
"ಓ! ಅವರೆ! ಕಾಲೇಜಿನಲ್ಲಿ ನಮ್ಮ ಸಂಗಡ ಕಲೀತಿದ್ದಾರೆ. ಸಹಜ ಭೇಟಿ ಯಾದರು, ಅಷ್ಟೆ!"

"ಸರಿ, ಸರಿ. ಎಲ್ಲಿಗೆ ಹೊರಟಿದ್ದಾರೆ ?"

"ತಮ್ಮ ಮಾವನ ಮನೆಗೆ ಹೊರಟಿದ್ದಾರಂತೆ, ಪತ್ನಿಯನ್ನು ನೋಡಿ ಬರಲು," ಎಂದು ಬಾಯಿಗೆ ಬಂದ ವಿಚಾರವೊಂದನ್ನು ಆಕೆ ಹೇಳಿಬಿಟ್ಟಳು.

"ಯಾವ ಊರಂತೆ ?"

"ಅದನ್ನವರು ಹೇಳಲಿಲ್ಲ—ಕೇಳುವ ಅಗತ್ಯವಿದೆ ಅಂತ ನನಗೂ ಅನ್ನಿಸ ಲಿಲ್ಲ. ಏನೋ ಕಾಲೇಜಿನ ಗುರುತು. ಅದೂ ಕ್ಷೇಮಸಮಾಚಾರದ ಮಾತಿನ ಮಟ್ಟಿಗೆ."

ಆತನಿಗೆ ಸಮಾಧಾನನಾಗಿರಬೇಕು. ಆ ವಿಷಯವನ್ನು ಅಷ್ಟಕ್ಕೇ ಬಿಟ್ಟು ಬೇರೆ ವಿಷಯವನ್ನೆತ್ತಿಕೊಂಡ :

"ಬೆಳಗಾವಿಯೊಳಗೇ ಇರುವವರೇನು ಹಾಗಾದರ ಇನ್ನು ಮ್ಯಾಲ ?"

"ಸದ್ಯಕ್ಕಂತೂ ಅಲ್ಲಿರಬೇಕು."

"ಮುಂದೆ ?"

"ಯಾವದೂ ನಿರ್ಧಾರ ಇಲ್ಲ."

"ಕಾಲೇಜು ?"

"ಇನ್ನು ಮೂರು ನಾಲ್ಕು ತಿಂಗಳವರೆಗಂತೂ ಕಾಲೇಜು ಸುರು ಆಗು ವಂತಿಲ್ಲ. ಆಮ್ಯಾಲ ನೋಡಬೇಕು."

"ಅದುವರೆಗೂ ಏನು ಮಾಡಬೇಕಂತ ಮಾಡಿದ್ದೀರಿ ಬೆಳಗಾವಿಯೊಳಗ ? ಹೊತ್ತು ಹ್ಯಾಗೆ ಕಳೆಯುತ್ತೀರಿ ?"

"ಬೇಕಾದಷ್ಟು ಜನ ಗೆಳತಿಯರಿದ್ದಾರೆ. ಹೊತ್ತು ಹೋಗುವದೇನು ದೊಡ್ಡದು ?"

"ಓ! ಸರಿ. ಅಂತೂ ಚಳವಳಿಯ ಗೋಜಿಗೆ ಹೋಗದಿದ್ದರೆ ಆಯ್ತು," ಎಂದು ನುಡಿದು ಆತ ಅವಳ ಮುಖವನ್ನೇ ಮಿಕಿಮಿಕಿ ನೋಡತೊಡಗಿದ.

ಚಹ ಕುಡಿದು ಮುಗಿಸಿ ಬಾಯಿ ಒರೆಸುವ ನಿಮಿತ್ತದಿಂದ ಹೇಮಾ ಆ ಕಡೆ ಮುಖ ತಿರುಗಿಸಿದಳು. ಅವನ ಪ್ರಶ್ನೆಯಿಂದಾಗಿ ಅವಳಿಗೆ ಬೇಸರು ಬಂದಿತ್ತು. ಕೋಪವೂ ಬರುವುದರಲ್ಲಿತ್ತು. ತನ್ನ ವಿಚಾರವೆಲ್ಲ ಇವನಿಗೇಕೆ ಬೇಕೊ! ತಾನು ಚಳವಳಿಯಲ್ಲಾದರೂ ಬೀಳಬಹುದು, ದೇಶಾಂತರವಾದರೂ ಹೋಗಬಹುದು. ಅದನ್ನೆಲ್ಲ ಕೇಳಲು ಈತನಾರು? ಈಗಲೂ ತನ್ನ ಮೇಲೆ ಅಧಿಕಾರ ಇರುವ ಹಾಗೆ ಮಾತನಾಡುತ್ತಿದಾನೆ! ಅಂದು, ಮುಂಬಯಿಯಲ್ಲಿ, ತಂದೆಯ ಸಮಕ್ಷಮದಲ್ಲಿ ಸ್ಪಷ್ಟವಾಗಿ ಉತ್ತರ ಕೊಟ್ಟಿದ್ದರೂ ಈತನಿಗೆ ನಾಚಿಕೆಯಿಲ್ಲವಲ್ಲ, ಈ ರೀತಿ ಉಪದ್ವ್ಯಾಪ ಮಾಡುವುದಕ್ಕೆ! ‖"ನನ್ನ ಭವಿತವ್ಯ ನನ್ನ ಕೈಯಲ್ಲಿದೆ. ನಾನೇ ಅದನ್ನು ರೂಪಿಸುವಾಕೆ. ಅನ್ಯರ ಒತ್ತಾಯಕ್ಕೆ ನಾನೆಂದೂ ಬಾಗುವುದಿಲ್ಲ"‖ ಎಂದು ಖಂಡಿತವಾಗಿ ಆಡಿದ್ದರೂ, "ಸದ್ಯಕ್ಕೆ ಮದುವೆಯ ವಿಷಯವನ್ನೇ ಎತ್ತ ಕೂಡದು" ಎಂದು ನಿರ್ಧಾರವಾಗಿ ಹೇಳಿದ್ದರೂ ಈತ ಮತ್ತೆ ಇಲ್ಲದ ಸಲಿಗೆ ಮಾಡುತ್ತಿರುವನಲ್ಲ—ಎಂದುಕೊಂಡಾಗ ಆಕೆಗೆ ಬೇಸರವಾಗದಿದ್ದೀತೇ? ಬೇರೆ ಯಾರಾದರೂ ಆ ರೀತಿ ಕೇಳಿದ್ದಲ್ಲಿ ಆಕೆ ಒಂದು ಮಾತಿನಲ್ಲಿ ಛೀಮಾರಿ ಹಾಕಿ ಕಳುಹಿಸಿಬಿಡುತ್ತಿದ್ದಳೇನೊ. ಆದರೆ ಆತ ಬಲು ದಿನಗಳ ಪರಿಚಯದ ವ್ಯಕ್ತಿಯಾದುದರಿಂದ ದಾಕ್ಷಿಣ್ಯಕ್ಕಾಗಿ ಎಲ್ಲವನ್ನೂ ತಡೆದುಕೊಳ್ಳಬೇಕಾಗಿ ಬಂದಿತ್ತು.

"ನನ್ನ ಅಗತ್ಯವೇನಾದರೂ ಬಿದ್ದರೆ ಮರೆಯದೆ ಹೇಳಿಕಳಿಸಿರಿ. ನಾನು ಬಂದು ಭೆಟ್ಟಿಯಾಗುತ್ತೇನೆ," ಎಂದ ಕೀರ್ತಿನಾಥ.

"ಆಗಲಿ. ಅಗತ್ಯಬಿದ್ದರೆ ನೋಡೋಣ. ಈಗ ನನಗೆ ನಿದ್ರೆ ಬರ್ತಾ ಇದೆ. ಮಲಗಿಕೋಬೇಕು," ಎಂದು ನುಡಿದು ಹೇಮಾ ಕಿಟಕಿಯನ್ನು ಮುಚ್ಚ ತೊಡಗಿದಳು.

ಆತ ಮತ್ತೊಂದು ಮಾತನ್ನೂ ಆಡದೆ ಹೊರಟುಹೋದ.

೫

ಮೇಜಿನ ಮೇಲೆ ಬಾಗಿ ಬರೆಯುತ್ತಿದ್ದ ದೇಸಾಯಿ ತಲೆಯೆತ್ತಿ ಕೈಗಡಿಯಾರವನ್ನು ನೋಡಿಕೊಂಡ.

ರಾತ್ರಿ ಹತ್ತು ಗಂಟೆಯಾಗುತ್ತ ಬಂದಿತ್ತು.

ಕೈಯಲ್ಲಿ ಹಿಡಿದಿದ್ದ ಪೆನ್ಸಿಲನ್ನು ಮೇಜಿನ ಮೇಲಿಟ್ಟು, ಮುಂದೆ ಬಿದ್ದಿದ್ದ ಹಾಳೆಗಳನ್ನೂ, ಕಾರ್ಬನ್ ಕಾಗದಗಳನ್ನೂ ಒಂದೆಡೆ ಸರಿಸಿ, ಆತ ಕುರ್ಚಿಗೆ ಒರಗಿ ಕುಳಿತುಕೊಂಡ. ಬರೆದು ಬರೆದು ಬೆರಳು ನೋಯುತ್ತಿದ್ದುವು. ಕೈ ಸೋತು ಹೋಗಿತ್ತು. ಮಧ್ಯಾಹ್ನ ೫ ಗಂಟೆಯಿಂದ ರಾತ್ರಿ ೧೦ ಗಂಟೆ! ಸತತವಾಗಿ ಐದು ತಾಸುಗಳವರೆಗೆ ಬರೆದದ್ದೇ ಬರೆದದ್ದು! ಮಧ್ಯೆ ಹತ್ತು ಹದಿನೈದು ನಿಮಿಷ ಊಟಕ್ಕೆ ಎದ್ದುದೆಷ್ಟೋ ಅಷ್ಟೆ. ವಿಶ್ರಾಂತಿಯೆಂಬುದೇ ದೊರೆತಿರಲಿಲ್ಲ. ತನ್ನ ಇಪ್ಪತ್ತೊಂಭತ್ತು ವರ್ಷಗಳ ಆಯುಷ್ಯದಲ್ಲೇ ಆತ ಇಷ್ಟು ಗಂಟೆಗಳ ಕಾಲ ಒಂದೆ ಸಮನೆ ಎಂದೂ ಬರೆದಿರಲಿಲ್ಲ. ಅದರಲ್ಲೂ ಪೆನ್ಸಿಲಿನಿಂದ ಕಾರ್ಬನ್ ಪ್ರತಿಗಳನ್ನು ತೆಗೆಯುವ ಈ ಕೆಲಸ! ಅವನಿಗೆ ಸಾಕುಸಾಕೆನ್ನಿಸಿಹೋಗಿತ್ತು. ಆತ ಎರಡು ಕೈಗಳ ಬೆರಳುಗಳನ್ನೂ ಒಂದೆಡೆ ಸೇರಿಸಿ ಲಟಕ್ ಅನ್ನಿಸಿಕೊಂಡ, ಕಾಲುಗಳನ್ನು ನೀಳವಾಗಿ ಚಾಚಿ, ಬೆನ್ನು ಹುರಿಯನ್ನು ಸರಿಪಡಿಸಿಕೊಂಡ, ಬರಿದಾಗುವುದ ರಲ್ಲಿದ್ದ ಡಬ್ಬಿಯಿಂದ ಕೊನೆಯ ಸಿಗರೇಟನ್ನು ತೆಗೆದು ಹೊತ್ತಿಸಿದ, ಹೊಗೆಯನ್ನು ಚಕ್ರಾಕಾರವಾಗಿ ಹೊರಗೆ ಹಾಕುತ್ತ ಎದುರಿಗಿನ ಗೋಡೆಯ ಕಡೆಗೆ ದೃಷ್ಟಿ ತೂರಿದ.

ಗೋಡೆಯ ಮೇಲೆ ನೇತಾಡುತ್ತಿದ್ದ ಮುದುಕ ಗಾಂಧಿಯ ಭಾವಚಿತ್ರ ಅವನ ಅವಸ್ಥೆಯನ್ನು ಗುರುತಿಸಿ ನಕ್ಕಂತಾಯಿತು.

ದೇಸಾಯಿ ಕಣ್ಣು ಮುಚ್ಚಿಕೊಂಡ, ಒಂದು ಸಲ ಬಲವಾಗಿ ಆಕಳಿಸಿದ, ಕುರ್ಚಿಯ ಬೆನ್ನಿಗೆ ಒರಗಿದ್ದ ಹಾಗೇ ಸಿಗರೇಟಿನ ಮಾದಕತೆಯಲ್ಲಿ ದಣಿವನ್ನು ಮರೆಯಿಸಲು ಪ್ರಯತ್ನಿಸತೊಡಗಿದ.

ಆಕಸ್ಮಾತ್ತಾಗಿ ಯಾರೋ ಕೊಟಡಿಯ ಬಾಗಿಲು ತಟ್ಟಿದ ಸದ್ದು ಕೇಳ ಬಂದಿತು. ದೇಸಾಯಿಯ ವಿಶ್ರಾಂತಿಗೆ ಮತ್ತೆ ಭಂಗ ಬರಬೇಕೇ! ಏಳಲಾರದೆ ಆತ ಮೇಲಕ್ಕೆದ್ದ, ಗೊಣಗಿಕೊಳ್ಳುತ್ತಲೇ ಹೋಗಿ ಬಾಗಿಲಿನ ಚಿಲಕವನ್ನು ತೆಗೆದ.

ಒಡನೆಯೇ ಹೃಷ್ಟಪುಷ್ಟ ಶರೀರದ ವ್ಯಕ್ತಿಯೊಂದು ಒಳನುಗ್ಗಿ ಬಂದು ಚಿಲಕ ಹಾಕಿ, ದೇಸಾಯಿಯ ಬಲಗೈಯನ್ನು ಬಿಗಿಯಾಗಿ ಹಿಡಿದುಕೊಂಡಿತು.

ದೇಸಾಯಿಯ ಎಡಗೈಯಲ್ಲಿ ಉರಿಯುತ್ತಿದ್ದ ಸಿಗರೇಟು ತಾನಾಗಿಯೆ ಕಳಚಿ ಕೆಳಕ್ಕುರುಳಿತು. ದಿಗಿಲುಗೊಂಡು ಆತ ಕಣ್ಣರಳಿಸಿ ನೋಡಿದ.

ಪೋಲೀಸ್ ಇನ್ಸಪೆಕ್ಟರ ಹಾಗೆ ವೇಷ ಹಾಕಿ, ಬಲಗೈಯಲ್ಲಿ ಪಿಸ್ತೂಲು ಹಿಡಿದು ಕೊಂಡ ಆ ವ್ಯಕ್ತಿಯನ್ನು ದೃಷ್ಟಿಸುತ್ತಲೂ ಅವನ ಕೈಕಾಲು ನಡುಗಿದಂತಾಯಿತು. ಕೆಲಸಕ್ಕಾರಂಭಿಸಿದ ದಿನವೇ ಸಿಕ್ಕಿಬಿದ್ದಂತಾಯಿತು. ಎಂಥ ದುರ್ದೈವ ತನ್ನದು! ಕರಪತ್ರಗಳು ಬೇರೆ ಎದುರಿನಲ್ಲೇ ಇವೆ. ಮಾಲು ಸಹಿತ ಸಿಕ್ಕಂತಾಯಿತು. ಎಷ್ಟು ಹುರುಪಿನಿಂದ ಚಳವಳಿಗೆ ಸೇರಿದ್ದೆ! ಇಷ್ಟು ಬೇಗ ಹೀಗಾಗ ಬೇಕೇ! ಎಂದುಕೊಂಡಾಗ ದೇಸಾಯಿಗೆ ತುಂಬ ಕಳವಳವಾಯಿತು.

ಆ ವ್ಯಕ್ತಿ ಆತನ ಕೈ ಹಿಡಿದು ತಂದು ಕುರ್ಚಿಯಲ್ಲಿ ಕೂಡ್ರಿಸಿದ; ಮೇಜಿನ ಮೇಲೆ ಬಿದ್ದಿದ್ದ ಕರಪತ್ರಗಳನ್ನು ಒಂದೊಂದಾಗಿ ತೆಗೆದು ಕೈಯಲ್ಲಿ ಹಿಡಿದು ನೋಡಿದ.

"ನೀನೇ ಬರೀತಾ ಇದ್ದಿಯಾ ಇವನ್ನ ?"

ದೇಸಾಯಿ ಒಮ್ಮೆಲೆ ಉತ್ತರವೀಯಲಿಲ್ಲ. ಆ ವ್ಯಕ್ತಿ ಕರಪತ್ರವೊಂದನ್ನು ಹಿಡಿದು ಓದುತ್ತ—"ದುಂದುಭಿ! ಸಂಪಾದಕಿ ಸ್ವಾತಂತ್ರ್ಯದೇವಿ! ಓಹ್ಹೊ! ನೀವೇ ಅಂತ ಕಾಣುತ್ತೈತಿ ಈ ಸಂಪಾದಕಿ? ಹೌದೇನು?" ಎಂದ.

"ಯಾರಾದರೂ ಇರಬಹುದು. ನಿಮಗೇನಾಗಬೇಕಾಗಿದೆ?" ಎಂದ ದೇಸಾಯಿ, ಧೈರ್ಯ ತಂದುಕೊಂಡು.

"ನನಗೇನಾಗಬೇಕಾಗಿದೆ? ಒಳ್ಳೇ ಮಾತೇ ಹೇಳ್ತೀಯಲ್ಲ? ಈ ಕರ ಪತ್ರದಲ್ಲೆಲ್ಲ ಸರಕಾರದ ವಿರುದ್ಧ ಬಂಡುಹೂಡುವ ವಿಷಯವೇ ತುಂಬಿದೆಯಲ್ಲ? ಇದನ್ನೆಲ್ಲ ಬರೆಯುವುದು ಅಪರಾಧ ಅನ್ನೋದು ಗೊತ್ತಿಲ್ಲೇನು ನಿನಗೆ?"

"ನಿನಗೆ ಅಂತ ಏಕವಚನದಲ್ಲಿ ಮಾತಾಡುವ ಅಗತ್ಯ ಇಲ್ಲ. ಮರ್ಯಾದೆಯಿಂದ ಮಾತಾಡಿರಿ ಮೊದಲು!" ಎಂದು ರೋಷದಿಂದ ನುಡಿದ ದೇಸಾಯಿ. ಅವನ ಹೆದರಿಕೆಯೆಲ್ಲ ಮಾಯವಾಗಿ ಆವೇಶ ಬಂದಂತಾಗಿದ್ದಿತು.

"ಮರ್ಯಾದೆ! ಹೋ! ಹೋ" ಎಂದು ಗಟ್ಟಿಯಾಗಿ ನಕ್ಕುಬಿಟ್ಟು ಆ ವ್ಯಕ್ತಿಯೆಂದ: "ಆಗಲಿ, ಸರಕಾರ್! ಹಾಗೇ ಆಗಲಿ. ಈ ಕೆಲಸಕ್ಕೆ ನಿಮ್ಮನ್ನು ಹಚ್ಚಿದ ಆ ಸ್ವಾತಂತ್ರ್ಯದೇವಿ ಎಲ್ಲಿದ್ದಾಳೆ ಹೇಳಿ ಮೊದಲು!"

"ಬೇರೆಯವರ ಸುದ್ದಿ ನನಗ್ಗೊತ್ತಿಲ್ಲ. ಈ ಕೆಲಸಕ್ಕೆ ನನ್ನ ಯಾರೂ ಹಚ್ಚಿಲ್ಲ. ನಾನೇ ಸ್ವಂತ ಖುಷಿಯಿಂದ ಮಾಡುತಾ ಇದೇನೆ."

"ಈ ಸುಳ್ಳೆಲ್ಲಾ ನನ್ನ ಮುಂದ ನಡಿಯೂದಿಲ್ಲರಿ, ರಾವಸಾಹೇಬರೇ.

ಇದೇ ಜಿಲ್ಲೆಯೊಳಗ ಐದು ವರ್ಷ ಕೆಲಸಮಾಡಿದ ಸಿ. ಐ. ಡಿ. ಇನಸ್ಪೆಕ್ಟರ್ ನಾನು ಅನ್ನೋದನ್ನ ತಿಳಿದುಕೊಂಡು ಮಾತಾಡಿರಿ. ಇದು ಶಾಮರಾಯರ ಮನೆ. ಅವರ ಮಗಳು ಹೇಮಾವತೀಬಾಯಿ ನಿನ್ನೆ ಇಲ್ಲಿಗೆ ಬಂದಿದ್ದಾರೆ— ಎಲ್ಲಾ ನಮಗೆ ಗೊತ್ತೈತಿ. ನೀವೂ ಅವರೂ ಕೂಡೇ ಪುಣೆಯಿಂದ ಬಂದಿರಿ ಅನ್ನೋದೂ ನಮಗ ಗೊತ್ತೈತಿ. ಇಲ್ಲಿ ನಿಮ್ಮನ್ನ ಈ ಕೆಲಸಕ್ಕೆ ಹಚ್ಚಿ ಎಲ್ಲಿ ಹೋಗಿದಾರ ಅವರು ? ಹೇಳ್ರಿ. ಲಗೂ ಹೇಳ್ರಿ. ಯಾರ ಮನೆಯಲ್ಲಿದಾರ ಅವರು ?"

ದೇಸಾಯಿ ಸ್ತಂಭೀಭೂತನಂತೆ ಅವಾಕ್ಕಾಗಿ ಕುಳಿತುಕೊಂಡಿದ್ದ. ಅವನ ಬಾಯಿಂದ ಮಾತೇ ಹೊರಡುವಂತಿರಲಿಲ್ಲ. ತನ್ನ ಮತ್ತು ಹೇಮಾವತಿಯ ಸಮಾಚಾರವನ್ನೆಲ್ಲ ಒಂದನ್ನೂ ಬಿಡದೆ ತಿಳಿದುಕೊಂಡಿದ್ದಾರೆ ಪೋಲೀಸರು. ಇನ್ನು ಅವರಿಗೆ ಸುಳ್ಳು ಹೇಳಿ ಪಾರಾಗುವುದು ಅಸಾಧ್ಯದ ಮಾತೇ ಸರಿ. ತನ್ನ ಕತೆಯಂತೂ ಇಲ್ಲಿಗೇ ನಿಂತಂತಾಯಿತು. ಹೇಮಾವತಿಯ ಸಂಬಂಧ ಮಾತ್ರ ಇಲ್ಲಿ ಬರದಿದ್ದರೆ ಸರಿ. ಸುದೈವದಿಂದ ಆಕೆಯೂ ಮನೆಯಲ್ಲಿಲ್ಲ. ಎಲ್ಲಿಗೋ ಹೋಗಿದ್ದಾಳೆ. ನಾಳೆ ಬೆಳಗಿನ ಜಾವದಲ್ಲಿ ಬರುವುದಾಗಿ ಹೇಳಿದ್ದಳು. ಸರಿ. ಹೇಮಾ ಉಳಿದುಕೊಂಡಂತಾಯಿತು. ನಾನಿಲ್ಲಿ ಇಲ್ಲದಿರುವುದನ್ನು ಕಂಡು ಆಕೆ ನಡೆದುದೆಲ್ಲವನ್ನೂ ಊಹಿಸಿಕೊಂಡಾಳು. ಆಮೇಲೆ ತಾನೂ ಎಚ್ಚೆತ್ತುಕೊಂಡು ತಲೆಮರೆಸಿಕೊಂಡಾಳು.

"ಹೂಂ. ಮಾತನಾಡು ! ಎಲ್ಲಿದಾರೆ ಹೇಮಾಬಾಯಿ ?" ಎಂದು ಗದರಿಸಿದ ಆ ವ್ಯಕ್ತಿ.

ಆತನನ್ನು ಕಿಡಿಗಣ್ಣಿನಿಂದ ದೃಷ್ಟಿಸುತ್ತ ದೇಸಾಯಿ ದೃಢಸ್ವರದಲ್ಲಿ ನುಡಿದ : "ನನಗೊತ್ತಿಲ್ಲ."

"ನಿಮ್ಮಂಥ ಸಾವಿರಾರು ಹುಡುಗರನ್ನು ಮಣಿಸಿ ಬಾಯಿ ಬಿಡಿಸಿದ್ದೇನೆ ನಾನು. ನೀವೂ ಬಾಯಿ ಬಿಡುತ್ತೀರಿ. ಇದೋ ಈ ನನ್ನ ಕೈಯಲ್ಲಿರೋದು ಏನು ಗೊತ್ತೋ ?" ಎಂದನಾತ ಪಿಸ್ತೂಲನ್ನು ತೋರಿಸುತ್ತ.

"ಗೊತ್ತು, ಗೊತ್ತು," ಎಂದು ತಿರಸ್ಕಾರದಿಂದ ನುಡಿದ ದೇಸಾಯಿ.

ಪಿಸ್ತೂಲನ್ನು ದೇಸಾಯಿಯ ಹಣೆಗೆ ಗುರಿಯಿಟ್ಟು ಹಿಡಿದು ಆ ವ್ಯಕ್ತಿ ನುಡಿದ ! "ಇನ್ನು ಮೂರು ನಿಮಿಷ ಕೊಡ್ತೇನೆ ನಿಮಗೆ. ಅಷ್ಟರೊಳಗಾಗಿ

ಆ ಬಾಯಿಯವರ ಸುದ್ದಿ ತಿಳಿಸಿದರೆ ಸರಿ. ಇಲ್ಲಾಂದ್ರೆ ಇದು ನಿಮ್ಮ ಕತೆ ತೀರಿಸಿಬಿಡುತ್ತದೆ. ಹೂಂ. ವಿಚಾರ ಮಾಡ್ರಿ. ಮೂರ್ಖತನ ಮಾಡಬ್ಯಾಡ್ರಿ. ಅವರೆಲ್ಲಿದಾರಸ್ನೂದು ಹೇಳಿಬಿಟ್ಟರ ನಿಮಗೇನಾಗುತ್ತೈತಿ ?"

"ಆಗಲೇ ಹೇಳಿದೆನಲ್ಲ—ನಾನೊಬ್ಬನೇ ಈ ಕೆಲಸ ಮಾಡಿದ್ದೀನಿ ಅಂತ. ಅದಕ್ಕಿಂತ ಹೆಚ್ಚಿಗೆ ನನ್ನಿಂದ ಏನೂ ತಿಳಿದುಕೊಳ್ಳಲಾರಿರಿ ನೀವು !"

"ಹೇಳಿಬಿಡ್ರಿ ರಾಯರೆ ! ಇನ್ನೂ ಎಳೇ ವಯಸ್ಸು ನಿಮ್ಮದು. ಯಾಕ ಸಾಯ್ತೀರಿ ಸುಮ್ಮನೆ ?"

—ಯಾಕೆ ಸಾಯುತ್ತೀರಿ ಸುಮ್ಮನೆ !

ದೇಸಾಯಿಯ ತಲೆಯಲ್ಲಿ ದುಮುದುಮಿಸತೊಡಗಿತು ಆ ಪ್ರಶ್ನೆ. ಅದ ರೊಂದಿಗೆ ತನ್ನ ಊರು, ತನ್ನ ತಂದೆ, ತನ್ನ ಆಸ್ತಿಪಾಸ್ತಿ ತನ್ನ ಕಾಲೇಜು ಜೀವನ ಎಲ್ಲವೂ ನೆನಪಿಗೆ ಬಂತು. ತಾನಿನ್ನೂ ತೀರ ಚಿಕ್ಕವನಾಗಿದ್ದಾಗ ಗತಿಸಿಹೋದ ತಾಯಿಯ ನೆನಪೂ ಬಂದಿತು. ಆಕೆ ಹೋದ ಮೇಲೆ ತಾನೇ ತಾಯಿಯಾಗಿ, ತಾನೇ ತಂದೆಯಾಗಿ, ಎಲ್ಲವೂ ಆಗಿ ಅಕ್ಕರೆಯಿಂದ ಸಾಕಿ ಬೆಳೆಸಿದ ತಂದೆ! ತನ್ನನ್ನು ಬಿಟ್ಟರೆ ಬೇರಾರೂ ಇಲ್ಲ ಅವರಿಗೆ. ಅವರ ಆಸೆ, ಆಕಾಂಕ್ಷೆ ಎಲ್ಲವೂ ತಾನೊಬ್ಬನೇ. ಆ ಅಪಾರ ಆಸ್ತಿಗೆಲ್ಲ ಒಡೆಯ ತಾನೊಬ್ಬನೇ! ಹಳ್ಳಿಯಲ್ಲಿನ ಆ ಭವ್ಯವಾದ ವಾಡೆ, ಅಲ್ಲಿನ ಕುದುರೆಗಳು, ಆಳುಕಾಳುಗಳು ; ಕಾಲೇಜು ಅಲ್ಲಿನ ರಮ್ಯ ವಾತಾವರಣ, ಪುಣೆಯ ಸುಂದರ ಜೀವನ....ಎಲ್ಲವೂ ಇನ್ನು ತನ್ನ ಪಾಲಿಗೆ ಸುಳ್ಳು. ಪಿಸ್ತೂಲಿನಿಂದ ಒಂದು ಗುಂಡು ಹಾರಿದರೆ ತೀರಿತು—ತನ್ನ ಆಯುಷ್ಯ ಮುಗಿದಂತಾಯಿತು. ಇಪ್ಪತ್ಮೂರು ವರ್ಷಕ್ಕೇ ಬಾಳಿನ ಇತಿಶ್ರೀಯೆ ? ಇಂಥ ಹಚ್ಚ ಹೊಸ ಹರಯದಲ್ಲಿ ? "ಯಾಕೆ ಸಾಯ್ತೀರಿ ಸುಮ್ಮನೆ ?" ಎಂಥ ಪ್ರಶ್ನೆ ಅದು !

"ಒಂದು ನಿಮಿಷ ಮುಗೀತು. ಇನ್ನು ಎರಡೇ ನಿಮಿಷ. ಅಷ್ಟರೊಳಗಾಗಿ ಹೇಳಬೇಕು," ಎಂದು ಕೂಗಿದ ಆ ವ್ಯಕ್ತಿ.

ಹೇಳುವುದೇ ? "ಛೆ ! ಎಂದೆಂದಿಗೂ ಸಾಧ್ಯವಿಲ್ಲ ಅದು. ಏನು ಬಂದರೂ ಎಲ್ಲವನ್ನೂ ತಾನೇ ಅನುಭವಿಸುವುದು, ಹೇಮಾವತಿಯ ಹೆಸರನ್ನು ಎಳೆದು ವಿಶ್ವಾಸಘಾತ ಮಾಡುವುದುಂಟೇ ?" ಎಂದು ಒಂದು ಮನಸ್ಸು ಹೇಳಿದರೆ, ಇನ್ನೊಂದು ಮನಸ್ಸು, "ಅಂತೂ ಹೇಗಾದರೂ ಇಲ್ಲಿಂದ ಪಾರಾಗಬೇಕು

ದೇಸಾಯಿ. ಈಗಲೇ ಈ ಪಿಸ್ತೂಲಿಗೆ ಸಿಕ್ಕು ಸತ್ತರೇನು ಬಂದೀತು ? ಇನ್ನೂ ಚಳವಳಿಗಾರಂಭವಾಗಿ ಒಂದು ವಾರವಾಗಿಲ್ಲ. ನೀನು ಕೆಲಸಕ್ಕಾರಂಭಿಸಿ ಹನ್ನೆರಡು ಗಂಟೆ ಕೂಡ ಮುಗಿದಿಲ್ಲ. ನಿನ್ನಿಂದ ಅಂಥ ಮಹಾ ಕೆಲಸವೂ ಏನೂ ಆಗಲಿಲ್ಲ. ನೂರಿಪ್ಪತ್ತು ಕರಪತ್ರ ಬರೆದು ಸತ್ತುಹೋಗಬೇಕೆ ? ಇನ್ನೂ ನೀನು ಮಾಡಬೇಕಾದ ಕೆಲಸ ತುಂಬ ಇದೆ. ಅದನ್ನೆಲ್ಲ ಮಾಡದೆ ಸಾಯುತ್ತೀಯಾ ?" ಎಂದು ಅವನ ಯೋಚನೆಗಳನ್ನು ಬೇರೆ ದಾರಿಗೆ ಎಳೆಯುತ್ತಿತ್ತು.

"ಎರಡು ನಿಮಿಷ ಮುಗೀತು. ಇನ್ನು ಒಂದೇ ಒಂದು ನಿಮಿಷ.... ಅಷ್ಟರೊಳಗಾಗಿ ಹೇಳಿದರೆ ಸರಿ. ಇಲ್ಲಾಂದರೆ...." ಎಂದ ಆ ವ್ಯಕ್ತಿ ಕೈ ಗಡಿಯಾರ ನೋಡಿಕೊಳ್ಳುತ್ತ.

—ಇಲ್ಲಾಂದರೆ ? ಮುಗಿದ ಹಾಗೇ ತನ್ನ ಜೀವನ. ಹೋ ! ಮುಗಿದರೆ ಮುಗಿಯಿತು. ಇನ್ನೇನು ಮಾಡುವುದು ? ಬೇರಾವ ಉಪಾಯವೂ ಇಲ್ಲ. ತನ್ನ ಹತ್ತಿರವೂ ಏನಾದರೂ ಇದ್ದಿದ್ದರೆ....!

ಒಂದು ರಿವಾಲ್ವರ್ ಇದ್ದಿದ್ದರೆ ಇವನಿಗೆ ಸರಿಯಾದ ಉತ್ತರ ಕೊಡಬಹುದಾಗಿತ್ತು. ತಮ್ಮೂರಿನಲ್ಲಾದರೂ ತಾನು ಇದ್ದಿದ್ದರೆ ಆ ಮಾತು ಬೇರೆಯಾಗುತ್ತಿತ್ತು. ಒಂದಲ್ಲ, ಎರಡಲ್ಲ, ಮೂರು ಬಂದೂಕಗಳಿವೆ ಅಲ್ಲಿ. ಆದರೆ ....ಈಗ ಮಾತ್ರ ತನ್ನ ಹತ್ತಿರ ಒಂದೂ ಇಲ್ಲ. ಹೇಮಾವತಿಯ ಸುದ್ದಿಯನ್ನಂತೂ ಎತ್ತುವಂತಿಲ್ಲ. ಈತನೋ ಅವಳ ವಿಷಯ ಹೇಳದಿದ್ದರೆ ಬಿಡುವಂತಿಲ್ಲ. ಕಾಯದೆ, ಕಾನೂನು ಎಲ್ಲವನ್ನೂ ಗಾಳಿಗೆ ಹಾರಿಸಿಬಿಟ್ಟು ತಾನೇ ನ್ಯಾಯಾಧೀಶನಾಗಿ, ತಾನೇ ಕೊಲೆಗಡುಕನಾಗಿ ಕುಳಿತಿದ್ದಾನೆ ಇಲ್ಲಿ. ಬ್ರಿಟಿಷರ ರಾಜ್ಯ. ಅದರಲ್ಲಿ ಆಗಸ್ಟ್ ಕ್ರಾಂತಿಯ ಕಾಲ. ಪೋಲೀಸರನ್ನು ಕೇಳುವವರಾರೂ ಇಲ್ಲ. ಇವರು ಮಾಡಿದ್ದೇ ನ್ಯಾಯ ! ತನ್ನನ್ನು ತೆಗೆದುಕೊಂಡು ಕೋರ್ಟಿಗೊಯ್ಯುವುದನ್ನು ಬಿಟ್ಟು ಇಲ್ಲಿ ಪಿಸ್ತೂಲು ಹಿಡಿದು ಕುಳಿತಿದ್ದಾನೆ. ಇನ್ನೊಂದೇ ಒಂದು ನಿಮಿಷ....ಅನಂತರ ನಿಜಕ್ಕೂ ಗುಂಡು ಹಾರುವುದು, ತನ್ನ ಹಣೆಯನ್ನು ಭೇದಿಸಿಕೊಂಡು ಹೋಗುವುದು. ಆಗಲಿ. ಇಂದೇ ತನ್ನ ಆಯುಷ್ಯ ಮುಗಿಯಬೇಕೆಂಬ ಸಂಕಲ್ಪ ಇದ್ದರೆ ಹಾಗೇ ಆಗಲಿ. ಏನೋ ಒಂದಿಷ್ಟು ಕೆಲಸ ಮಾಡಿದ್ದಾಯಿತು. ಇಷ್ಟರಲ್ಲೇ ಇವರ ಕೈಗೆ ಸಿಕ್ಕಬಹುದೆಂದು ತಾನೆಣಿಸಿಕೊಂಡಿರಲಿಲ್ಲ. ಸಿಕ್ಕಿದ್ದಾಯಿತು. ಈಗ ಪಾರಾಗಲೂ ಸಾಧ್ಯವಿಲ್ಲ. ಕೊನೆಯ ನಿಮಿಷವೂ ಹತ್ತಿರ

ಬಂತೇನೊ....ತನ್ನ ಜೀವನದ ಕೊನೆಯ ನಿಮಿಷ....ದೇಸಾಯಿ ತನ್ನ ಕಣ್ಣು ಗಳೆರಡನ್ನೂ ಮುಚ್ಚಿಕೊಂಡ. ಮನಸ್ಸಿನಲ್ಲಿಯೆ ತನ್ನ ತಾಯಿಯನ್ನೂ ತಂದೆ ಯನ್ನೂ ಸ್ಮರಿಸಿಕೊಂಡ.

"ಟೈಂ ಆಯಿತು. ಈಗಲಾದರೂ ಹೇಳ್ತೀರೋ—ಇಲ್ಲ ಹೊಡೀಲೋ?"

ದೇಸಾಯಿ ಕಣ್ಣು ತೆರೆದು ಆತನನ್ನು ತೀಕ್ಷ್ಣವಾಗಿ ದೃಷ್ಟಿಸುತ್ತ ದೃಢ ಸ್ವರದಲ್ಲಿ ನುಡಿದ: "ನೀವು ನನ್ನಿಂದ ಏನನ್ನೂ ತಿಳಿದುಕೊಳ್ಳಲಾರಿರಿ. ನಿಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು. ನಾನು ಸಿದ್ಧನಾಗಿದ್ದೇನೆ."

"ಓಹ್ಹೊ! ಇಷ್ಟು ಸೊಕ್ಕೇನು? ಈಗ ತಿಳೀತೈತಿ ತಡೀರಿ!" ಎಂದು ಹೇಳಿ ಆ ವ್ಯಕ್ತಿ ಪಿಸ್ತೂಲಿನ ಕುದುರೆಯ ಮೇಲೆ ಬೆರಳನ್ನಿರಿಸಿದ. ದೇಸಾಯಿ ಎವೆಯಿಕ್ಕದೆ ಅದನ್ನೇ ನೋಡುತ್ತಿದ್ದ. ಆ ಕುದುರೆಯನ್ನು ಹಿಡಿದು ಒತ್ತಿದರೆ ಸಾಕು, ಗುಂಡು ಹಾರುವುದು. ಒಳಗಡೆ ಆ ಗುಂಡಿನ ರೂಪದಲ್ಲಿದ್ದ ಯಮದೂತ ತನ್ನ ಮೇಲೆರಗಲು ಸಿದ್ಧನಾಗುತ್ತಿದ್ದಂತೆ ತೋರಿತು ದೇಸಾಯಿಗೆ. ಆತನ ಕಣ್ಣು ಗಳೆರಡೂ ತಾವಾಗಿಯೆ ಮುಚ್ಚಿಕೊಂಡುವು.

ಇನ್ನೇನು ಗುಂಡು ಹಾರಬೇಕು....

ಅಷ್ಟರಲ್ಲಿಯೆ—

ಬಾಗಿಲಿನ ಮೇಲೆ ಯಾರೋ ಧಡಧಡನೆ ಬಡೆಯುತ್ತಿದ್ದ ಸದ್ದು ಕೇಳ ಬಂದಿತು.

ಸಾವನ್ನೆದುರಿಸಲು ಸಿದ್ಧನಾಗಿದ್ದ ದೇಸಾಯಿ ಮತ್ತೆ ಕಣ್ಣು ತೆರೆದ, ವಿಸ್ಮಯ ದಿಂದ ಸುತ್ತಲೂ ದಿಟ್ಟಿಸಿ ನೋಡಿದ.

ಅಷ್ಟರಲ್ಲಿಯೇ ಬಾಗಿಲು ತೆರೆಯಲ್ಪಟ್ಟದ್ದಿತು. ಆ ವ್ಯಕ್ತಿಯೆ ಹೋಗಿ ಬಾಗಿಲನ್ನು ತೆರೆದು ಬಂದಿದ್ದ. ಅವನ ಪಿಸ್ತೂಲು ಮೇಜಿನ ಮೇಲೆ ಬಿದ್ದು ಕೊಂಡಿದ್ದಿತು. ಒಳಕ್ಕೆ ಬಂದಿದ್ದ ಹೇಮಾನತಿ ಬಿದ್ದು ಬಿದ್ದು ನಗುತ್ತಿದ್ದುದು ಕಾಣಿಸುತ್ತಲೂ ದೇಸಾಯಿ ಆಶ್ಚರ್ಯದಿಂದ ಎದ್ದು ನಿಂತು ಕಂಪಿಸುವ ಸ್ವರದಲ್ಲಿ ಉದ್ಗಾರ ತೆಗೆದ:

"ಹೇಮಾ! ನೀನು? ಇಲ್ಲಿ?"

೬

ನಗುವುದನ್ನು ನಿಲ್ಲಿಸಿ ಹೇಮಾ ದೇಸಾಯಿಯ ಬಳಿ ಬಂದಳು, ಅವನ ಕೈಗಳೆರಡನ್ನೂ ತನ್ನ ಕೈಗಳಲ್ಲಿ ಹಿಡಿದು ಕುಲುಕಿಸುತ್ತ—"ಅಂತೂ ನಮ್ಮ ಪರೀಕ್ಷೆಯೊಳಗೆ ಪಾಸಾದಿರಿ ನೀವು, ಮಿಸ್ಟರ್ ದೇಸಾಯಿ. ಫಸ್ಟ್ ಕ್ಲಾಸಿನಲ್ಲಿ ಪಾಸಾದಿರಿ!" ಎಂದಳು.

"ಬರೀ ಫಸ್ಟ್ ಕ್ಲಾಸ್ ಅಲ್ಲ, ಫಸ್ಟ್ ಕ್ಲಾಸ್ ಫಸ್ಟ್ ಬಂದಿದ್ದೀರಿ!" ಎಂದ ಆ ಪೋಲೀಸು ವೇಷಧಾರಿ, ದೇಸಾಯಿಯ ಬೆನ್ನು ಚಪ್ಪರಿಸುತ್ತ.

ದೇಸಾಯಿ ದಿಙ್ಮೂಢನಂತೆ ಕುರ್ಚಿಯಲ್ಲಿ ಕುಳಿತಿದ್ದ. ಅವರಿಬ್ಬರ ಮಾತು ಗಳಲ್ಲಿ ಯಾವುದೂ ಅವನಿಗೆ ಅರ್ಥವಾಗಲಿಲ್ಲ. ಏನು ಪರೀಕ್ಷೆ, ಎಂಥ ಪರೀಕ್ಷೆ, ಕ್ಲಾಸು ಎಂಥದು, ನಂಬರು ಎಂಥದು ಯಾವುದೂ ಅವನಿಗೆ ತಿಳಿಯಲಿಲ್ಲ. ಹೇಮಾವತಿ ಹಠಾತ್ತಾಗಿ ಕೊಟಡಿಗೆ ಬಂದುದು, ಆ ಪೋಲೀಸು ಅಧಿಕಾರಿ ಪಿಸ್ತೂಲನ್ನು ಕೆಳಕ್ಕಿರಿಸಿ ಅವಳನ್ನು ಸ್ವಾಗತಿಸಿದುದು, ಅನಂತರದ ಈ ನಗು, ಈ ಮಾತು....!

ಅಕಸ್ಮಾತ್ತಾಗಿ ಅವನಿಗೆ ರೈಲಿನಲ್ಲಿ ಹೇಮಾವತಿಯೊಂದಿಗೆ ತಾನು ಆಡಿದ ಮಾತೊಂದು ಜ್ಞಾಪಕಕ್ಕೆ ಬಂತು. ತಾನೂ ಚಳವಳಿಗೆ ಸೇರುವುದಾಗಿ ಹೇಳಿ ದ್ದಾಗ ಆಕೆ ಸಂದೇಹ ವ್ಯಕ್ತಗೊಳಿಸಿದ್ದಳು. ಅದರಿಂದಾಗಿ ತನ್ನ ಸ್ವಾಭಿಮಾನ ಸಿಡಿದೆದ್ದಿತ್ತು. "ನಾ ಅಂಥ ಚಂಚಲನಲ್ಲ ಹೇಮಾವತಿ! ಬೇಕಾದರೆ ಪರೀಕ್ಷೆ ಮಾಡಿ ನೋಡಿರಿ ನನ್ನ!" ಎಂದು ಆಹ್ವಾನ ಕೊಟ್ಟಿದ್ದ. ಅದಕ್ಕೆ ಆಕೆ— "ಪೋಲೀಸರ ಬಂದೂಕಿಗೆ, ಬಯನೆಟ್ಟಿಗೆ ಎದೆ ಕೊಡುವ ಪ್ರಸಂಗ ಬಂದರೂ ಬರ ಬಹುದು" ಎಂದು ನುಡಿದಿದ್ದಳು. ಇಷ್ಟು ಬೇಗ ತಾನು ಆ ಪರೀಕ್ಷೆಗೆ ಗುರಿ ಯಾಗಬೇಕಾಗಿ ಬರಬಹುದೆಂಬುದು ತನ್ನ ಕನಸುಮನಸಿನಲ್ಲೂ ಬಂದಿರಲಿಲ್ಲ. ಎಂಥ ಚಾಣಾಕ್ಷ ಹುಡುಗಿ ಈ ಹೇಮಾ! ಪುಣೆಯಲ್ಲಿ ಪಾತರಗಿತ್ತಿಯಂತೆ ಮೆರೆಯುತ್ತಿದ್ದ ಈ ಯುವತಿಯಲ್ಲಿ ಇಂಥ ಕುಶಲ ಬುದ್ಧಿ ಅವಿತಿರಬಹುದೆಂದು ಯಾರು ಊಹಿಸಿದ್ದರು! ಈ ಪರೀಕ್ಷೆ! ಅಗ್ನಿಪರೀಕ್ಷೆಗಿಂತ ಕಡುತರವಾದ ಈ ಪರೀಕ್ಷೆ! ಅದರಲ್ಲಿ ತಾನೂ ಉತ್ತೀರ್ಣನಾದೆನಲ್ಲ! ಸ್ವಲ್ಪವೂ ಎಡವಲಿಲ್ಲ, ತಡವರಿಸಲಿಲ್ಲ. ವಿಶ್ವಾಸಘಾತ ಮಾಡುವ ವಿಚಾರವೂ ತನ್ನೆದೆಯಲ್ಲಿ ಸುಳಿಯ ಲಿಲ್ಲ. ತನ್ನ ಚಾರಿತ್ರ್ಯ ಇಷ್ಟು ದೃಢವಾಗಿರಬಹುದೆಂದು ತನಗೇ ತಿಳಿದಿರಲಿಲ್ಲವಲ್ಲ

ಇದುವರೆಗೆ ! ದೇಸಾಯಿಗೆ ತನ್ನ ಬಗೆಗೆ ತನ್ನಲ್ಲಿಯೇ ಪೂರ್ಣಾಭಿಮಾನ ಉಕ್ಕೇರಿತು. ಹೇಮಾವತಿಯ ದೃಷ್ಟಿಯಲ್ಲಿ ತನ್ನ ವ್ಯಕ್ತಿತ್ವ ಮೊದಲಿಗಿಂತ ಎಷ್ಟೋ ಪಾಲು ಉಚ್ಚವಾಗಿರಬಹುದೆಂಬುದನ್ನು ನೆನೆಯುತ್ತಲೂ ಅವನಿಗೆ ಹಿಡಿಸಲಾರದಷ್ಟು ಹರ್ಷವಾಯಿತು.

ಮೇಜಿನ ಸುತ್ತಲೂ ಕುರ್ಚಿಗಳನ್ನು ಹಾಕಿಕೊಂಡು ಎಲ್ಲರೂ ಕುಳಿತುಕೊಂಡರು. ದೇಸಾಯಿಗೆ ಅಪರಿಚಿತನಾದ ಪೋಲೀಸು ವೇಷಧಾರಿ ಶೇಖರನ ವಿಚಾರವನ್ನು ವಿವರವಾಗಿ ತಿಳಿಸಿದಳು ಹೇಮಾ. ಹಾಗೇ ಅವನಿಗೂ ದೇಸಾಯಿಯ ಬಗೆಗೆ ಸ್ವಲ್ಪದರಲ್ಲಿಯೆ ವಿವರಿಸಿದಳು.

"ನಿಮ್ಮನ್ನು ಪರೀಕ್ಷೆ ಮಾಡಿ, ಅದರಲ್ಲಿ ನೀವು ಪಾಸಾದರೆ ಮಾತ್ರ ನಿಮ್ಮನ್ನು ನಮ್ಮ ಗುಂಪಿನೊಳಗೆ ಸೇರಿಸಿಕೊಳ್ಳಬೇಕಂತ ಮಾಡಿದ್ದೆವು. ಹೊಸಬರನ್ನು ಹಾಗೇ ಸೇರಿಸಿಕೊಳ್ಳೋದು ಒಳ್ಳೇದಲ್ಲ ಅಂತ....ನೀವೇನೂ ತಿಳಿದುಕೊಳ್ಳಬ್ಯಾಡ್ರಿ...." ಎಂದು ಹೇಳಿ ಆಕೆ ಅವನ ಭುಜವನ್ನು ಚಪ್ಪರಿಸಿದಳು. ಅನಂತರ ಶೇಖರನ ಕಡೆಗೆ ತಿರುಗಿ—"ಅಂತೂ ಪೋಲೀಸ್ ಅಧಿಕಾರಿಯ ವೇಷವನ್ನು ಬಹಳ ಚೆನ್ನಾಗಿ ಹಾಕ್ತೀರಿ ನೀವು. ಯಾರಿಗೂ ಸಂಶಯ ಬರಲಿಕ್ಕಿಲ್ಲ. ನಮ್ಮ ದೇಸಾಯರಂಥ ಸುಶಿಕ್ಷಿತ ಕಾಲೇಜು ವಿದ್ಯಾರ್ಥಿಗಳೂ ಮೋಸ ಹೋದರು. ಇನ್ನು ಬೇರೆಯವರ ಮಾತೇನು ! ಅಧಿಕಾರಿಗಳ ಅಪ್ಪನಂಥ ದರ್ಪವನ್ನೂ ನಟಿಸುತ್ತೀರಿ. ಚಿಂತೆಯಿಲ್ಲ. ಈ ಚಳವಳಿಯೊಳಗ ಇದರ ಉಪಯೋಗವನ್ನೂ ಮಾಡಿಕೊಳ್ಳಬಹುದು !" ಎಂದಳು.

"ಇವರನ್ನು ನೋಡಿದರ ಎಂಥ ಡಿ. ಎಸ್. ಪಿ. ಯೂ ದಂಗುಬಡಿದು ಹೋದಾನು ! ನಾಸಂತೂ ಇವರು ಇನ್ಸ್‌ಪೆಕ್ಟರ್ ಅಂತೇ ನಂಬಿಕೊಂಡಿದ್ದೆ. ಈ ಡ್ರೆಸ್, ಈ ಪಿಸ್ತೂಲು ಎಲ್ಲಾ ಎಲ್ಲಿ ದೊರಕಿಸಿದಿರಿ ಶೇಖರಪ್ಪನವರೆ ?" ಎಂದು ಕೇಳಿದ ದೇಸಾಯಿ.

"ಪುಣೆಯಲ್ಲಿ ಕೊಂಡುಕೊಂಡೆವು."

"ಇಂಥವೆಲ್ಲಾ ಸಿಗುತ್ತವೇನು ಮಾರಾಟಕ್ಕೆ ?"

"ಹಣ ಒಂದಿದ್ದರೆ ಏನು ಬೇಕಾದ್ದು ಸಿಗುತ್ತೈತಿ ದೇಸಾಯರೆ !"

"ಸರಿ. ಇವು ಸಿಕ್ಕದ್ದು ಬಹಳ ಒಳ್ಳೇದಾಯ್ತು. ಪ್ರಸಂಗ ಬಂದಾಗ ಉಪಯೋಗಿಸಬಹುದು. ಆ ಪಿಸ್ತೂಲಿಗೆ ಲೈಸೆನ್ಸ್ ಹ್ಯಾಗೆ ಸಿಕ್ಕಿತು ?"

" ಈಗಿನ ಕಾಲದಾಗ ಲೈಸೆನ್ಸ್ ಗೀಸೆನ್ಸ್ ಯಾತಕ್ಕ ಬೇಕ್ರಿ ದೇಸಾಯರೆ ? ಹೇಳಿ ಕೇಳಿ ಆಗಸ್ಟ್ ಕ್ರಾಂತಿಕಾಲ. ಈ ಸರಕಾರದ ಅಧಿಕಾರದ ವಿರುದ್ಧವಾಗೇ ಬಂಡು ಹೂಡೀವಿ. ಇನ್ನು ಅದರ ಲೈಸೆನ್ಸ್‌ಗಾಗಿ ಯಾರು ಕೇಳಾಕ ಹೋಗುತಾರೆ?"

" ಹಿಂದಿನ ಯಾವ ಚಳವಳಿಯೊಳಗೂ ಪಿಸ್ತೂಲು, ಬಂದೂಕು ಉಪ ಯೋಗವಾದಂತಿಲ್ಲ, ಹೌದಲ್ಲವೇನ್ರಿ ?" ಎಂದ ದೇಸಾಯಿ.

" ಇಲ್ಲ. ಈ ಸಲದ ಚಳವಳಿಯ ಹಾಗ ಇರಲಿಲ್ಲ ಆ ಚಳವಳಿಗಳು. ಇದರ ರೀತೀನೇ ಬ್ಯಾರೆ. ಮಾಡಬೇಕು, ಇಲ್ಲಾ ಮಡಿಯಬೇಕು ಅಂತ ಪಣಾ ತೊಟ್ಟು ಹೊರಟ ಚಳವಳಿ ಇದು, ನಮ್ಮ ಕೊನೆಯ ಚಳವಳಿ. ಅದಕ್ಕಾಗಿ, ಸರಕಾರವನ್ನ ಉರುಳಿಸುವದಕ್ಕಾಗಿ ಯಾವ ಉಪಾಯದಿಂದಲಾದರೂ ಕೆಲಸ ಸಾಗಿಸಬಹುದು. ಬರೀ ಜೇಲಿಗೆ ಹೋದರ ಹೆದರುವ ಸರಕಾರ ಅಲ್ಲ ಇದು. ಅದನ್ನ ನಾವೆಂದೋ ತಿಳಿದುಕೊಂಡಿದ್ದೇವೆ. ಅಂತೇ ಈ ಸಲ ಜೇಲಿಗೆ ಹೋಗದೆ ಹೊರಗೇ ಇದ್ದು ಕೊಂಡು ಸರಕಾರದ ಯಂತ್ರ ನಡಿಯದ ಹಾಗೆ ಮಾಡಬೇಕಾಗೈತಿ."

" ಇಂಥ ಬಲಶಾಲಿ ಸರಕಾರಕ್ಕ ಎದುರಾಗಿ ನಿಂತು ಅದನ್ನ ಸೋಲಿಸೋದು ಅಂದರ ಸುಲಭದ ಕೆಲಸ ಅಲ್ಲವಲ್ಲ ?"

" ಅದು ನಮಗ ಗೊತ್ತೈತಿ. ಸುಲಭದ ಕೆಲಸ ಅಲ್ಲ ಅಂತ ಹೆದರಿ ಸುಮ್ಮನ ಕೂತರ ಏನು ಮಾಡಿದ ಹಾಗಾತು ? ನಮ್ಮ ಕೈಲಾದಮಟ್ಟಿಗೂ ಮಾಡಬೇಕು. ನಮ್ಮನ್ನು ನಂಬಿ, ನಮ್ಮ ಶಕ್ತಿಯನ್ನು ನಂಬಿ, ಚಳವಳಿಗೆ ಕರೆ ಕೊಟ್ಟ ಆ ಮಹಾತ್ಮ. ಈಗ ನಾವು ಆಗುವದಿಲ್ಲಾಂತ ಕೈಕಟ್ಟಕೊಂಡು ಕೂತರ, ಇಲ್ಲ— ಹೇಡಿಗಳ ಹಾಗೆ ಜೇಲಿಗೆ ಹೋಗಿ ಕೂತರ ಅವಗ ಮೋಸ ಮಾಡಿದಾಂಗ ಆಗುವ ದಿಲ್ಲೇನು ? ದೇಶಕ್ಕ ದ್ರೋಹ ಮಾಡಿದಾಂಗ ಆಗುವದಿಲ್ಲೇನು ? ಮುಂಬಯಿ ಯೊಳಗ ನಮ್ಮ ಕರ್ನಾಟಕ ಮುಖಂಡರೆಲ್ಲ ಕೂಡಿದಾಗ ಇದೇ ಮಾತನ್ನ ನಾ ಕೇಳಿದೆ. ಶಾಮರಾಯರಂಥವರೂ ಸುಮ್ಮನೆ ಕೂತಿದ್ದರು. ಯಾರೂ ಒಂದು ಕಾರ್ಯಕ್ರಮವನ್ನೂ ಕೊಡಲಿಲ್ಲ. ಸರಿ. ನಾವೇ ಮಾಡಿದರಾಯ್ತು ಅಂತ ನಾ ಬಂದುಬಿಟ್ಟೆ. ಈಗ ನಾವೇ ಮಾಡಬೇಕು."

" ಪಿಸ್ತೂಲು, ಬಂದೂಕು ಬಹಳ ಬೇಕಾಗುತ್ತವೇನು ?"

" ಸಿಕ್ಕಿದಷ್ಟು ಉತ್ತಮವಾದೀತು. ಆದರ, ಅವನ್ನ ಸಂಪಾದಿಸೂದು ಕಷ್ಟ. ಕೊಳ್ಳಬೇಕಾದರೆ ಹಣ ಎಲ್ಲಿಂದ ತರತೀರಿ ?"

"ಕಾಂಗ್ರೆಸ್ ಫಂಡು ಇರುತ್ತದಲ್ಲ ? ಅದರೊಳಗಿಂದ ನಮಗೆ ಏನಾದರೂ ಸಿಕ್ಕಲಿಕ್ಕಿಲ್ಲ ಏನು ?"

"ಕೊಡಬೇಕಲ್ಲ ಅವರು, ಮುಖಂಡರು ? ಮುಂಬಯಿಯಿಂದ ಹೊರಡ ಬೇಕಾದರ ನಾ ಅದನ್ನೇ ಕೇಳಿದೆ, ನಮ್ಮ ದೊಡ್ಡ ಮುಖಂಡರೊಬ್ಬರಿಗೆ. "ನಮ್ಮ ಹತ್ತಿರ ಹಣ ಇಲ್ಲ. ಕೆಲಸ ಮಾಡಬೇಕಂತ ನಿರ್ಧರಿಸಿದ್ದೇವೆ. ಏನಾದರೂ ಸಹಾಯ ಮಾಡ್ರಿ" ಅಂತ ಕೇಳಿದರೆ, "ಬಹಳ ಹಣ ಇಲ್ಲಪ್ಪಾ. ನಾವೂ ನಾಲ್ಕಾರು ಮಂದಿ ಇದ್ದೀವಿ. ಇಲ್ಲೇ ಮುಂಬಯಿಯೊಳಗ ಎಷ್ಟು ತಿಂಗಳು ಇರಬೇಕಾಗು ತ್ತದೊ ಯಾರಿಗೆ ಗೊತ್ತು. ನಮಗೆ ಖರ್ಚಿಗೆ ಬೇಕಲ್ಲ ?" ಅಂದರು. ಇರಲಿ. ನಾವು ಹ್ಯಾಗಾದರೂ ಮಾಡಿದರಾಯ್ತು ಅಂದುಕೊಂಡು ನಮ್ಮ ಬಸಪ್ಪಸೆಟ್ಟರು—ಮುಂಬಯಿಯೊಳಗ ದೊಡ್ಡ ಅಂಗಡಿ ಇಟ್ಟದಾರಲ್ಲ—ಅವರ ಹತ್ತಿರ ಹೋಗಿ ಎಲ್ಲಾ ತಿಳಿಸಿದಾಗ ಅರ್ಧ ತಾಸಿನೊಳಗ ಐದು ನೂರು ರೂಪಾಯಿ ಕೂಡಿಸಿ ಕೊಟ್ಟರು. ಪುಣೆಯೊಳಗೂ ನಮ್ಮ ಕಡೆಯವರು ಒಬ್ಬಿಬ್ಬರು ವ್ಯಾಪಾರಸ್ಥರಿದ್ದಾರ. ಅವರೂ ಸ್ವಲ್ಪ ಸ್ವಲ್ಪ ಕೊಟ್ಟರು. ಸಾಮಾನು ಕೊಂಡುಕೊಂಡು ಹುರುಪಿನಿಂದ ಗಾಡಿ ಹತ್ತಿದೆವು. ಈ ಊರೊಳಗೂ ಸಹಾಯ ಮಾಡುವ ಮಂದಿಗೇನೂ ಕಡಿಮೆ ಇಲ್ಲ. ನಮ್ಮ ದುಡ್ಡಣ್ಣವರ ಸಾಹುಕಾರರು ಹತ್ತು ಸಾವಿರ ಕೇಳಿದರೂ ಕೊಡಲಿಕ್ಕೆ ತಯಾರ ಇದ್ದಾರ" ಎಂದು ಉತ್ಸಾಹದಿಂದ ನುಡಿದ ಶೇಖರಪ್ಪ.

"ಈ ಕಡೆಗೆ ಬಂದು ಕೆಲಸ ಮಾಡೂವನ್ನ ಬಿಟ್ಟು ನಮ್ಮ ಮುಖಂಡರು ಮುಂಬಯಿಯೊಳಗ ಕೂತು ಏನು ಮಾಡುವವರು ಶೇಖರಣ್ಣಾ ?"

ಈ ಪ್ರಶ್ನೆಗೆ ಉತ್ತರ ಕೊಡುವುದಕ್ಕಾಗಿ ಶೇಖರ ದನಿಯೆತ್ತುವುದಕ್ಕೆ ಮುನ್ನವೆ ಹೇಮಾ ಮಾತನಾಡತೊಡಗಿದ್ದಳು : "ಅವರೇನು ಮಾಡುವವರು ಅನ್ನೂದನ್ನ ತಿಳಿದುಕೊಳ್ಳೂದೂ ಬಹಳ ಸುಲಭ. ೧೯೨೧ ರಿಂದ ಇಷ್ಟು ವರ್ಷ ಗಳ ಕಾಲ ಅವರು ಏನು ಮಾಡಿದರೋ ಅದನ್ನೇ ಮಾಡುವವರು. ಈಗಲೂ ಸತ್ಯಾಗ್ರಹ ಮಾಡಿ, ಪಿಕೆಟಿಂಗ್ ಮಾಡಿ ಜೇಲಿಗೆ ಹೋಗಿ ಅಲ್ಲಿ ಎರಡು ಮೂರು ವರ್ಷ ಕಳೆದು, ಹೊರಗೆ ಬಂದು ಮತ್ತೆ ಸತ್ಯಾಗ್ರಹ ಮಾಡಿ ಮತ್ತೆ ಜೇಲಿಗೆ ಹೋಗಿ ಅವರಿಗೆಲ್ಲ ಅದೇ ರೂಢಿಯಾಗಿಬಿಟ್ಟದ. ಒಂದು ವಿಷಯ ಮೈಗೆ ಅಂಟಿ ಕೊಂಡಿತೆಂದರೆ ಅದನ್ನು ಬಿಟ್ಟು ಬೇರೆ ಮಾಡೂದು ಒಗ್ಗುವದಿಲ್ಲ. ಅದಕ್ಕೇ ಈ ಮುಖಂಡರಿಗೂ ಪೀಕಲಾಟ ಬಂದಿರೂದು. ಜೇಲಿಗೆ ಹೋಗಬಾರದು ಅಂತ

ಮುದುಕನ ಅಪ್ಪಣೆ, ಹೋಗದಿದ್ದರೆ ಬೇರೆ ಏನೂ ಮಾಡುವ ತಾಕತ್ತೂ ಇಲ್ಲ. ಹೀಗಾಗಿ ಅವರು ಉಭಯಸಂಕಟದೊಳಗ ಸಿಕ್ಕುಬಿದ್ದಿದ್ದಾರೆ. ಅದಕ್ಕೇ ಅಜ್ಞಾತ ವಾಸದ ಸೋಗು ಹಾಕಿ ಮುಂಬಯಿ ಪುಣೆಗಳಂಥ ದೊಡ್ಡ ಪಟ್ಟಣಗಳಲ್ಲಿ—ಅದೂ ದೊಡ್ಡ ದೊಡ್ಡ ಸರಕಾರೀ ಅಧಿಕಾರಿಗಳ ಮನೆಗಳಲ್ಲಿ ಆರಾಮಾಗಿ ಊಟ ಮಾಡಿಕೊಂಡು ಕಾಲ ಕಳೆಯಬೇಕಂತ ಮಾಡಿದ್ದಾರೆ."

"ಅವರಿಗೆ ದೋಷ ಕೊಟ್ಟು ಉಪಯೋಗ ಇಲ್ಲ ಬಿಡಿರಿ. ಪಾಪ, ಮುದುಕರಾಗಿದ್ದಾರೆ. ಸಾಕಾಗಿ ಹೋಗಿರಬೇಕು ಈ ಚಳವಳಿಗಳ ಸಹವಾಸ!" ಎಂದ ಶೇಖರ.

"ಮುದುಕರಾದರೇನಾಯ್ತು? ಗಾಂಧೀ ಮುದುಕನಲ್ಲವೆ? ಸರದಾರ ಪಟೇಲ್? ನೆಹರೂ? ರಾಜೇಂದ್ರಬಾಬು?—ಅವರೆಲ್ಲ ಮುದುಕರಲ್ಲವೇನು? ಆದರೂ ಅವರ ಉತ್ಸಾಹ ಕಡಿಮೆಯಾಗಿದೆಯೇನು?" ಎಂದಳು ಹೇಮಾ.

"ಎಲ್ಲರೂ ಅವರ ಹಾಂಗ ಹ್ಯಾಗಾದಾರು ಹೇಮಕ್ಕ?"

"ಅದಕ್ಕೇ ನಮ್ಮ ಕರ್ನಾಟಕ ಹಿಂದೆ ಬಿದ್ದಿರೂದು. ನಮ್ಮವರೊಬ್ಬರಾದರೂ ಕಾಂಗ್ರೆಸ್ ಅಧ್ಯಕ್ಷರಾದರೇ? ಕಾರ್ಯದರ್ಶಿ ಆದರೇ? ವರ್ಕಿಂಗ್ ಕಮಿಟಿ ಮೆಂಬರು ಕೂಡ ಆಗಲಿಲ್ಲ. ಕಾಂಗ್ರೆಸ್ಸಿನ ಸೂತ್ರಗಳೆಲ್ಲಾ ಉತ್ತರ ಹಿಂದುಸ್ಥಾನದವರ ಕೈಯೊಳಗೆ. ದೊಡ್ಡ ದೊಡ್ಡ ಮುಖಂಡರೂ ಅವರೇ. ಇದಕ್ಕೆಲ್ಲಾ ಕಾರಣ ಇದೆ. ನಮ್ಮಲ್ಲಿ ಮಾತಾಡುವ ಮುಖಂಡರು ಬಹಳ. ಕೆಲಸ ಮಾಡಿ ತೋರಿಸುವವರು ಕಡಿಮೆ," ಎಂದಳು ಹೇಮಾ.

"ಹೋಗಲಿ ಬಿಡಿರಿ ಆ ಮುಖಂಡರ ಸುದ್ದಿ. ಈಗ ಅವರ ಸಹಾಯ ಏನೂ ಇಲ್ಲದೆ ನಾವು ಕೆಲಸ ಮಾಡಬೇಕಾಗೈತಿ. ನಾವೇ—ಅಂದರೆ, ಸಾಮಾನ್ಯ ಜನರೇ ಈ ಚಳವಳಿಯನ್ನ ನಡಸಬೇಕಾಗೈತಿ. ಜನ ತಯಾರಾಗೈತಿ. ನಿಮ್ಮಂಥ ಸುಶಿಕ್ಷಿತ ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಕೆಲಸ ಮಾಡಲು ಸಿದ್ಧರಾಗಿದ್ದಾರ. ಇನ್ನೇನು ಬೇಕು? ಸುರು ಮಾಡಿಬಿಡೋಣ," ಎಂದ ಶೇಖರಪ್ಪ.

"ಈಗ ನಮ್ಮ ಕಾರ್ಯಕ್ರಮ ಆದರೂ ಏನು?" ಎಂದು ಪ್ರಶ್ನಿಸಿದ ದೇಸಾಯಿ.

"ಸಭೆ, ಮೆರವಣಿಗೆ, ಪ್ರದರ್ಶನ, ಭಾಷಣ ನಡೀತಾ ಇವೆ ಪಟ್ಟಣದೊಳಗೆ. ಜನರನ್ನ ಹುರಿದುಂಬಿಸೂದಕ್ಕ ಇವೆಲ್ಲಾ ಬೇಕೇಬೇಕು. ಬೆಳಗಾವಿಯು

ಹಾಂಗ ಬೇರೆ ದೊಡ್ಡ ದೊಡ್ಡ ಪಟ್ಟಣಗಳೊಳಗೂ ಮೆರವಣಿಗೆ ನಡೀತಾ ಇದಾವೆ. ವಿದ್ಯಾರ್ಥಿ ವಿದ್ಯಾರ್ಥಿನಿಯರೇ ಹೆಚ್ಚಾಗಿ ಈ ಮೆರವಣಿಗೆಯೊಳಗ ಭಾಗವಹಿಸ್ತಾ ಇದಾರೆ. ಸಾವಿರಾರು ಮಂದಿಯನ್ನು ಹಿಡಿದು ಜೇಲಿಗೂ ಕಳಿಸಿದ್ದಾರೆ. ಅಲ್ಲಿ ಇಲ್ಲಿ ಲಾಠೀ ಚಾರ್ಜು ಆಗೈತಿ. ಒಂದೆರಡು ಕಡೆ ಗೋಳೀಬಾರೂ ಮಾಡಿದ್ದಾರೆ. ಇದೆಲ್ಲಾ ನಮಗೇನೂ ಹೊಸದಲ್ಲ. ಹಿಂದಿನ ಎಲ್ಲ ಚಳವಳಿಗಳೊಳಗೂ ಇಂಥಾವು ನಡೆದಾವೆ. ಆದರೆ ಈ ಚಳವಳಿಯೊಳಗ ಹಿಂದೆಂದೂ ಮಾಡದಂಥ ಕೆಲಸ ನಾವು ಮಾಡಬೇಕಾಗೈತಿ. ಅದಕ್ಕೇ ಹಿಂದೆಂದೂ ಉಪಯೋಗ ಮಾಡಿರದ ಈ ಪಿಸ್ತೂಲು, ಈ ಡ್ರೆಸ್ಸುಗಳು ಈಗ ಬೇಕಾಗಿರೂದು...."

"ಈ ಮೊದಲು ಯಾರೂ ಉಪಯೋಗ ಮಾಡಿಲ್ಲವೇನ್ರಿ ಇವನ್ನ? ಭಗತ್‌ಸಿಂಗ್? ಸುಖದೇವ್?"

"ಅವರ ಮಾತು ಬ್ಯಾರೆ ದೇಸಾಯರೆ. ಅದು ಹಿಂಸಾತ್ಮಕ ಕ್ರಾಂತಿ. ನಮ್ಮದು ಅಂಥಾ ಕ್ರಾಂತಿ ಏನೂ ಅಲ್ಲ. ಪಿಸ್ತೂಲು, ಬಂದೂಕು ಹಿಡಿದ ಮಾತ್ರಕ್ಕೆ ನಾವು ಹಿಂಸೆ ಮಾಡೂದಕ್ಕ ಹೊರಟೇವಿ ಅಂತ ತಿಳೀಬಾರದು."

"ಮತ್ತೆ? ಇವುಗಳ ಉಪಯೋಗ ಆದರೂ ಏನೂ ಹಾಗಾದರೆ?" ಎಂದು ದೇಸಾಯಿ ಕುತೂಹಲದಿಂದ ಕೇಳಿದ.

"ನಮ್ಮ ಶತ್ರು ಬಹಳ ಪ್ರಬಲಸಿದ್ದಾನ ಅನ್ನೂದು ನಿಮಗ ಗೊತ್ತು. ಸರಕಾರದ ಹತ್ತಿರ ಪೋಲೀಸರಿದ್ದಾರ, ಬಂದೂಕು ಇದಾವೆ, ಗುಂಡು ಬಯನೆಟ್ ಇದಾವೆ, ಬಾಂಬು ಇದಾವೆ. ಸರಕಾರೀ ಯಂತ್ರವನ್ನೆಲ್ಲ ನಾಶಮಾಡಿ ಅದರ ಅಧಿಕಾರ ನಡೆಯುದಾಂಗ ಮಾಡಲು ಹೊರಟವರು ನಾವು. ನಮ್ಮನ್ನದು ಸುಮ್ಮನೆ ಬಿಡುತ್ತದೇನು? ಅದರ ಬಂದೂಕು, ಅದರ ಗುಂಡು, ಅದರ ಬಾಂಬು ನಮ್ಮನ್ನ ನಾಶಮಾಡಲು ಬಂದಾವು. ಆಗ ನಮ್ಮ ಕೈಯೊಳಗೂ ಅಂಥವೇ ಶಸ್ತ್ರ ಇದ್ದರ ನಾವು ಸ್ವಲ್ಪವಾದರೂ ಕೆಲಸ ಮಾಡಬೇಕ್ಕಾದೀತು. ಇಲ್ಲದಿದ್ದರೆ ಏನೂ ಆಗು ವಂತಿಲ್ಲ. ಈಗ ನಮ್ಮ ಹತ್ತಿರ ಶಸ್ತ್ರ ಇಲ್ಲ ಅಂತ ಅವರು ನಮ್ಮ ಮ್ಯಾಲ ದಬ್ಬಾಳಿಕೆ ನಡಸಲಿಕ್ಕಾಗುತ್ತೈತಿ. ನಮ್ಮ ಮ್ಯಾಲ ಬೇಕಾದ ಹಾಂಗ ಗೋಳೀಬಾರು ಮಾಡಲಿಕ್ಕಾಗುತ್ತೈತಿ. ನಮ್ಮ ಹತ್ತಿರನೂ ಬಂದೂಕು ಇದಾವೆ, ಗುಂಡೂ ಇದಾವೆ, ಬಾಂಬೂ ಇದಾವೆ ಅಂತ ಅವರಿಗೆ ಗೊತ್ತಾದರೆ ಅವರಿಗೆ ಮೊದಲಿನಷ್ಟು ಧೈರ್ಯ ಇರೂದಿಲ್ಲ. ಪಿಸ್ತೂಲು ತೋರಿಸಿ ಹೆದರಿಸಿ ಕೆಲಸ ಸಾಧಿಸಬಹುದು.

ಅಷ್ಟಕ್ಕೆ ಮಾತ್ರ ಉಪಯೋಗ ಈ ಶಸ್ತ್ರಗಳದು ನಮಗೆ.... ಇಲ್ಲಿ ಹಿಂಸಾ, ಅಹಿಂಸಾ ಅಂತ ವಾದವೇ ಬರುವದಿಲ್ಲ. ಕೆಲಸ ಸಾಧಿಸುವದಕ್ಕಾಗಿ, ಬೇಗ ಸಾಧಿಸುವದಕ್ಕಾಗಿ ಈ ಶಸ್ತ್ರಗಳನ್ನ ಉಪಯೋಗಿಸೂದು, ಅಷ್ಟೆ. ಅವುಗಳಿಂದ ಹಿಂಸಾ ಮಾಡಬೇಕು ಅಂತ ಸ್ವಲ್ಪವೂ ವಿಚಾರ ಇಲ್ಲ," ಎಂದ ಶೇಖರ.

"ಇದನ್ನೆಲ್ಲ ಈಗ ಬಿಡಿಸಿ ಹೇಳೂದು ಕಷ್ಟ ದೇಸಾಯರೆ. ಕೆಲಸ ಮಾಡುಮಾಡುತ್ತ ಹೋದಂತೆಲ್ಲ ನಿಮಗೇ ಗೊತ್ತಾಗುತ್ತೈತಿ. ಗುಂಡು ಹಾರಿಸಲಿಕ್ಕಲ್ಲ ಪಿಸ್ತೂಲು, ಬರೀ ಹೆದರಿಸಲಿಕ್ಕೆ, ಹೆದರಿಸಿ ಕಾರ್ಯ ಸಾಧಿಸಲಿಕ್ಕೆ. ಇಷ್ಟು ತಿಳಿದುಕೊಂಡರೆ ಸಾಕು ಈಗ," ಎಂದಳು ಹೇಮಾ.

"ಅಂದರೆ ಬಹಳ ಶಸ್ತ್ರ ಬೇಕಾಗಬಹುದು ಅನ್ನಿರಿ."

"ಸಿಕ್ಕಿದಷ್ಟೂ ಬೇಕು."

"ಅವನ್ನ ಎಲ್ಲಿ ದೊರಕಿಸಬೇಕಂತ ವಿಚಾರ ಮಾಡಿದ್ದೀರಿ ?"

"ಹೀಗೆ. ನಿಮ್ಮಂಥವರ ಮನೆಗಳೊಳಗ ಸಹಜ ಸಿಕ್ಕಬಹುದು. ನಿಮ್ಮಲ್ಲಿ ಮೂರು ಬಂದೂಕು ಇರಬೇಕಲ್ಲ ? ಹೌದೇನು ?" ಎಂದ ಶೇಖರ.

"ಹೌದು. ನಿಮಗೆ ಹ್ಯಾಗೆ ಗೊತ್ತಾಯಿತು ?"

"ನಮ್ಮೂರಿನಿಂದ ನಿಮ್ಮ ಊರು ಬಹಳ ದೂರ ಏನೂ ಇಲ್ಲವಲ್ಲ ? ಒಂದೆರಡು ಬಾರಿ ನಿಮ್ಮ ಮನೆಗೂ ಹೋಗಿ ಬಂದೀನಿ ನಾನು. ಆ ಬಂದೂಕು ಎಲ್ಲಿ, ಯಾವ ಖೋಲಿಯೊಳಗ ಇದಾವೆ ಅನ್ನೂದನ್ನೂ ನೋಡಿದ್ದೀನಿ. ನಿಮ್ಮ ಒಪ್ಪಿಗೆ ಇದ್ದರೆ ಮೊದಲು ಅದನ್ನೇ ತಂದುಬಿಡೋಣ ಅಂತ ವಿಚಾರ ಮಾಡಿದ್ದೀನಿ."

"ಹೋ. ಅದರಲ್ಲೇನಂತೆ ? ನಮ್ಮ ಬಂದೂಕು ಚಳವಳಿಗೆ ಉಪಯೋಗ ಆದರೆ ನನಗೂ ಅಭಿಮಾನವೇ. ಆಗಲಿ. ಮೊದಲು ಅವನ್ನೇ ಎಬ್ಬಿಸೋಣ. ನಾನೇ ಬೇಕಾದರೆ ಈ ಕೆಲಸ ಮಾಡ್ತೀನಿ. ಹೂಂ. ಮನೆ ಗೆದ್ದು ಮಾರು ಗೆದೆ ಅಂತ ಗಾದೇ ಮಾತೇ ಅದೆಯಲ್ಲ ?" ಎಂದ ದೇಸಾಯಿ.

"ನಿಜ. ಆದರೆ ನಿಮ್ಮ ತಂದೆಯವರು ಸುಮ್ಮನೆ ಬಿಟ್ಟಾರೇ ನಿಮ್ಮನ್ನ ?"

"ನಾ ಅವರ ಮಗ ಅಂತ ಹ್ಯಾಗೆ ಗೊತ್ತಾಗುತ್ತದ ಅವರಿಗೆ ? ಈ ವೇಷದೊಳಗೆ ನಾ ಅಲ್ಲಿ ಹೋದೇನೇ ?"

" ಸರಿ ಹಾಗಾದರೆ. ನೀವೇ ಹೋದೀರಂತೆ ಆ ಕೆಲಸಕ್ಕೆ. ಎಂದು ಬರತೀರಿ ಊರಿಗೆ?" ಎಂದು ಶೇಖರಪ್ಪ.

" ನೀವು ಎಂದು ಹೊರಡುತ್ತೀರಿ ?"

" ಇವೊತ್ತು ರಾತ್ರೀನೇ ಹೊರಡತೀನಿ. ಕಿತ್ತೂರಿನೊಳಗ ಒಂದು ಸಭಾ ಐತಿ—ನಮ್ಮ ಕಡೆಯ ಜನರದ್ದೆಲ್ಲ. ಅಲ್ಲಿ ಕಾರ್ಯಕ್ರಮ ಸಿದ್ಧವಾಗಬೇಕಾಗ್ಯೆತಿ. ಅದನ್ನ ಮುಗಿಸಿಕೊಂಡು ಕಲ್ಲಾಪುರಕ್ಕ ಹೋಗಬೇಕು. ನೀವೂ ಬರ್ತೀರಾ ?"

" ಕಲ್ಲಾಪುರಕ್ಕ ಎಂದು ಹೋಗೋದು ?"

" ನಾಳೆ ಸಂಜೆಯೊಳಗಾಗಿ ಅಲ್ಲಿ ಇರಾಕs ಬೇಕಲ್ಲ? ಕೆಲಸ ಅಂತೂ ಲಗೂ ಸುರು ಆಗಬೇಕು."

" ನಾನೇನು ಮಾಡಬೇಕು ಅಂತೀರಿ ಶೇಖರಣ್ಣ ? ನಿಮ್ಮದಂತೂ ಎಲ್ಲಾ ನಿಶ್ಚಿತ ಆದಂಗಾತು. ನಾ ಇಲ್ಲಿದ್ದುಕೊಂಡು ಏನು ಮಾಡೂದು ? ನಾನೂ ಬಂದುಬಿಡಲಾ ಕಲ್ಲಾಪುರಕ್ಕೆ ? ಹ್ಯಾಗೂ ನಮ್ಮ ಮನೆಯೊಳಗ ಒಂದು ಸೈಕ್ಲೋಸ್ಟೈಲ್ ಯಂತ್ರ ಅದ. ಅದು ನಮಗೆ ಉಪಯೋಗವಾದೀತು. ಅದನ್ನ ತಕ್ಕೊಂಡು ಹೊರಟುಬಿಡಬಹುದಲ್ಲ ?"

ಶೇಖರಪ್ಪ ಒಂದೆರಡು ನಿಮಿಷ ಯೋಚಿಸುತ್ತಿದ್ದು ಅನಂತರ ಹೇಳಿದ : " ಮೊದಲು ನಾ ಊರಿಗೆ ಹೋಗಿ ಅಲ್ಲಿನ ಪರಿಸ್ಥಿತಿ ನೋಡಿಕೊಂಡು ಆಮ್ಯಾಲ ನಿಮಗ ತಿಳಿಸತೀನಿ. ಈಗ ನಾವು ಸ್ವಲ್ಪ ತಯಾರಿ ಮಾಡೂದೈತಿ. ಅದೆಲ್ಲ ಮುಗಿದ ಮ್ಯಾಲ, ನಮ್ಮ ಗುಂಪಿಗೊಂದು ಭದ್ರವಾದಂಥಾ ಸ್ಥಳ ಸಿಕ್ಕಿದ ಮ್ಯಾಲ ನೀವು ಬರೋದು ನೆಟ್ಟಗೆ. ನಮ್ಮ ಸಂಗಡ ನಿಮ್ಮನ್ನು ಗುಡ್ಡ ಬೆಟ್ಟ ತಿರುಗಿಸೂದು ಒಳ್ಳೇದಲ್ಲ. ಒಂದು ಸುರಕ್ಷಿತವಾದ ಸ್ಥಳ ನೋಡಿ ಅಲ್ಲಿ ನಮ್ಮ ಸೆಂಟರ್ ಮಾಡಿದಂಗ ಮಾಡಿ ನಿಮಗೊಂದು ಕಚೇರಿ ಮಾಡಿಕೊಡುತೀವಿ. ಅಲ್ಲಿ ಕೂತು ಕೊಂಡು ನೀವು ಈ ಕೆಲಸ ಮಾಡಬಹುದು ?"

" ಇನ್ನು ಎಷ್ಟು ದಿನ ಆದೀತು ಅದೆಲ್ಲ ಆಗೂದಕ್ಕ ?"

" ಬಹಳ ಅಂದರೆ ಒಂದು ತಿಂಗಳು, ಅಷ್ಟು ಸಾಕು."

" ಆಗಲಪ್ಪ. ಅಷ್ಟು ದಿನ ಇಲ್ಲಿರತೇನೆ ನಾನು. ಲಗೂ ಹೇಳಿ ಕಳಿಸಿರಿ ಆಯ್ತು."

“ನಾನೇ ಬಂದರೂ ಬರಬಹುದು. ಇಲ್ಲ–ನಮ್ಮ ಈ ದೇಸಾಯಿ ಸಾಹೇಬರನ್ನ ಕಳಿಸಿದರೂ ಕಳಿಸಬಹುದು. ಅದುವರೆಗೆ ಇಲ್ಲೇ ಕೆಲಸ ಮಾಡ್ತಾ ಇರಬಹುದಲ್ಲ ?”

“ಮಾಡಬಹುದು. ಆದರೆ ಪಟ್ಟಣದೊಳಗ ನಮ್ಮಿಂದ ಹೆಚ್ಚು ಕೆಲಸ ಆಗುವಂತಿಲ್ಲ. ಇಲ್ಲಿಯ ಕೆಲಸ ಅಂದರೆ ಸಭೆ, ಮೆರವಣಿಗೆ. ಅರೆಸ್ಟ್ ಆದರೆ ಮುಗೀತು. ಹಿಂಡಲಗಿಗೆ ಹೋಗಿ ಬೀಳಬೇಕು. ಏನು ಬಂದ ಹಾಗಾಯ್ತು ಜೇಲಿಗೆ ಹೋಗಿ ಬಿದ್ದರೆ ? ನನಗೇನೂ ಇಲ್ಲಿ ಮನಸ್ಸಿಲ್ಲ.”

“ಇರಲಿ, ಇರಲಿ. ಇನ್ನೊಂದು ವಾರ ತಡೀರಿ....” ಎಂದು ಶೇಖರಪ್ಪ ಹೇಳುತ್ತಿರುವಾಗ ಕೊಟಡಿಯ ಬಾಗಿಲನ್ನು ಯಾರೋ ತಟ್ಟುತ್ತಿದ್ದುದು ಕೇಳಬಂದುದರಿಂದ ಮಾತು ಅಷ್ಟಕ್ಕೇ ನಿಂತುಹೋಯಿತು.

ಇಂಥ ರಾತ್ರಿಯಲ್ಲಿ ಯಾರು ಬಂದರೋ ಎಂದುಕೊಳ್ಳುತ್ತ ಹೇಮಾ ಹೋಗಿ ಬಾಗಿಲು ತೆರೆದಳು.

“ಶೇಖರಪ್ಪನವರಿದ್ದಾರೇನ್ರಿ ?” ಹೊರಗಡೆ ನಿಂತಿದ್ದ ವ್ಯಕ್ತಿ ಪ್ರಶ್ನಿಸಿದ.

“ಯಾರು ? ನಿಮ್ಮ ಹೆಸರೇನು ?”

“ಡ್ರೈವರ್ ಕಲ್ಲಪ್ಪ. ಲಾರಿ ತಯಾರಾಗಿ ನಿಂತೈತಿ. ಹೊರಡೂ ವೇಳೆ ಆಗೈತಿ ಅಂತ ಹೇಳಾಕ ಬಂದೆ.”

“ಬಂದೆವು ಕಲ್ಲಣ್ಣ, ಈಗ ಬಂದುಬಿಟ್ಟೆವು. ನೀ ನಡೀ ಗಾಡಿಯ ಹತ್ತಿರ. ಮಾಸ್ತರು ಎಲ್ಲಿದ್ದಾರ ?”

“ದುಡ್ಡಣ್ಣವರ ಸಾಹುಕಾರ್‍ರ ಮನೆಯೊಳಗ. ಹೊಂಗಲದಿಂದ ಯಾರೋ ಬಂದಾರಂತ. ಅವರ ಸಂಗಡ ಮಾತಾಡತಾ ಕೂತಿದ್ದರು. ಅದೇ ಹಾದೀ ಮ್ಯಾಲ ಹಾದುಹೋಗ್ತೀವಿ. ಹಾಗs ಕರಕೊಂಡು ಹೋದರಾಯ್ತು,” ಎಂದು ಹೇಳಿ ಆತ ಲಾರಿಯನ್ನು ಸಿದ್ಧಗೊಳಿಸಲು ಹೊರಟುಹೋದ.

“ಈಗ ಲಾರಿಯೊಳಗ ಹೋಗವ್ರೇನು ನೀವು ? ಈ ಡ್ರೆಸ್ಸಿನೊಳಗ ?”

“ಇಲ್ಲ ಬದಲುಮಾಡಬೇಕು,” ಎಂದು ನುಡಿದು ಶೇಖರ ಪಕ್ಕದ ಕೊಟಡಿಗೆ ಹೋಗಿ, ಪೋಲೀಸು ವೇಷ ತೆಗೆದು ಸಾದಾ ಬಟ್ಟೆಬರೆ ಹಾಕಿಕೊಂಡು ಬಂದ.

ಬೀದಿಯಿಂದ ಲಾರಿಯ ತುತೂರಿಯ ಸಪ್ಪಳ ಕೇಳಬರುತ್ತಿತ್ತು.

೭

ದುಡ್ಡಣ್ಣವರ ಸಾಹುಕಾರರ ಮನೆಯೆದುರಿಗೆ ಲಾರಿ ಬಂದು ನಿಂತೊಡನೆ ಒಳಗಿನಿಂದ ಮಾಸ್ತರರು ಓಡುತ್ತೋಡುತ್ತ ಬಂದರು. ಅವರ ಹೆಸರು ಶಂಕರಪ್ಪ ನವರೆಂದು ಇದ್ದರೂ ಒಂದಾನೊಂದು ಕಾಲದಲ್ಲಿ ಅವರ ಮಾಸ್ತರರಾಗಿದ್ದುದ ರಿಂದ ಪರಿಚಿತರ ಬಳಗದಲ್ಲೆಲ್ಲ "ಮಾಸ್ತರ್" ಎಂಬುದೇ ಅವರ ರೂಢಿನಾಮ ವಾಗಿದ್ದಿತು. ಐವತ್ತು ವರ್ಷಕ್ಕೆ ಮೇಲ್ಪಟ್ಟ ವಯಸ್ಸಾಗಿದ್ದರೂ ಅವರು ಹರಯ ದವರನ್ನು ಮೀರಿಸುವ ಉತ್ಸಾಹಿಗಳಾಗಿದ್ದರು. ಉತ್ಸಾಹಕ್ಕೆ ಅನುರೂಪವಾದ ದೇಹ ದಾರ್ಢ್ಯವೂ ಇದ್ದಿತು. ಸಂಗೀತ, ಉಪನ್ಯಾಸ, ಕೀರ್ತನೆ ಇತ್ಯಾದಿ ಹಲವಾರು ವಿಷಯಗಳಲ್ಲಿ ಪಳಗಿದವರಾದುದರಿಂದ ಜಿಲ್ಲೆಯಲ್ಲೆಲ್ಲ ತುಂಬ ಲೋಕಪ್ರಿಯ ರಾಗಿದ್ದರು. ವೀರಗೀತ, ಲಾವಣಿಗಳನ್ನು ಹಾಡುವುದರಲ್ಲೂ ಅವರನ್ನು ಮೀರಿಸು ವವರು ಆ ಭಾಗದಲ್ಲಿ ಯಾರೂ ಇರಲಿಲ್ಲ. ಕಾಂಗ್ರೆಸ್ ಚಳವಳಿಗಳಲ್ಲೆಲ್ಲ ಅವರು ಭಾಗವಹಿಸಿದ್ದರು. ಸ್ವಾತಂತ್ರ್ಯದ ಹೋರಾಟಕ್ಕಾಗಿ ಸಾಮಾನ್ಯ ಜನರನ್ನು ಜಾಗೃತಗೊಳಿಸುವುದರಲ್ಲೂ ಪ್ರಚಾರಕಾರ್ಯದಲ್ಲೂ ನುರಿತವರಾಗಿದ್ದರು.

"ಮತ್ತೇನು ಸುದ್ದಿ ಮಾಸ್ತರ್ರೆ?" ಲಾರಿಯ ಹಿಂದೆ ಚೀಲಗಳ ಮೇಲೆ ಕಂಬಳಿ ಹಾಸಿ ಅದರ ಮೇಲೊರಗಿದ್ದ ಶೇಖರ ಕೇಳಿದ.

"ಸ್ವಲ್ಪ ಇಳಿದು ಬಾ ಶೇಖರಣ್ಣ. ಒಂದು ಭಯಂಕರ ಸುದ್ದಿ ತಿಳೀತು ಇವೊತ್ತೇ."

ಆತ ಲಾರಿಯಿಂದಿಳಿದು ಕೆಳಕ್ಕೆ ಬಂದ. ಇಬ್ಬರೂ ಸಾಹುಕಾರರ ಮನೆ ಯಲ್ಲಿ ಸೇರಿ ಹೊರಗಿನ ಪಡಸಾಲೆಯಲ್ಲಿರಿಸಿದ್ದ ಬೆಂಚಿನ ಮೇಲೆ ಕುಳಿತುಕೊಂಡರು. ಭಯಂಕರ ಸುದ್ದಿ ಎನ್ನುತ್ತಾರೆ–ಮತ್ತೇನು ನಡೆದಿದೆಯೊ ಎಂದು ಆತುರನಾಗಿ ಕೇಳಿದ ಶೇಖರಪ್ಪ: "ಏನು ಮಾಸ್ತರ್ರೆ, ಏನಾಗೈತಿ?"

ಕೋಟಿನ ಜೇಬಿನಿಂದ ಒಂದು ಬೀಡಿಯನ್ನು ತೆಗೆದು ಹೊತ್ತಿಸಿ ಹೊಗೆ ಯನ್ನುಗುಳುತ್ತ ಮಾಸ್ತರರು ಶಾಂತ ಸ್ವರದಲ್ಲಿಯೆ ಹೇಳತೊಡಗಿದರು: "ಹೊಂಗಲ ದಿಂದ ಒಬ್ಬರು ಬಂದಿದ್ದರು ಇವೊತ್ತು. ಬಹಾಳ ಕೆಟ್ಟ ಸುದ್ದಿ ತಂದಿದ್ದಾರ."

"ಯಾರಾದರೂ ಸತ್ತರೋ ಹ್ಯಾಗೆ?"

"ಒಬ್ಬರಲ್ಲ, ಇಬ್ಬರಲ್ಲ! ಏಳು ಮಂದಿ!"

ಉಸಿರು ಬಿಗಿಹಿಡಿದು ಶೇಖರಪ್ಪ ಪ್ರಶ್ನೆ ಮಾಡಿದ : "ಯಾಕೆ ? ಅಂಥಾದ್ದೇನಾಯಿತು ?"

"ಪೋಲೀಸರು ಗೋಳೀಬಾರ್ ಮಾಡಿದರಂತೆ!"

"ಗೋಳೀಬಾರ್ ಮಾಡುವಂತ ಕೆಲಸ ಏನು ನಡೆದಿತ್ತು ಅಲ್ಲಿ ?"

"ಅಂಥಾ ಹಿಂಸಾಕೃತ್ಯ ಏನೂ ಇರಲಿಲ್ಲ. ಮುಂಜಾನೆ ಪ್ರಭಾತಫೇರಿ ಹೊರಟಿದ್ದಿತಂತೆ. ಅದರಲ್ಲಿ ಭಾಗವಹಿಸಿದವರಲ್ಲಿ ಕೆಲವರನ್ನ ಹಿಡಿದುಕೊಂಡು ಹೊರಟಿದ್ದಾಗ ಜನ ತಾಲೂಕ ಕಚೇರಿಯ ಮುಂದೆ ಗುಂಪುಗೂಡಿ ಪ್ರದರ್ಶನ ಮಾಡಿತಂತೆ. ಅಷ್ಟಕ್ಕs ಒಳಗಿದ್ದ ಪೋಲೀಸರು ಗುಂಡು ಹಾರಿಸಿದರಂತೆ!"

ಒಂದು ಕ್ಷಣ ಮೌನವಾಗಿದ್ದು ಶೇಖರಪ್ಪ ಕೇಳಿದ : "ಗುಂಡು ಹಾರಿಸಲು ಕಾರಣ ಏನಾದರೂ ಇತ್ತೇನು ? ಜನ ಕಲ್ಲು ಗಿಲ್ಲು ಒಗೆದರಂತೇನು ?"

"ಏನೂ ಇಲ್ಲ. ಸುಮ್ಮನೆ ಜಯಜಯಕಾರ ಹಾಕುತ್ತಿದ್ದರಂತೆ. ಅವರನ್ನು ಚದುರಿಸಬೇಕು ಅಂತ ಇವರು ಬಹದ್ದೂರರು ಗುಂಡು ಹಾರಿಸಿದ್ದಾರೆ...."

ಬೆಂಚಿನ ಮೇಲೆ ಕುಳಿತಿದ್ದ ಹಾಗೆ ಒಂದೆರಡು ನಿಮಿಷ ಮೌನವಾಗಿದ್ದ ಶೇಖರಪ್ಪ. ಬೈಲಹೊಂಗಲದಲ್ಲಿ ನಡೆದ ಈ ಗೋಳೀಬಾರು, ಶಾಂತರೀತಿಯಿಂದ ಪ್ರದರ್ಶನ ಮಾಡುತ್ತಿದ್ದ ಜನರ ಮೇಲೆ ನಿಷ್ಕಾರಣವಾಗಿ ನಡೆದ ಈ ಗೋಳೀಬಾರು. ಏಳು ಜನ ನಿರಪರಾಧಿಗಳ ಆಹುತಿ....ಅವನ ಎದೆಯ ಮೇಲೆ ವಜ್ರಾಘಾತವಾದಂತಾಗಿದ್ದಿತು.

ಶೇಖರನ ಮನಸ್ಸಿನಲ್ಲಿ ನಡೆದ ಕೋಲಾಹಲದ ಅರಿವಾಗಿರಬೇಕು ಮಾಸ್ತರರಿಗೆ. ಅವನ ಬೆನ್ನು ತಟ್ಟುತ್ತಾ ಸಂತೈಸುವ ಸ್ವರದಲ್ಲಿ ಹೇಳಿದರು : ಹೋದವರು ಹೋದರು ಶೇಖರಣ್ಣ. ಕರ್ಣಾಟಕದೊಳಗೇ ಮೊದಲನೇ ಬಲಿ ಇದು ಬೈಲಹೊಂಗಲದ್ದು....ಇದೊಂದು ಆಹ್ವಾನ ಅಂತ ನಾವು ತಿಳಿದುಕೊಳ್ಳಬೇಕು. ಈ ಸರಕಾರವನ್ನ ಎದುರಿಸಿ ನಿಲ್ಲಬೇಕು...."

ಆಹ್ವಾನ!

ಮಾಸ್ತರರ ಆ ಮಾತು ಶೇಖರನ ಎದೆಯನ್ನು ಮಿಂಚಿನಂತೆ ಪ್ರವೇಶಿಸಿತು. ಹೌದು ಆಹ್ವಾನವೇ ಸರಿ. ಆ ಗೋಳೀಬಾರಿನ ರೂಪದಲ್ಲಿ, ಆ ಏಳು ಜನರ ಕೊಲೆಯ ರೂಪದಲ್ಲಿ ವಿದೇಶೀಯ ಸರಕಾರ ಜನಕ್ಕೆ ಆಹ್ವಾನ ಕೊಟ್ಟ ಹಾಗೇ ಇದ್ದಿತು. ಈ ರೀತಿ ನಿರ್ಲಕ್ಷ್ಯದಿಂದ ಗೋಳೀಬಾರು ಮಾಡಿ ಜನರನ್ನು ಬೆದರಿಸಿ

ಬಿಡಬಹುದೆಂದು ಭಾವಿಸಿಕೊಂಡಿರಬೇಕು ಅದು. ನಮ್ಮ ಜನರ ಸ್ವಭಾವ ಇನ್ನೂ ತಿಳಿದಿರಲಿಕ್ಕಿಲ್ಲ ಈ ಸರಕಾರಕ್ಕೆ. ಅದರ ಈ ಕೃತಿಗಳಿಂದ ನಮ್ಮ ಶಕ್ತಿ ಇನ್ನೂ ಹೆಚ್ಚುವುದು. ನಮ್ಮ ಹಟ ಇನ್ನೂ ಹೆಚ್ಚುವುದು. ನಮ್ಮ ಛಲ ಇನ್ನೂ ಬೆಳೆಯುವುದು. ದೇಶಕ್ಕೆ ದೇಶವೆಲ್ಲ ಸಡ್ಡು ಹೊಡೆದು ಮೇಲಕ್ಕೇಳುವುದು. ಮಾಡುವುದು– ಇಲ್ಲವೆ–ಮಡಿಯುವುದು.

ಮುಷ್ಟಿಯನ್ನು ಕಲ್ಲಿನಂತೆ ಬಿಗಿಮಾಡಿ ಮೇಲಕ್ಕೆದ್ದ ಶೇಖರಪ್ಪ. "ಆಗಲಿ ಮಾಸ್ತರ್ರೆ, ನಾನು ಕಿತ್ತೂರಿಗೆ ಹೋಗಿ ಹಾಂಗs ಕಲ್ಲಾಪುರಕ್ಕೆ ಬರ್ತೇನಿ ನೀವು ನಾಳೆ ಮುಂಜಾನೆ ಮೋಟರಿನಾಗ ಬರ್ರಿ," ಎಂದು ನುಡಿದು ಅವರನ್ನು ಬೀಳ್ಕೊಂಡ.

ಲಾರಿಯಲ್ಲಿರಿಸಿದ್ದ ಚೀಲಗಳ ಮೇಲೆ ಕಂಬಳಿ ಹಾಸಿ ಅವನೂ ದೇಸಾಯಿಯೂ ಮಲಗಿಕೊಂಡರು. ಲಾರಿ ಓಡತೊಡಗಿತು. ಮೇಲೆ ಆಕಾಶದಲ್ಲಿ ಮಿನುಗುತ್ತಿದ್ದ ಆ ಲಕ್ಷೋಪಲಕ್ಷ ತಾರೆಗಳನ್ನು ಶೂನ್ಯದೃಷ್ಟಿಯಿಂದ ನಿಟ್ಟಿಸುತ್ತ ಶೇಖರನೆಂದ:

"ಯಾವುದಾದರೊಂದು ಒಳ್ಳೆಯ ಕೆಲಸಕ್ಕಾಗಿ ಮಡಿದವರು ಸತ್ತಮ್ಯಾಲ ನಕ್ಷತ್ರ ಆಗಿ ಬೆಳಗುತಿರುತಾರಂತ. ನೀವು ಕೇಳಿದ್ದೀರಾ ದೇಸಾಯರs?"

"ನಮ್ಮ ಅಜ್ಜಿ ಒಮ್ಮೆ ಹೇಳುತ್ತಿದ್ದಳು, ನಾ ಚಿಕ್ಕನಸಾಗಿದ್ದಾಗ. ಅದನ್ನೆಲ್ಲ ನಾ ಈಗ ನಂಬುವದಿಲ್ಲ."

"ಒಂದು ರೀತಿಯಿಂದ ಅದು ನಿಜ ಇದ್ದೀತು ಅಂತ ನನಗ ಅನಿಸುತೈತಿ ನೋಡ್ರಿ."

ದೇಸಾಯಿ ಮಾತನಾಡಲಿಲ್ಲ. "ಹೂಂ" ಎಂದು ಮೆಲ್ಲಗೆ ರಾಗ ಎಳೆದ. ಶೇಖರ ಮುಂದುವರಿಸಿದ.

"ಹ್ಯಾಂಗಾದರ, ಒಳ್ಳೇ ಕೆಲಸಕ್ಕ ಸತ್ತವರನ್ನ ಜನ ಮರೆಯುವದಿಲ್ಲ. ಸಾವಿರಾರು ವರ್ಷಗಳವರೆಗೆ ಅವರನ್ನ ನೆನಸಿ ಪೂಜೆ ಮಾಡುತೈತಿ. ಅವರ ದೇಹ ನಾಶವಾಗಿ ಹೋದರೂ ಅವರ ಕೀರ್ತಿ ನಾಶ ಆಗುವದಿಲ್ಲ, ಅವರ ಹೆಸರು ನಾಶ ಆಗುವದಿಲ್ಲ. ಈ ನಕ್ಷತ್ರಗಳ ಹಾಂಗs ಬೆಳಗುತಿರತಾರ ಅವರು ಜನರ ಮನಸ್ಸಿನಾಗ."

"ನೀ ಹೇಳೂದು ನಿಜ ಶೇಖರಣ್ಣ. ಭಗತ್‌ಸಿಂಗ್, ಸುಖದೇವ್, ಧನ ಶೆಟ್ಟಿ ಮಲ್ಲಪ್ಪ, ಟೀಪು ಸುಲ್ತಾನ್, ಸಂಗೊಳ್ಳಿ ರಾಯಣ್ಣ, ಕಿತ್ತೂರ ಚೆನ್ನಮ್ಮ–

ಇವರೆಲ್ಲಾ ಸಾವಿರ ಸಾವಿರ ವರ್ಷ ಕಳೆದರೂ ಅಳಿಯದೆ ಇರ್ತಾರ. ಅದಕ್ಕೆ ಕಾರಣ ಇದೇ. ಅವರು ದೇಶಕ್ಕಾಗಿ ಮಾಡಿ ಮಡಿದವರು... ಹುತಾತ್ಮರು....."

"ಇಂದು ನಮ್ಮ ಸೀಮೆಯ ಏಳು ಜನರು ಹುತಾತ್ಮರಾದರು. ಜೈಲ ಹೊಂಗಲದೊಳಗ ಗೋಳೀಬಾರಿನಲ್ಲಿ ಮಡಿದರಂತೆ. ಇದೇ ಈಗ ಮಾಸ್ತರ್ ಹೇಳಿದರು...." ಎಂದು ವಿಷಾದದ ಧ್ವನಿಯಲ್ಲಿ ನುಡಿದು ಶೇಖರಪ್ಪ ಆ ವಿಷಯ ವನ್ನೆಲ್ಲ ವಿವರವಾಗಿ ತಿಳಿಸಿದ.

ಇಬ್ಬರೂ ಕೊಂಚ ಹೊತ್ತು ಮೌನವಾಗಿ ಮಲಗಿಕೊಂಡಿದ್ದರು. ಗಿಡ ಗಂಟೆ, ದಿನ್ನೆ ಮರಡಿಗಳ ಮೇಲೆಲ್ಲ ಬೆಳಕು ಬೀರುತ್ತ ಲಾರಿ ವಾಯುವೇಗದಿಂದ ಧಾವಿಸುತ್ತಿತು. ಯಾವುದೋ ಒಂದು ವಿಚಿತ್ರ ಹಕ್ಕಿಯ ರೆಕ್ಕೆಗಳ ಮೇಲೆ ಒರಗಿಕೊಂಡು ತಾವು ನಕ್ಷತ್ರಲೋಕಕ್ಕೆ ಸಾಗುತ್ತಿದ್ದ ಹಾಗೆ ಭಾಸವಾಯಿತು, ದೇಸಾಯಿಗೆ.

"ಮಾಯಾ, ಮಮತಾ ಎಲ್ಲವನ್ನೂ ಹರಿದೊಗೆದು ಈ ಚಳವಳಿಯೊಳಗ ಬೀಳಬೇಕು. ಜೀವದ ಹಂಗುದೊರೆದು ನಾವಿಂದು ಹೋರಾಡಬೇಕು. ಹೆಂಡರು ಮಕ್ಕಳು, ಮನಿಮಾರು ಅಂತ ಮನಸ್ಸಿನೊಳಗ ನೂರಾರು ಆಶಾ ಇದ್ದರ ಎಲ್ಲ ಶಕ್ತಿಯನ್ನೂ ದೇಶಕ್ಕೆ ಮುಡುಪಾಗಿಡೂದು ಕಷ್ಟವೇ. ಅಲ್ಲವೇನು?" ಎಂದ ದೇಸಾಯಿ.

ಆ ಮಾತಿನಲ್ಲಿ ತಥ್ಯವಿದೆಯೆಂಬುದನ್ನು ಒಪ್ಪಲೇಬೇಕಾಯಿತು ಶೇಖರ. ತನ್ನ ವಿಚಾರದಲ್ಲೂ ಆ ಮಾತು ಅನ್ವಯಿಸುವಂತಿದ್ದಿತು. ತಮ್ಮ ಮನೆತನದ ತೊಂದರೆ ತಾಪತ್ರಯಗಳೆಲ್ಲ ಅವನ ಬಗೆಗಣ್ಣಿನೆದುರಿಗೆ ಮೂಡಿದಂತಾಯಿತು. ಮೊದಲಿನಿಂದಲೂ ಬಡತನದ ಜೀವನ; ಸ್ವಂತ ಹೊಲವಿಲ್ಲದೆ ಅನ್ಯದರನ್ನು ಲಾವಣಿಗೆ ಹಿಡಿದು ಹಗಲೂ ರಾತ್ರಿ ಬೆವರು ಸುರಿಸಿ ಯಾವ ಸುಖವನ್ನೂ ಕಾಣದೆ ತಂದೆ ಸತ್ತುಹೋದುದು, ಲಾವಣಿಗೆ ಕೊಡುವ ಹಣವೂ ಹುಟ್ಟದೆ ಇದ್ದುದು, ಐವತ್ತೈದರ ಸೀಮೆಯನ್ನು ದಾಟಿದ ವೃದ್ಧ ತಾಯಿಯೂ ಉರಿಬಿಸಿಲಿನಲ್ಲಿ ಅನ್ಯರ ಹೊಲದಲ್ಲಿ ಕೂಲಿ ಮಾಡಿ ಸಂಸಾರ ಸಾಗಿಸುವ ಪ್ರಸಂಗ ಬಂದುದು, ನೂರು ತೊಂದರೆಗಳನ್ನು ಸಹಿಸಿಕೊಂಡು ಅಣ್ಣ ಲಿಂಗಣ್ಣ ಬಡ ಎತ್ತಿ ನಂತೆ ಸಂಸಾರದ ನೊಗ ಹೊತ್ತು ಎಳೆಯುತ್ತಿರುವುದು, ಅವನ ಭಾರವನ್ನು ಕೊಂಚವಾದರೂ ಕಡಿಮೆ ಮಾಡಬೇಕಾದದು ತನ್ನ ಕರ್ತವ್ಯವಾಗಿರುವಾಗ ಅದನ್ನು ನಿರ್ಲಕ್ಷಿಸಿ "ಚಳವಳಿ, ಕಾಂಗ್ರೆಸ್, ಸತ್ಯಾಗ್ರಹ, ಗ್ರಾಮೋದ್ಧಾರ"

ಎಂದು ತಾನು ಅಲೆಯುತ್ತಿರುವುದು, ಆದರೂ ಮನೆಯವರಾರೂ ಆ ಬಗ್ಗೆ ತುಟಿ ಪಿಟಕ್ಕೆನ್ನದಿರುವುದು....ಈಗ ಮತ್ತೆ ಪ್ರಾರಂಭವಾಯಿತು ಹೋರಾಟ. ತಾನಂತೂ ಚಳವಳಿಗೆ ಧುಮುಕಿದ್ದಾಯಿತು. ಕಲ್ಲಾಪುರವೂ ಧುಮುಕುತ್ತದೆ. ಆದರೆ ತನ್ನಿಂದ ತನ್ನ ಮನೆಯವರಿಗೆ ಎಂಥೆಂಥ ತೊಂದರೆ ಬರಲಿವೆಯೊ! ಮುಂದೆ ಯೋಚಿಸುವುದೂ ಸಾಧ್ಯವಾಗಲಿಲ್ಲ.

"ನೀವನ್ನೂದು ನಿಜ. ಯುದ್ಧಕ್ಕೆ ಹೊರಟ ಸೈನಿಕರಿಗೆ ಮನಿಮಾರು, ಕರುಳುಬಳ್ಳಿ, ಮಾಯಾ ಯಾವುದೂ ಇರಬಾರದು ಅನ್ನೋದೇನೂ ಸುಳ್ಳಲ್ಲ...." ಎಂದು ನುಡಿದು ಆಕಾಶದಲ್ಲಿ ಚೆಲ್ಲವರಿದಿದ್ದ ಚಿಕ್ಕೆಗಳನ್ನು ಶೂನ್ಯದೃಷ್ಟಿಯಿಂದ ನಿಟ್ಟಿಸತೊಡಗಿದ.

"ಹೋಗಲಿ ಬಿಡು ಆ ಮಾತು, ಶೇಖರಣ್ಣ. ಕಿತ್ತೂರಿನ ಸಭಾಕ್ಕ ಯಾರು ಯಾರು ಬರ್ತಾರಂತೆ?"

"ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳ ದೊಡ್ಡ ದೊಡ್ಡ ಮುಖಂಡರೆಲ್ಲ ಬರ್ತಾರಂತೆ. ನಮ್ಮ ಮಂತ್ರಿಮಹಾಶಯರೂ ಬರ್ತಾರಂತ ಸುದ್ದಿ."

ಕಿತ್ತೂರನ್ನು ತಲಪಿದ ಮೇಲೆ ಲಾರಿಯಿಂದಿಳಿದು, ಮಠದ ಮುಂದೆ ಹಾಯ್ದು ಅವರಿಬ್ಬರೂ ಕೋಟೆಯ ಕಡೆಗೆ ಹೊರಟಿದ್ದ ಹಾಗೆ ಎಲ್ಲಿಂದಲೋ ಮೆಲ್ಲಗಿನ ಸಿಳ್ಳಿನ ಧ್ವನಿ ಕೇಳಬಂದಿತು. ಒಡನೆಯೇ ನಾಲ್ಕಾರು ವ್ಯಕ್ತಿಗಳು ಬಂದು ಅವರಿಬ್ಬರನ್ನು ಕೂಡಿಕೊಂಡರು.

"ಯಾರ್ಯಾರು ಬಂದಿದ್ದಾರೆ ಸಂಗಣ್ಣ?" ಎಂದ ಶೇಖರ ಅವರಲ್ಲೊಬ್ಬ ನನ್ನು ಉದ್ದೇಶಿಸಿ.

"ಹದಿನೆಂಟು ಹತ್ತೊಂಬತ್ತು ಮಂದಿ ಬಂದಾರೆ."

"ಮಂತ್ರಿಗಳು?"

"ಅವರೂ ಬರುವವರಿದ್ದರು. ಆದರೆ ನೀವು ಬರುವ ಸುದ್ದಿ ಕೇಳಿ ಸಭೆಗೆ ಬರಲಿಲ್ಲ. ಹಾಗೇ ಹೊರಟುಹೋದರು."

"ದೊಡ್ಡ ಮುಖಂಡರಪ್ಪಾ ಅವರು. ನಮ್ಮಂಥಾ ಕಾರ್ಯಕರ್ತರ ಸಂಗಡ ಹ್ಯಾಂಗ ಕೆಲಸ ಮಾಡಿಯಾರು! ಬರ್ರಿ. ಅವರು ಕೈಕೊಟ್ಟರೂ ನಾವು ಹೆದರ ಬೇಕಾಗಿಲ್ಲ. ನಾವೇ ನಮ್ಮಿಂದಾದಷ್ಟು ಮಾಡೋಣ," ಎಂದು ನುಡಿದ ಶೇಖರ ವೇಗವಾಗಿ ಹೆಜ್ಜೆ ಹಾಕತೊಡಗಿದ.

ಕೋಟೆಯ ಮಹಾದ್ವಾರದ ಕಡೆಗೆ ಸಾಗಿದ್ದ ಹಾಗೆ ದೇಸಾಯಿಗೆ ಕಿತ್ತೂರಿನ ಗತ ಇತಿಹಾಸವೆಲ್ಲ ಜ್ಞಾಪಕವಾಯಿತು. ನೂರಾ ಇಪ್ಪತ್ತು ವರ್ಷಗಳ ಹಿಂದೆ ಅಲ್ಲಿ–ಅದೇ ಆ ನೆಲದ ಮೇಲೆ ನಡೆದ ಭೀಕರ ಯುದ್ಧದ ದೃಶ್ಯಗಳೆಲ್ಲ ಅವನ ಒಗೆ ಗಣ್ಣೆನೆದುರಿಗೆ ಸುಳಿದುಹೋದುವು. ತಾವೀಗ ಹೊರಟಿರುವ ಇದೇ ದಾರಿಯಲ್ಲಿ ಅಂದು ಕಿತ್ತೂರಿನ, ಕಿತ್ತೂರ ನಾಡಿನ ವೀರರ ನೆತ್ತರು ಹರಿದಿತ್ತು. ಕೋಟೆಯನ್ನು ಮುತ್ತಲು ಬಂದಿದ್ದ ಆಂಗ್ಲ ಸೈನ್ಯವನ್ನು ಸೋಲಿಸಿ ಓಡಿಸುವುದಕ್ಕಾಗಿ ಆ ಕಡೆಯಿಂದ ಕಿತ್ತೂರಿನ ಕುದುರೆಗಳು ಧಾವಿಸಿ ಬಂದಿದ್ದುವು. ಅಲ್ಲಿಯೆ ಬಂದೂಕು ಹಾರಿದ್ದುವು! ಇಲ್ಲಿಯೆ ಕತ್ತಿಗಳು ತಾಕಲಾಡಿದ್ದುವು! ಕಿತ್ತೂರಿನ ಸ್ವಾತಂತ್ರ್ಯವನ್ನಪಹರಿಸಲು ಬಂದಿದ್ದ ಧಾರವಾಡದ ಕಲೆಕ್ಟರ್ ಥ್ಯಾಕರೆ.... ಮುಚ್ಚಿದ್ದ ಮಹಾದ್ವಾರವನ್ನು ತೆರೆಯಲು ಆತ ಒತ್ತಾಯಪಡಿಸಿದ್ದುದು, ಕಿತ್ತೂರಿನ ಜನ ಅ ಬೇಡಿಕೆಗೆ ಸೊಪ್ಪುಹಾಕದಿದ್ದುದು; ಅದೋ! ಎದುರಿಗೆ ಅಸ್ಫುಟವಾಗಿ ಎದ್ದುಕಾಣುತ್ತಿರುವ ಆ ಕೊತ್ತಳದ ಮೇಲಿಂದಲೇ ಥ್ಯಾಕರೆಗೆ ಗುಂಡು ಹಾಕಿರಬೇಕು ಅಮಟೂರ ಬಾಳಪ್ಪ....ಇಲ್ಲೇ ಉರುಳಿ ಬಿದ್ದಿರಬೇಕು ಥ್ಯಾಕರೆ....ಅನಂತರ ನಡೆದ ಆ ಘನ ಘೋರ ಸಂಗ್ರಾಮ....ಬೆಳಗಾವಿಯಿಂದ ಬಂದೆರಗಿದ ಆ ಆಂಗ್ಲ ದಂಡು....ತೋಪು, ಮದ್ದು, ಗುಂಡು....ಒಳಗಡೆ ಕೋಟೆಯಲ್ಲಿ ವಿಶ್ವಾಸಘಾತ ನಡೆದು ಮದ್ದಿನ ಸಂಗ್ರಹ ನಿರುಪಯೋಗಿಯಾದಾಗ ಮಾಡುವ ಇಲ್ಲವೆ ಮಡಿಯುವ ಆವೇಶದಿಂದ ಅರಮನೆಯನ್ನು ತೊರೆದು, ಗಂಡುಗಚ್ಚೆ ಹಾಕಿ, ಹಿರಿದ ಕತ್ತಿಯನ್ನು ಝಳಪಿಸುತ್ತ ಕುದುರೆಯನ್ನೇರಿ ಬಂದು ಮುನ್ನುಗ್ಗುತ್ತಿದ್ದ ವೈರಿ ಸೈನ್ಯವನ್ನು ತುಂಡರಿಸಿದ ಆ ಚೆನ್ನಮ್ಮರಾಣಿ–ಕನ್ನಡ ನಾಡಿನ ಹೆಮ್ಮೆಯ ಪುತ್ಥಳಿ ಚೆನ್ನಮ್ಮರಾಣಿ......ದೇಸಾಯಿಯ ಶರೀರದಲ್ಲಿ ಮಿಂಚು ಹರಿದಂತಾಯಿತು. ೧೯೪೨ರಲ್ಲಿ ತಾನು ಬದುಕಿರುವ ವಿಚಾರ ಮರೆತುಹೋಗಿ, ೧೮೨೪ರ ಆ ಸ್ವತಂತ್ರ ಯುಗದಲ್ಲೇ ಜೀವಿಸಿದ್ದ ಹಾಗೆ ಭಾಸವಾಯಿತು. ಕೋಟೆಯನ್ನು ಕಾಪಾಡುವುದಕ್ಕಾಗಿ, ಸ್ವಾತಂತ್ರ್ಯವನ್ನು ರಕ್ಷಿಸುವುದಕ್ಕಾಗಿ ರಾಣಿಯ ಕರೆ ಬಂದುದರಿಂದ ಸಾವಿರಾರು ವೀರಭಟರ ಜತೆಗೆ ಅಲ್ಲಿಗೆ ತಾನೂ ಧಾವಿಸಿ ಬರುತ್ತಿದ್ದ ಹಾಗೆ ತೋರತೊಡಗಿತು. ಅವನ ಮುಷ್ಟಿಯಲ್ಲಿ ಅಪಾರ ಶಕ್ತಿ ತುಂಬಿ ಬಂದಂತಾಯಿತು; ಬಿಚ್ಚುಗತ್ತಿಯೊಂದು ಅದರಲ್ಲಿ ಸಿದ್ಧವಾಗಿದ್ದ ಹಾಗೆ ತೋರಿತು. ನೂರು ಜನರನ್ನು ಎದುರಿಸಿ ಹಿಮ್ಮೆಟ್ಟಿಸಬಲ್ಲ ಶಕ್ತಿ ತನ್ನಲ್ಲಿದ್ದಂತೆ ಭಾಸವಾಯಿತು.

ಕೋಟೆಯ ಮಹಾದ್ವಾರವನ್ನು ದಾಟಿದಾಗ ಅಲ್ಲಿ ವೈವೆತ್ತು ನಿಂತಿದ್ದ ಶ್ಮಶಾನ ಅವನ ದೃಷ್ಟಿಗೆ ಬಿದ್ದಿತು. ಒಡನೆಯೇ ಗತಕಾಲದ ವಾತಾವರಣದಿಂದ ಆತ ಗತಕಾಲದ ವಾಸ್ತವ ಪ್ರಪಂಚಕ್ಕಿಳಿದು ಬಂದ. ವೀರಾಧಿವೀರರು, ವೀರ ವನಿತೆಯರು ವೈಭವದಿಂದ ಮೆರೆದ ಈ ಕೋಟೆಯಲ್ಲಿ ಇಂದು ಹೆಬ್ಬಾಗಿಲಲ್ಲಿಯೆ ಮೆರೆಯುತ್ತಿರುವುದು ಶ್ಮಶಾನ! ನಮ್ಮ ಜನದ ಅಭಿಮಾನಶೂನ್ಯತೆ, ಬುದ್ಧಿಗೇಡಿ ತನಗಳ ಬಗ್ಗೆ ಅವನಿಗೆ ತಿರಸ್ಕಾರ ಬರದಿರಲಿಲ್ಲ. ಹಿಂದುಸ್ಥಾನದ ಪ್ರದೇಶಗಳನ್ನೆಲ್ಲ ಒಂದೊಂದಾಗಿ ನುಂಗುತ್ತಿದ್ದ ಬ್ರಿಟಿಷ್ ಸರಕಾರವನ್ನೆದುರಿಸಿ ನಿಂತು ಮೊತ್ತ ಮೊದಲನೆಯ ಬಾರಿ ಅದಕ್ಕೆ "ತೊಲಗಾಚೆ" ಎಂದು ಗದರಿಸಿ, ನಾಡಿನ ಸ್ವಾತಂತ್ರ್ಯಕ್ಕಾಗಿ ನೆತ್ತರು ಚೆಲ್ಲಿದ ಹುತಾತ್ಮರ ಪಾದಗಳಿಂದ ಪುನೀತವಾದ ಈ ಕೋಟೆಯನ್ನು ಸುಡುಗಾಡನ್ನಾಗಿ ಮಾರ್ಪಡಿಸುವುದುಂಟೇ! ಇದೇ ಸ್ಥಳವೇ ಬೇಕಿದ್ದಿತೇ ಈ ಜನರ ಶವಗಳಿಗೆ! ಬೇರಾವ ಸ್ಥಳವೂ ದೊರೆಯಲಿಲ್ಲವೆ! ನಮ್ಮ ಪೂರ್ವಜರ ದಿವ್ಯಸ್ಫೂರ್ತಿಯ ಕುರುಹಾಗಿ ಈ ಕೋಟೆಯನ್ನು ಕೊನೆಯವರೆಗೂ ಸುರಕ್ಷಿತವಾಗಿ, ಅಂದವಾಗಿ ಕಾದಿರಿಸಬೇಕಾದುದು ನಮ್ಮ ಕರ್ತವ್ಯವಾಗಿರುವಾಗ ಅದನ್ನು ಕಡೆಗಣಿಸಿ ಇದನ್ನೊಂದು ಸುಡುಗಾಡನ್ನಾಗಿ ಮಾಡಿರುವರಲ್ಲ! ಅಲ್ಲಲ್ಲಿ ಸುರಿದ ಬೂದಿ, ಅತ್ತ ಇತ್ತ ಬಿದ್ದಿದ್ದ ಬಿದಿರಿನ ಸಿದಿಗೆಗಳು, ಶವದ ಬಟ್ಟೆಯ ಹೊಲಸು ತುಂಡುಗಳು, ಒಡೆದು ಗಡಿಗೆಗಳು! ಉದ್ವೇಗದಿಂದ ನಿಟ್ಟುಸಿರೊಂದನ್ನು ಬಿಟ್ಟು ಮುಂದುವರಿದ ದೇಸಾಯಿ.

ಕಲ್ಲು, ಮುಳ್ಳು, ಗಿಡಗಂಟೆಗಳಿಂದ ತುಂಬಿದ್ದ ಕಾಲುದಾರಿಯಲ್ಲಿ ನಡೆದು ಅವರು ಹಾಳುಬಿದ್ದ ಅರಮನೆಯ ಬಳಿ ಬಂದರು. ಆ ಅರಮನೆ! ಬೆಳಗಿನ ಜಾವದ ಮಂದ ಚಂದ್ರಪ್ರಕಾಶದಲ್ಲಿ ಅಸ್ಥಿಪಂಜರದ ಹಾಗೆ ಅಕರಾಳ ವಿಕರಾಳ ವಾಗಿ ಕಾಣುತ್ತಿದ್ದ ಆ ಅರಮನೆ! ಅದರ ದುರ್ಗತಿಯನ್ನು ದಿಟ್ಟಿಸುತ್ತಲೂ ಕತ್ತು ಬಿಗಿದುಬಂದಂತಾಯಿತು ದೇಸಾಯಿಗೆ. ನೂರಾ ಇಪ್ಪತ್ತು ವರ್ಷಗಳಿಗೆ ಹಿಂದೆ ವೈಭವದಿಂದ ಮೆರೆದ ಆ ಭವ್ಯ ಅರಮನೆ ಇಂದು ಎಲ್ಲ ಕಡೆಗಳಲ್ಲೂ ಬಿದ್ದುಹೋಗಿ ಹಾಳುಸುರಿಯುತ್ತಿದೆ. ಅಂದು ದರಬಾರು ನೆರೆಯಿಸುತ್ತಿದ್ದ ಸುಂದರ ಪ್ರಾಕಾರ ದಲ್ಲಿ ಇಂದು ಮುಳ್ಳು ಹುಲ್ಲು ಆಳೆತ್ತರ ಬೆಳೆದಿದೆ. ಅಂದು ಚೆನ್ನಮ್ಮರಾಣಿ ಮಲಗುವ ಕೋಣೆಯಾಗಿರಬಹುದಾದ ಸ್ಥಳದಲ್ಲಿ ಇಂದು ನರಿ ನಾಯಿ ನಿದ್ರಿಸು

ತ್ತಿವೆ. ತಮ್ಮನ್ನು ಪ್ರತಿಭಟಿಸಿದುದಕ್ಕಾಗಿ ಆ ಆಂಗ್ಲರು ಈ ರೀತಿ ಸೇಡು ತೀರಿಸಿಕೊಂಡರಲ್ಲವೆ, ನಮ್ಮ ಕೋಟೆಯ ಮೇಲೆ! ತೋಫು ಹಾರಿಸಿ ಇದನ್ನೆಲ್ಲ ಚೂರು ಚೂರು ಮಾಡಿದರಲ್ಲವೆ! ಅರಮನೆಯನ್ನೆಲ್ಲ ಒಡೆದು ಸುಲಿದು ಸೂರೆಗೊಂಡರಲ್ಲವೆ! ಕಿತ್ತೂರಿನ ಈ ಕೋಟೆ ಬಿದ್ದು ಪರತಂತ್ರವಾಯಿತು ಕರ್ನಾಟಕ; ಆಂಗ್ಲರ ದಾಸ್ಯದಡಿಗೆ ಸಿಲುಕಿಕೊಂಡಿತು, ಈಗ ಮತ್ತೆ ಈ ಕಿತ್ತೂರೇ ಏಳಬೇಕು. ಕರ್ನಾಟಕದ ಜನಕ್ಕೆಲ್ಲ ಈ ಕೋಟೆಯಿಂದಲೇ ಸ್ಫೂರ್ತಿ ದೊರೆಯಬೇಕು. "ಮಾಡುವೆವು–ಇಲ್ಲ–ಮಡಿಯುವೆವು!" ಎಂದು ಅಂದು ವೀರಪ್ರತಿಜ್ಞೆ ಸ್ವೀಕರಿಸಿ ಕನ್ನಡ ಬಂಟರು ಮಾಡುತ್ತ ಮಾಡುತ್ತ ಮಡಿದ ಹಾಗೆ ಇಂದೂ ನಾವು ಮಾಡುತ್ತ ಮಾಡುತ್ತ ಮಡಿಯಬೇಕು.

ಭಾವನಾವೇಗದಿಂದ ದೇಸಾಯಿಯ ಕಣ್ಣುಗಳಲ್ಲಿ ನೀರೂರಿತು. ಕೋಟೆಯ ಮೇಲೆ ದೃಷ್ಟಿ ಚೆಲ್ಲಿದಷ್ಟೂ ಉದ್ರೇಕ ಹೆಚ್ಚುತ್ತಲೇ ಇತ್ತು.

ಅಷ್ಟರಲ್ಲಿ ಗುಂಪಿನವರೆಲ್ಲ ಆ ಹಾಳು ಅರಮನೆಯ ಅಂಗಳದಲ್ಲಿ ಒಟ್ಟುಗೂಡಿದ್ದರು. ಎಲ್ಲಕ್ಕೂ ಮೊದಲು, ಅವರೆಲ್ಲರೂ ಅಲ್ಲಿನ ನೆಲದ ಮಣ್ಣನ್ನು ಕೈಯ್ಯಲ್ಲಿ ತೆಗೆದುಕೊಂಡು ನಿಷ್ಠೆಯಿಂದ ಹಣೆಗೊತ್ತಿಕೊಂಡರು. ಕನಸಿನ ಲೋಕದಲ್ಲಿದ್ದವರ ಹಾಗೆ ದೇಸಾಯಿ ಅವರನ್ನು ಅನುಕರಿಸುತ್ತಿದ್ದ. ಮೂರು ಮೂರು ಸಲ ಈ ರೀತಿ ಮಾಡಿದ ತರುವಾಯ ಶೇಖರ ಉಚ್ಚಸ್ವರದಿಂದ ಕೂಗಿ ಹೇಳಿದ:

"ಇಂದಿನಿಂದ ನಮ್ಮ ಯುದ್ಧ ಆರಂಭವಾಯ್ತು. ಪ್ರಾಣ ಹೋಗುವ ತನಕ ನಾವಾರೂ ಹಿಂದೆ ಹೊರಳಕೂಡದು. ಹಾಗೆ ತಯಾರಾಗಿರುವವರು ಮಾತ್ರ ನಮ್ಮ ಗುಂಪಿಗೆ ಸೇರಬೇಕು. ತಾಯಿ ಚೆನ್ನಮ್ಮನ ಪಾದ ನೆನಸಿಕೊಂಡು ಪಣಾ ಮಾಡಿರಿ. ನಾವು ಮಾಡುವೆವು–ಇಲ್ಲ ಮಡಿಯುವೆವು–ಅಂತ!"

ಒಡನೆಯೆ ಅಲ್ಲಿ ಕೂಡಿದವರೆಲ್ಲರೂ ಏಕ ಕಂಠದಿಂದ ಘೋಷಿಸಿದರು:

"ತಾಯಿ ಚೆನ್ನಮ್ಮನ ಆಣೆ–ನಾವು ಮಾಡುವೆವು–ಇಲ್ಲ–ಮಡಿಯುವೆವು!"

ಶೇಖರ ಮಾತನಾಡತೊಡಗಿದ:

"ಅವ್ವ ಚೆನ್ನವ್ವನ ಸ್ಫೂರ್ತಿ ನಮ್ಮನ್ನು ಹರಸಲಿ. ಅಣ್ಣ ರಾಯಣ್ಣನ ಸ್ಫೂರ್ತಿ ನಮ್ಮನ್ನು ಹರಸಲಿ. ಈ ದೇಶದಿಂದ ಬಿಳಿಯರನ್ನ ಹೊಡೆದೋಡಿಸಲಿಕ್ಕೆ ಅವರಿಬ್ಬರೂ ಪ್ರಾಣ ಕೊಟ್ಟರು. ಅವರು ಅಂದು ಹಿಡಿದ ಕಾರ್ಯ ಕೈಗೂಡಲಿಲ್ಲ. ಆದರೇನು? ಅವರ ಬಲಿದಾನ ವ್ಯರ್ಥಹೋಗಲಿಲ್ಲ.

ಅವರು ಅಂದು ಬಿಟ್ಟುಹೋದ ಕತ್ತಿಗಳನ್ನೇ ನಾವಿಂದು ಮತ್ತೆ ಎತ್ತಿಕೊಳ್ಳಬೇಕು. ಅಂದು ಚೆನ್ನಮ್ಮರಾಣಿಯ ಅಪ್ಪಣೆಯಾಗಿತ್ತು. ಇಂದು ಗಾಂಧೀ ಮಹಾರಾಜನ ಅಪ್ಪಣೆ ಆಗ್ಯೆತಿ. ಬ್ರಿಟಿಷರನ್ನ ಹಿಂದುಸ್ಥಾನದಿಂದ ತೊಲಗಿಸಬೇಕು. ಅದಕ್ಕಾಗಿ ನಾವು ಕಡೆಯ ತನಕ ಹೋರಾಡಬೇಕು. ಈಗ ನಾವು ಮುಂದಿನ ಕಾರ್ಯ ಕ್ರಮವನ್ನು ಸಿದ್ಧಗೊಳಿಸಬೇಕು. ಎಲ್ಲರೂ ನಿಮ್ಮ ನಿಮ್ಮ ವಿಚಾರಗಳನ್ನು ತಿಳಿಸಬೇಕು."

ಸಭೆಯ ಕಾರ್ಯಕಲಾಪಗಳಿಗೆ ನೊದಲಾಯಿತು.



೮

"ದುಮ್ ದುಮ್ ದುಮ್ ದುಮ್ ದುಮ್ ದುಮ್
ದುಮ್ ದುಮ್...."

ಮಾಸ್ತರರ ಕೈಯಲ್ಲಿದ್ದ ರಣಹಲಗೆ ಧ್ವನಿ ಮಾಡುತ್ತಲೂ ಅಲ್ಲಿ ನೆರೆದಿದ್ದ ಸಾವಿರಾರು ಜನರ ಮೈಮನಗಳೆರಡೂ ಪುಲಕಗೊಂಡಂತಾದುವು. ಬಸವಣ್ಣನ ಗುಡಿಯ ಮುಂದಿನ ಎತ್ತರವಾದ ಕಟ್ಟೆಯ ಮೇಲೆ ಗಂಡುಠೀವಿಯಲ್ಲಿ ಎದೆಯುಬ್ಬಿಸಿ ನಿಂತು ಮಾಸ್ತರರು ವೀರಗೀತ ಹೇಳಲು ಅಣಿಯಾಗಿದ್ದರು. ಅವರು ಹಾಡುವ ರೆಂದರೆ ಕೇಳಬೇಕೇ! ಕಲ್ಲಾಪುರಕ್ಕೆ ಕಲ್ಲಾಪುರವೆಲ್ಲವೂ ಗುಡಿಯ ಮುಂದಿನ ವಿಶಾಲವಾದ ಅಂಗಳದಲ್ಲಿ ತುಂಬಿಕೊಂಡಿದ್ದಿತು. ಅಕ್ಕಪಕ್ಕದ ಹಳ್ಳಿಗಳಿಂದಲೂ ನೂರಾರು ಜನ ಬಂದು ಸೇರಿದ್ದಿತು. ರಾತ್ರಿ ಹತ್ತು ಗಂಟೆಯಾಗಿರಬಹುದು. ದೇವಾಲಯದ ಎದುರಿಗೆ ಎಂಟು ಹತ್ತು ಎಣ್ಣೆಯ ಕೊಳ್ಳಿ ಝುಗಝುಗಿಸುತ್ತಿದ್ದುವು. ಕಟ್ಟೆಯ ಮೇಲೆ ನಿಂತು ಹಲಗೆಯನ್ನು ಶ್ರುತಿಗೊಳಿಸುತ್ತಿದ್ದ ಮಾಸ್ತರರ ಮುಖದ ಮೇಲೆ ಸಾವಿರಾರು ದೃಷ್ಟಿಗಳು ಕೇಂದ್ರೀಕೃತವಾಗಿದ್ದುವು. ಮಾಸ್ತರರ ಅಕ್ಕ ಪಕ್ಕದಲ್ಲಿ ಶೇಖರಪ್ಪನೂ ಅವನ ಗುಂಪಿನ ಯುವಕರೂ, ಊರಿನ ಹಿರಿಯರೂ ಕುಳಿತುಕೊಂಡಿದ್ದರು.

ತೊಟ್ಟಿದ್ದ ನೆಹರೂ ಬನೀಸಿನ ತೋಳನ್ನು ಮೇಲಕ್ಕೆತ್ತಿ ದುಮುದುಮಿ ಹಲಗೆಯನ್ನು ಬಾರಿಸುತ್ತ ಮಾಸ್ತರರು ಉಚ್ಚಕಂಠದಲ್ಲಿ ಹೇಳತೊಡಗಿದರು :

“ ಏಳಿರೋ !
ಏಳಿರೋ, ಏಳಿರೋ ಏಳಿರೋ !
ತಾಯಿಯಾ ಹೊಟ್ಯಾಗ ಹುಟ್ಟಿದವರೆಲ್ಲಾ ಏಳಿರೋ !
ಗಂಡು ಹೆಣ್ಣು ಕೂಸು ಕುನ್ನಿ ಎಲ್ಲಾ ಏಳಿರೋ
ಕಿತ್ತೂರ ಚೆನ್ನವ್ವನ ಮಕ್ಕಳೆಲ್ಲಾ ಏಳಿರೋ
ಬೆಳವಡಿ ಮಲ್ಲವ್ವನ ಮಕ್ಕಳೆಲ್ಲಾ ಏಳಿರೋ
ಸಂಗೊಳ್ಳಿ ರಾಯಣ್ಣನ ಗರಡಿಯವರೆಲ್ಲಾ ಏಳಿರೋ
ಸಿಂಧೂರ ಲಕ್ಷ್ಮಣನ ಗರಡಿಯವರೆಲ್ಲಾ ಏಳಿರೋ
ವಾಲೀ ಚೆನ್ನಪ್ಪನ ದಂಡಿನವರೆಲ್ಲಾ ಏಳಿರೋ
ಬಂಟ ಶೇಕ್ರಪ್ಪನ ಹಿಂಡಿನವರೆಲ್ಲಾ ಏಳಿರೋ
ಪುಂಡ ಕಿತ್ತೂರಿನ ಗಂಡಸರೆಲ್ಲಾ ಏಳಿರೋ
ಏಳಿರೋ !
ಏಳಿರೋ ! ಏಳಿರೋ ! ಏಳಿರೋ !”

ಮೈಮರೆತು ನಿಂತು ಮಾಸ್ತರರು ಹಾಡುತ್ತಿದ್ದರು. “ ಏಳಿರೋ ! ಏಳಿರೋ!” ಎಂಬ ಆ ವೀರ ಆವಾಹನ! ಜನ ರೋಮಾಂಚಗೊಂಡು ಅವರನ್ನೇ ನಿಟ್ಟಿಸುತ್ತಿದ್ದಿತು. ಮಾಸ್ತರರು ಮುಂದೆ ಸಾಗಿದ್ದರು :

“ಹೊಲಾ ಬಿಟ್ಟು ಏಳಿರೋ
ಮನೀ ಬಿಟ್ಟು ಏಳಿರೋ
ತೋಟಾ ಬಿಟ್ಟು ಏಳಿರೋ
ಊಟಾ ಬಿಟ್ಟು ಏಳಿರೋ
ತಂದೆ ಗಾಂಧಿ ಒಂದೇ ಒಂದು
ಮಾತು ನಿಮಗೆ ಹೇಳಿದಾನೆ
ಕಿವಿಗೊಟ್ಟು ಕೇಳಿರೋ
ಮನಗೊಟ್ಟು ಕೇಳಿರೋ !
ದುಮ್ ದುಮ್ ದುಮ್ ದುಮ್ !”

ಕಣ್ಣು, ಕಿವಿ, ಮನಗಳನ್ನೆಲ್ಲ ಮಾಸ್ತರರಲ್ಲಿಯೆ ನಿಲ್ಲಿಸಿ ಜನ ಹಾಡು ಕೇಳುತ್ತಿದ್ದಿತು. ಒಂದು ಕ್ಷಣ ಅವರು ತಡೆದು ನಿಂತರು. ಹಣೆಯ ಮೇಲೆ ಮೂಡಿದ್ದ ಬೆವರ ಹನಿಗಳನ್ನು ಒರೆಸಿಕೊಂಡು ಮತ್ತೆ ಪ್ರಾರಂಭಿಸಿದರು :

“ ಕೇಳಿರೋ !
ಕಿವಿ ಇದ್ದವರೆಲ್ಲಾ ಕೇಳಿರೋ
ಎದಿ ಇದ್ದವರೆಲ್ಲಾ ಕೇಳಿರೋ....
ಸುಳ್ಳು ಗಿಳ್ಳು ಮಾತಲ್ಲ
ಅಳ್ಳು ಮಳ್ಳು ಮಾತಲ್ಲ—

ಕಣ್ಣಾರ ಕಂಡೀನ್ರಪ್ಪ ಮುಂಬಯಿಯ ಶಾರದಾಗ
ಇನ್ನೂ ಮಬ್ಬುಗತ್ತಲಾಗ, ಚಿಕ್ಕಿ ಚಿಕ್ಕಿ ಬೆಳಕಿನಾಗ
ಶಾರಕ್ಕ ಶಾರೆಲ್ಲ ಕಣ್ಣು ಮುಚ್ಚಿ ಮಲಗಿದಾಗ
ದೇವರಂಗ ಮಲಗಿಕೊಂಡು ನಿದ್ದೀ ಮಾಡುತ್ತಿದ್ದನ್ರಪ್ಪ
ನಮ್ಮ ನಿಮ್ಮ ಎಲ್ಲಾ ಮಂದೀ ತಂದಿ ನಮ್ಮ ಗಾಂಧೆಪ್ಪ
ದೇವಿಯಂಗ ಮಲಗಿಕೊಂಡು ನಿದ್ದೀ ಮಾಡುತ್ತಿದ್ದಳ್ರಪ್ಪ
ನಮ್ಮ ನಿಮ್ಮ ಎಲ್ಲಾ ಮಂದೀ ತಾಯಿ ನಮ್ಮ ಕಸ್ತೂರೆವ್ವ
ಮಕ್ಕಳಂಗ ಮಲಗಿಕೊಂಡು ನಿದ್ದೀ ಮಾಡುತ್ತಿದ್ದರಪ್ಪ
ಜವಹರಲಾಲ್ ನೆಹರೂ ಮತ್ತು ಸರದಾರ್ ಪಟೇಲಪ್ಪ

ನಿದ್ದೀ ಮಾಡೂ ಹೊತ್ತಿನಾಗ
ಸದ್ದು ಮಾಡದೆ ಕಳ್ಳರಾಂಗ
ಒಬ್ಬೊಬ್ಬರೇ ಮೆಲ್ಲಮೆಲ್ಲಗ
ಪೋಲೀಸರು ಬಂದಾರ ಒಳಗ

ನಿದ್ದೀ ಕೆಡಿಸಿ ಎಬ್ಬಿಸ್ಯಾರೋ ಗಾಂಧೀ ಮಾರಾಜನ್ನ
ಅವ್ವ ಕಸ್ತೂರಿಬಾಯಿನ್ನ, ಅಣ್ಣ ಜವಹರಲಾಲನ್ನ
ಸರ್ದಾರ್ ಪಟೇಲಪ್ಪನ್ನ, ಮಾದೇವ ದೇಸಾಯಪ್ಪನ್ನ
ಒಯ್ದು ಕೂಡಿಸಿಬಿಟ್ಟಾರೋ ಮೋಟಾರ ಗಾಡಿಯೊಳಗ....
ಎಲ್ಲಿಗೊಯ್ದುರೋ ಏನೋ, ಯಾವ ದೇಶದೊಳಗ !

ಕೇಳಿರೋ !
ಕಿವೀ ಇದ್ದವರೆಲ್ಲಾ ಕೇಳಿರೋ !
ಸುಳ್ಳು ಗಿಳ್ಳು ಮಾತಲ್ಲ
ಅಳ್ಳು ಮಳ್ಳು ಮಾತಲ್ಲ....

ಕಣ್ಣಾರ ಕಂಡೀನ್ರಪ್ಪ ಮುಂಬಯಿಯ ಶಾರದಾಗ
ದುವ್ ದುವ್ ದುವ್ ದುವ್ ದುವ್ಽಽ !"

ಮಾಸ್ತರರು ಕೊಂಚ ತಡೆದು ನಿಂತರು. ಒಂದು ಸಲ ಕೆಮ್ಮಿ ಕಂಠವನ್ನು ಹದಗೊಳಿಸಿಕೊಂಡರು. ನೆರೆದಿದ್ದ ಜನರ ಮೇಲೆಲ್ಲ ಒಂದು ಬಾರಿ ದೃಷ್ಟಿಯನ್ನು ಓಡಾಡಿಸಿದರು. ಸಾವಿರಾರು ಮುಖಗಳ ಮೇಲೆಲ್ಲ ಕಳವಳ, ವ್ಯಥೆ, ಉದ್ವೇಗ ತುಂಬಿಬಂದಿದ್ದುದನ್ನು ಕೊಳ್ಳಿಗಳ ಬೆಳಕು ಸ್ಪಷ್ಟವಾಗಿ ತೋರಿಸುತ್ತಿದ್ದಿತು. ತನ್ನ ಹಾಡಿನಿಂದ ಹಳ್ಳಿಗರ ಮೇಲಾಗುತ್ತಿದ್ದ ಪರಿಣಾಮನ್ನು ನಿರೀಕ್ಷಿಸಿದಾಗ ಅವರಿಗೆ ಇನ್ನೂ ಉತ್ಸಾಹ ಉಕ್ಕೇರಿಬಂದಿತು. ಮೊದಲಿಗಿಂತಲೂ ಸ್ಫೂರ್ತಿದಾಯಕವಾದ ಧ್ವನಿಯಲ್ಲಿ ಮಾಸ್ತರರು ಹಾಡತೊಡಗಿದರು :

" ಮಿಾಸೀ ಹೊತ್ತ ಗಂಡಸರೆಲ್ಲಾ ಕೇಳಿರೋ !
ತಂದಿ ಗಾಂಧಿ ಒಂದೇ ಒಂದು
ಮಾತು ನಿಮಗ ಹೇಳಿದಾನೆ,
ಕೇಳಿರೋ !
ಸುಳ್ಳು ಗಿಳ್ಳು ಮಾತಲ್ಲ
ಅಳ್ಳು ಮಳ್ಳು ಮಾತಲ್ಲ !

ಕಿವಿಯಾರ ಕೇಳೀನ್ರಪ್ಪ ಮುಂಬಯಿಯ ಶಾರದಾಗ
ಲಕ್ಷ ಮಂದಿ ಸೇರಿದಂಥಾ ಕಾಂಗ್ರೆಸ್ ಸಭಾದಾಗ !

ಕೈಯೆತ್ತಿ, ಧ್ವನಿ ಎತ್ತಿ
ತ್ರಿರಂಗದ ಧ್ವಜಾ ಎತ್ತಿ
ಹೇಳಿದಾನ ಒಂದೇ ಮಾತ
ಇಂಗ್ಲೀಷ್ ಸರಕಾರಕ್ಕಂತ

ಚಲೇ ಜಾವ್, ಚಲೇ ಜಾವ್
ನಡೀರಿ ನೀವು, ನಡೀರಿ ಹೊರಗ
ನಡೀರಿ ನಮ್ಮ ದೇಶಾ ಬಿಟ್ಟು

ಇನ್ನು ಸಾಕಾಯ್ತುಪಾ ನಮಗ ನಿಮ್ಮ ದರಬಾರಾ
ಇನ್ನು ಸಾಕಾಯ್ತುಪಾ ನಮಗ ನಿಮ್ಮ ಸರಕಾರಾ
ಇನ್ನು ಸಾಕಾಯ್ತುಪಾ ನಮಗ ನಿಮ್ಮ ಅಧಿಕಾರಾ
ನಾವಿನ್ನು ಸ್ವತಂತ್ರಾ! ನಾವಿನ್ನು ಸ್ವತಂತ್ರಾ!
ಇನ್ನು ವ್ಯಾಲ ನಾವೇ ನಮ್ಮ ಸರಕಾರಾ
ಹೊಲದಾಗಿನ ರೈತರ ಸರಕಾರಾ
ಗಿರಣ್ಯಾಗಿನ ಕೂಲಿಯವರ ಸರಕಾರಾ
ಇನ್ನಿಲ್ಲೋ ಇಂಗ್ಲಿಷರ ದಂಡರಾಜ್ಯಾ
ಇನ್ನು ವ್ಯಾಲ ಹಿಂದೀಯರ ರಾಮರಾಜ್ಯಾ
ಡುಮ್ ಡುಮ್ ಡುಮ್ ಡುಮ್ ಡುಮ್"

ಮಂತ್ರಮುಗ್ಧರಾದವರಂತೆ ಜನರೆಲ್ಲರೂ ಹಾಡು ಕೇಳುತ್ತಿದ್ದರು. ಶೇಖರಪ್ಪನೂ ಅವರ ಗುಂಪಿನವರೂ ಎವೆಯಿಕ್ಕದೆ ಜನರನ್ನು ನಿರೀಕ್ಷಿಸುತ್ತಿದ್ದರು. ಮಾಸ್ತರರು ಸ್ವಯಂಸ್ಫೂರ್ತಿಯಿಂದ ಕಟ್ಟಿದ್ದ ಈ ಸಾದಾ ಹಾಡಿನಿಂದ ಹಳ್ಳಿಗರು ಇಷ್ಟೊಂದು ಪ್ರಭಾವಿತರಾಗಬಹುದೆಂದು ಅವರು ನಿರೀಕ್ಷಿಸಿಕೊಂಡಿರಲಿಲ್ಲ. ಹರಿಕಥೆ, ಶಿವಕಥೆ, ಲಾವಣಿ, ಗೀಗೀ ಪದಗಳೆಂದರೆ ಹಳ್ಳಿಗರಿಗೆ ತುಂಬ ಪ್ರೀತಿ. ಅವುಗಳ ಧಾಟಿಯಲ್ಲೂ ಬರೆದುದಾಗಿರಲಿಲ್ಲ, ಈ ಹಾಡು. ಆದರೂ ಹಾಡಿನ ವಿಷಯ, ಅದನ್ನು ಹೇಳುವ ರೀತಿ, ಹೇಳುವವನ ಅಕೃತ್ರಿಮ ಆವೇಶ ಹಳ್ಳಿಗರನ್ನು ಮುಗ್ಧಗೊಳಿಸಿತ್ತು. ತನ್ನ ಹಾಡಿನಿಂದ ಇಂಥ ಅದ್ಭುತ ಪರಿಣಾಮವಾದೀತೆಂದು ಮಾಸ್ತರರೂ ಊಹಿಸಿಕೊಂಡಿರಲಿಲ್ಲ. ಮೊದಲು ಕಲ್ಲಾಪುರದಲ್ಲೇ ಅದನ್ನು ಅಂದುತೋರಿಸಿ ಅನಂತರ ಅಕ್ಕಪಕ್ಕದ ಊರುಗಳಲ್ಲಿ, ಆಮೇಲೆ ಜಿಲ್ಲೆಯ ಬೇರೆ ಬೇರೆ ಸ್ಥಳಗಳಲ್ಲಿ ಹೇಳಿ, ಚಳವಳಿಗಾಗಿ ಜನತೆಯನ್ನು ಜಾಗೃತಗೊಳಿಸಬೇಕೆಂದು ಅವರು ಯೋಚಿಸಿಕೊಂಡಿದ್ದರು. ಮೊದಲನೆಯ ಸರತಿಗೇ ಅಂಥ ಯಶಸ್ಸು ದೊರೆತುದನ್ನು ಕಂಡು ಆ ದೇಶಪ್ರೇಮಿಗಳಿಗೆ ಅದೆಷ್ಟು ಸಂತೋಷವಾಗಿರಲಿಕ್ಕಿಲ್ಲ!

ಮಾಸ್ತರರ ಹರ್ಷವಂತೂ ಎದೆಯಲ್ಲಿ ಹಿಡಿಸಲಾರದೆ ಹೊರಚೆಲ್ಲಿ ಮುಖದ ಮೇಲೆ ನರ್ತನ ಮಾಡುತ್ತಿದ್ದಿತು. ಶೀವಿಯಿಂದ ಹಲಗೆ ಬಾರಿಸುತ್ತ ಅವರು ಮುಂದು ವರಿಸಿದರು :

“ ನಮ್ಮ ಭರತಖಂಡಕ್ಕೆಲ್ಲ ರಾಜಾ ನಮ್ಮ ಜಪಹರ್
ಕೈಯೆತ್ತಿ ಸಾರುತಾನ ನಡೀ ಹೊರಗ ಸರಕಾರ್
ಇನ್ನು ನಮ್ಮ ಸರಕಾರ್ ! ಕಾಂಗ್ರೆಸ್ ಸರಕಾರ್
ರೈತರ ಸರಕಾರ್ ! ಕೂಲಿಯವರ ಸರಕಾರ್
ಇನ್ನು ಮ್ಯಾಲ ನಮಗಿಲ್ಲೋ ದರಕಾರಾ !
ನಾವಿನ್ನು ಸ್ವತಂತ್ರಾ ! ನಾವಿನ್ನು ಸ್ವತಂತ್ರಾ !

ಸರಕಾರ ಹೌಹಾರಿ
ಹೆದರಿ ಬೆದರಿ ಕೂಗಿ ಚೀರಿ

ಇನ್ಹ್ಯಾಂಗ ಮಾಡೂದಂತ ತಲೀ ತಲೀ ಕೆದರಿ ಕೆದರಿ
ಹಗಲಿನಾಗ ಬರೂದಕ್ಕ ಎದೀ ಇಲ್ದೆ ಕಾದು ದಾರಿ
ಮಬ್ಬು ಮಬ್ಬುಗತ್ತಲಾಗ, ಚಿಕ್ಕಿ ಚಿಕ್ಕಿ ಬೆಳಕಿನಾಗ
ಶಾರಕ್ಕ ಶಾರೆಲ್ಲಾ ಕಣ್ಣು ಮುಚ್ಚಿ ಮಲಗಿದಾಗ
ನಿದ್ದೀ ಕೆಡಿಸಿ ಎಬ್ಬಿಸ್ಯಾರೋ ಗಾಂಧೀ ಮಾರಾಜನ್ನ
ಅವ್ವ ಕಸ್ತೂರೆವ್ವನ್ನ, ಅಣ್ಣ ಜವಹರಲಾಲನ್ನ
ಒಯ್ದು ಕೂಡಿಸಿಬಿಟ್ಟಾರೋ ಮೋಟರ್ ಗಾಡಿಯೊಳಗ
ಎಲ್ಲಿಗೊಯ್ದಾರೋ ಏನೊ, ಯಾವ ದೇಶದೊಳಗ !
ಮಿಸಾಸೀ ಹೊತ್ತ ಗಂಡಸರೆಲ್ಲಾ ಕೇಳಿರೋ
ರಕ್ತ ಇದ್ದವರೆಲ್ಲಾ ಮ್ಯಾಲಕ್ಕೇಳಿರೋ
ಇನ್ನು ಈ ಸರಕಾರಕ್ಕ ಬಾಗಬ್ಯಾಡಿರೋ !
ಇನ್ನುಮ್ಯಾಲ ನೀವೇ ನಿಮ್ಮ ಸರಕಾರಾ !
ಇನ್ನು ನಾವು ನೀವೆಲ್ಲಾ ಸ್ವತಂತ್ರಾ !

ಅದೋ ! ಗಾಂಧೀ ಹೇಳುತಾನೆ
ಜವಹರಲಾಲ ಹೇಳುತಾನೆ

ಜಯಪ್ರಕಾಶ ಹೇಳುತಾನೆ
ಸುಭಾಷಚಂದ್ರ ಹೇಳುತಾನೆ
ಭಗತಸಿಂಗ ಹೇಳುತಾನೆ
ಧನಶೆಟ್ಟಿ ಹೇಳುತಾನೆ
ಚೆನ್ನವ್ವ ಹೇಳುತಾಳೆ
ಮಲ್ಲವ್ವ ಹೇಳುತಾಳೆ
ರಾಯಣ್ಣ ಹೇಳುತಾನೆ—

ನಾವಿನ್ನು ಸ್ವತಂತ್ರಾ! ನಾವಿನ್ನು ಸ್ವತಂತ್ರಾ!
ದುಮ್ ದುಮ್ ದುಮ್ ದುಮ್ ದುಮ್ ದುಮ್
ದುಮ್ ದುಮ್!"

ಹಾಡುವುದನ್ನು ಮುಗಿಸಿ ಮಾಸ್ತರರು ಹಲಗೆ ಹಿಡಿದ ಕೈಗಳನ್ನೇ ಎತ್ತಿ ಜನಕ್ಕೆ ವಂದನೆ ಸಲ್ಲಿಸಿದರು. ಅನಂತರ ಹಲಗೆಯನ್ನು ಬಲಗೈಯಲ್ಲೆತ್ತಿ ಮೇಲೆ ಹಿಡಿದು ಉಚ್ಚಸ್ವರದಲ್ಲಿ ಘೋಷಿಸಿದರು:

"ಗಾಂಧೀ ಮಹಾರಾಜಕೀ ಜೈ!"

ಒಡನೆಯೆ ಕುಳಿತಿದ್ದ ಜನವೆಲ್ಲ ಮೇಲಕ್ಕೆದ್ದು ಸಾಗರದ ಅಲೆಗಳಂತೆ ಘೋಷಿಸಿತು: "ಗಾಂಧೀ ಮಹಾರಾಜಕೀ ಜೈ!"

೬

"ಗಾಂಧೀ ಮಾರಾಜನ್ನ ಎಲ್ಲಿಟ್ಟಾರಂತಪ್ಪಾ, ಶೇಖರಣ್ಣ?"

ಕೇಳಿದವನು ಬಾಳಪ್ಪ: ಕಲ್ಲಾಪುರದ ಜನರಿಗೆಲ್ಲ ಹಿರಿಯನಾದ ಮುದುಕ ಬಾಳಪ್ಪ.

ಗುಡಿಯ ಎದುರಿಗಿನ ಕಾರ್ಯಕ್ರಮವನ್ನು ಮುಗಿಸಿ ಅವರೆಲ್ಲರೂ ಶೇಖರನ ಮನೆಯ ಪಡಸಾಲೆಯಲ್ಲಿ ಒಟ್ಟುಗೂಡಿದ್ದರು. ಶಂಕರಪ್ಪ ಮಾಸ್ತರರು, ಬಾಳಪ್ಪ, ಫೈಲ್ವಾನ ಸಂಗಣ್ಣ, ನೇಕಾರ ಹಸನ್‌ಸಾಬಿ ಇತ್ಯಾದಿ ಗುಂಪಿನ ಜನರು ಗೋಡೆಗಳಿಗೊರಗಿ ಕುಳಿತುಕೊಂಡಿದ್ದರು. ಒಳಗೆ ಶೇಖರನ ತಾಯಿ ಪಾರ್ವತವ್ವ ಅಡಿಗೆಮನೆಯಲ್ಲಿ ಕುಳಿತುಕೊಂಡು ಪಡಸಾಲೆಯಲ್ಲಿ ನಡೆದಿದ್ದ ಮಾತುಕತೆಗಳೆಲ್ಲ

ವನ್ನೂ ಉತ್ಸುಕತೆಯಿಂದ ಆಲಿಸುತ್ತಿದ್ದಳು. ದಿನವಿಡೀ ಹೊಲದಲ್ಲಿ ದುಡಿದು ಬಂದು ದಣಿದಿದ್ದ ಲಿಂಗಣ್ಣ ತನ್ನ ಕೊಟಡಿಯಲ್ಲಿ ಗಾಢನಿದ್ರೆಯಲ್ಲಿ ತಲ್ಲೀನನಾಗಿದ್ದ.

"ಎಲ್ಲಿಟ್ಟಾರೋ ಏನೋ, ಇನ್ನೂ ಸುದ್ದಿ ಗೊತ್ತಾಗಿಲ್ಲ, ಅಜ್ಜಾ" ಎಂದ ಶೇಖರ.

ಮುದುಕ ಬಾಳಪ್ಪನ ಮುಖದಲ್ಲಿ ಕಳವಳದ ಕಾರ್ಮೋಡ ಕವಿದು ಕೊಂಡಿತು. ಮೊದಲಿನಿಂದಲೂ ಅವನಿಗೆ ಗಾಂಧಿ ಎಂದರೆ ತುಂಬಾ ಪ್ರೀತಿ. ತಮ್ಮ ಮೇಲೆಲ್ಲ ದರ್ಪದಿಂದ ಅಧಿಕಾರ ನಡಸಿ ಪೀಡಿಸುತ್ತಿದ್ದ ಆ ಕೆಂಪು ಮೋರೆಯ ಸರಕಾರದ ವಿರುದ್ಧ ಚಳವಳಿ ಹೂಡಿದ್ದ ಗಾಂಧಿ ಆತನ ಅಭಿಮಾನದ ವ್ಯಕ್ತಿಯಾಗಿದ್ದ. ಸಂಗೊಳ್ಳಿ ರಾಯಣ್ಣನೆ ಗಾಂಧಿಯ ರೂಪದಲ್ಲಿ ಮತ್ತೆ ಹುಟ್ಟಿ ಬಂದಿರುವನೆಂದು ಆತ ತಿಳಿದುಕೊಂಡಿದ್ದ. ತನ್ನ ವೈರಿಗಳಾದ ಇಂಗ್ಲಿಷರನ್ನು ದೇಶದಿಂದ ಹೊರಗೆ ಅಟ್ಟುವುದಕ್ಕಾಗಿ ಅವ್ವ ಚೆನ್ನವ್ವನೇ ಗಾಂಧಿಯನ್ನು ಹರಸಿ ಕಳುಹಿಸಿರುವಳೆಂದು ಆತ ನಂಬಿಕೊಂಡಿದ್ದ. ಇಪ್ಪತ್ತೊಂದರ ಚಳವಳಿಗಾರಂಭ ವಾದಂದಿನಿಂದಲೂ ಆತ ಕಾಂಗ್ರೆಸ್, ತಿಲಕ, ಗಾಂಧಿ, ನೆಹರೂ ಮೊದಲಾದವರ ಬಗ್ಗೆ ಅತ್ಯಂತ ಆಸಕ್ತಿ ತಳೆದು, ಚಳವಳಿಗಳಿಗೆ ಸಂಬಂಧಪಟ್ಟ ವಿಷಯಗಳನ್ನೆಲ್ಲ ತಿಳಿದುಕೊಳ್ಳುತ್ತಿದ್ದ. ಹರಿಜನ ಯಾತ್ರೆಯ ಕಾಲಕ್ಕೆ ಗಾಂಧೀಜಿ ಬೆಳಗಾವಿಗೆ ಬಂದಿದ್ದಾಗ ಕಲ್ಲಾಪುರದಿಂದ ಅಲ್ಲಿಯವರೆಗೂ ಹೋಗಿ ಅವರನ್ನು ಕಣ್ಣುತುಂಬ ನೋಡಿ ಬಂದಿದ್ದ. ಉಡಲು ಬಟ್ಟೆಗಳಿಲ್ಲದೆ ನಗ್ನವಾಗಿರುವ ಬಡವರನ್ನು ಕಂಡು ಕರುಳು ಕುದಿದು, ಅವರು ಅಂಗಿ ತೊಟ್ಟುಕೊಳ್ಳುವುದನ್ನು ಬಿಟ್ಟರೆಂಬ ವಿಚಾರ ತಿಳಿದಾಗ ಅವರ ಬಗೆಗೆ ಅವನಲ್ಲಿದ್ದ ಆದರವಿನ್ನೂ ಹೆಚ್ಚಾಗಿದ್ದಿತು. ಅವರು ಉಪವಾಸ ಮಾಡುವ ಸುದ್ದಿ ತಿಳಿದಾಗಲೆಲ್ಲ ಅವನೂ ಅನ್ನ ನೀರು ಬಿಟ್ಟು ಬಿಟ್ಟು ಅವರಿಗೆ ದೀರ್ಘಾಯುಷ್ಯ ದೊರೆಯಲೆಂದು ದೇವರಲ್ಲಿ ಪ್ರಾರ್ಥನೆ ಮಾಡುತ್ತಿದ್ದ. ಅವರು ಸೆರೆಮನೆಗೆ ಹೋದುದು ಗೊತ್ತಾದಾಗ ದಿನವೂ ಬಸವಣ್ಣನ ಗುಡಿಗೆ ಹೋಗಿ ಕೈಮುಗಿದು "ನಮ್ಮಪ್ಪ, ಗಾಂಧೆಪ್ಪನ್ನ ನೆಟ್ಟಗೆ ಇಡು, ದೇವರೇ!" ಎಂದು ಬೇಡಿಕೊಳ್ಳುತ್ತಿದ್ದ. ಈಗ ಮತ್ತೆ ಚಳವಳಿ ಆರಂಭವಾಗಿದೆ. ಮತ್ತೆ ಆ ಕೆಂಪು ಮೋರೆಯ ಜನ ಗಾಂಧಿಯವರನ್ನು ಹಿಡಿದೊಯ್ದಿದ್ದಾರೆ. ಇದುವರೆಗೆ ಅವರನ್ನು ಬಂಧಿಸಿದಾಗ ಇಂಥ ಊರಿನ ಇಂಥ ಸೆರೆಮನೆಯಲ್ಲಿ ಅವರನ್ನಿಡಲಾಗಿದೆ ಯೆಂಬ ಸುದ್ದಿಯಾದರೂ ತಿಳಿಯುತ್ತಿದ್ದಿತು. ಈ ಸಲ ಅದೂ ಗೊತ್ತಾಗಿಲ್ಲ

ವಂತೆ! ಅವರನ್ನು ಎಲ್ಲಿ ಇಡಲಾಗಿದೆ, ಅವರು ಕ್ಷೇಮದಿಂದಿರುವರೋ ಇಲ್ಲವೊ, ಯಾವುದೇನೂ ತಿಳಿಯದು. ಚಳವಳಿಗಾರಂಭವಾಗಿದೆಯೆಂದು ಪತ್ರಿಕೆಯಲ್ಲಿ ಸುದ್ದಿ ಬಂದಾಗಿನಿಂದ ಮುದುಕ ಬಾಳಪ್ಪ ಒಂದೆಸಮನೆ ಹಲಬುತ್ತಿದ್ದ. ಊರಿನಲ್ಲಿ ಓದುಬರೆಹ ಬಲ್ಲವರನ್ನೆಲ್ಲ ದಿನವೂ ಪೀಡಿಸಿದ್ದಾಗಿದ್ದಿತು. ಒಬ್ಬರು ಒಂದು ರೀತಿ ಹೇಳಿದರೆ ಇನ್ನೊಬ್ಬರು ಇನ್ನೊಂದು ರೀತಿ ಹೇಳುತ್ತಿದ್ದರು. ಅದರಿಂದಾಗಿ ನಾನಾ ವಿಧದ ಕಥೆಗಳೂ ಹರಡತೊಡಗಿದ್ದುವು. ಅಂಥ ಕಥೆಗಳನ್ನು ಕೇಳಿ ಕೇಳಿ ಬಾಳಪ್ಪನ ಕಳವಳ ಹೆಚ್ಚಾಗುತ್ತಿದ್ದಿತೇ ವಿನಾ ಕಡಿಮೆಯಾಗುತ್ತಿರಲಿಲ್ಲ. ಶೇಖರ ಮುಂಬಯಿ ಯಿಂದ ಬಂದವ, ಅವನಿಗಾದರೂ ವಿಷಯ ಗೊತ್ತಿರಬಹುದು ಎಂದು ಪ್ರಶ್ನೆ ಮಾಡಿದರೆ ಅಲ್ಲೂ ನಿರಾಸೆಯೆ ಎದುರಾಗಬೇಕೆ!

"ಗೊತ್ತಿಲ್ಲ? ಅಂದರ, ಇದೇನು ಪಿತೂರೀ ಮಾತು ಶೇಖರಣ್ಣ? ಎಲ್ಲಿ ಗೊಯ್ದಾರಂತ ನಮ್ಮ ಗಾಂಧೆಪ್ಪನ್ನ? ಇದೇನು ಹುಡುಗಾಟ ಅಂತ ತಿಳಿದೈತೇನು ಆ ಸರಕಾರ?"

"ಹುಡುಗಾಟ ಅಲ್ಲ ಅಜ್ಜಾ, ಇದು. ಜನರಿಂದ ತಪ್ಪಿಸಿಕೊಳ್ಳೊದಕ್ಕ ಸರಕಾರ ಹೂಡಿರುವ ಉಪಾಯ ಇದು."

"ಅಂದರ?"

"ಈಗ ಜನ ಬಹಳ ಸಿಟ್ಟಿಗೆದ್ದೈತಿ ಅನ್ನೋದು ಸರಕಾರಕ್ಕ ಗೊತ್ತೈತಿ. ಗಾಂಧಿಯವರನ್ನ ಇಂಥಲ್ಲೇ ಇಟ್ಟಿರುವ ಸುದ್ದಿ ಗೊತ್ತಾದರೆ ಜನ ಅಲ್ಲಿಗೆ ನುಗ್ಗಿ ದೊಡ್ಡ ದಂಗೆ ಆದೀತು ಅಂತ ಹೆದರಿ ಹೀಂಗ ಮಾಡಿದಾರಂತೆ."

"ಅಂತೂ ನೆಟ್ಟಗಿದಾರ ಹೌದಲ್ಲೋ? ಪಾಪ, ಎಪ್ಪತ್ತು ವರ್ಷ ದಾಟಿದ ಮುಪ್ಪಿನ ಮುದುಕ; ಆದೊಂದು ಮುಪ್ಪಿನ ಮುದುಕಿ ಕಸ್ತೂರೆವ್ವ. ಇಂಥಾ ವಯಸ್ಸಿನಾಗ ಏನ ಕಾಡಿಸ್ತಾರ ಈ ಕೆಂಪು ಮೋತಿಯವರು, ನಮ್ಮ ಗಾಂಧೆಪ್ಪನ್ನ!" ಎಂದು ವ್ಯಥೆಯಿಂದ ನುಡಿದ ಬಾಳಪ್ಪ.

"ಇನ್ನೆಷ್ಟು ದಿನ ಕಾಡಿಸತಾರೇಳು ಅಜ್ಜಾ. ಅವರ ಕಾಲ ತುಂಬಿಬಂದೈತಿ. ಇನ್ನೇನು ಆರೇಳು ತಿಂಗಳದಾಗ ಅವರು ಗುಡಚಾಪಿ ಕಟ್ಟಿಕೊಂಡು ಹೊರಡ ಬೇಕಾಗತೈತಿ ನಮ್ಮ ದೇಶಾ ಬಿಟ್ಟು. ಗಾಂಧೀ ಮಾರಾಜ ಅಂತೂ ಸ್ವಚ್ಛ ಹೇಳಿ ಹೋಗಿದಾನ ಇನ್ನುಮ್ಯಾಲ ನಾವು ನಿಮ್ಮ ಅಧಿಕಾರಕ್ಕ ಬಾಗುವದಿಲ್ಲ ಅಂತ. ಅವ ಹೇಳಿದ್ದನ್ನ ನಾವು ಮಾಡಿತೋರಿಸಬೇಕಾಗೈತಿ, ಅಜ್ಜ."

“ ಮಾಡಿರಿ, ಮಾಡಿರಿ. ನಾನೂ ಬರ್ತೀನಿ ನಿಮ್ಮ ಸಂಗಡ. ಆ ಕೆಂಪು ಮೋತೀ ಮಂದೀನ್ನ ಹೊರಗ ಹಾಕೇ ಬಿಡೋಣ ಈ ಸರತಿ,” ಎಂದು ನುಡಿದು ಬಾಳಪ್ಪ ತನ್ನ ದಪ್ಪ ಮೀಸೆಯನ್ನು ಹುರಿಗೊಳಿಸಿದ.

ವಿದೇಶೀಯ ಆಡಳಿತೆಯ ವಿರುದ್ಧ ಬಂಡೆದ್ದ ಹಳ್ಳಿಗರ ಪ್ರತೀಕದಂತಿದ್ದ ಆ ಮುದುಕನನ್ನು ಆನಂದ ಅಭಿಮಾನಗಳಿಂದ ನಿಟ್ಟಿಸುತ್ತ ಶೇಖರಪ್ಪ ತನ್ನಷ್ಟಕ್ಕೆ ತಾನೆ ಹೇಳಿಕೊಂಡ : “ ಇಂಥ ಮುದುಕರೂ ನಮಗೆ ಬೆಂಬಲವಾಗಿ ನಿಂತಿರುವಾಗ ಜಯದ ಬಗ್ಗೆ ಸಂಶಯವೆಲ್ಲಿಯದು ? ನಮ್ಮ ಕಾರ್ಯ ಪೂರ್ಣ ಯಶಸ್ವಿ ಯಾಗುವುದು !”

ಅಷ್ಟರಲ್ಲಿ ಹೊರಬಾಗಿಲಿನ ಮೇಲೆ ಏನೋ ಸದ್ದಾದುದು ಕೇಳಬಂದಿತು. ಮುದುಕ ಆ ಕಡೆಗೆ ತಿರುಗಿಕೊಂಡು ಸಿಟ್ಟಿನಿಂದಲೇ ಕೂಗಿದ : “ ಯಾರೋ ಅವ ? ಇಷ್ಟು ರಾತ್ರ್ಯಾಗ ಬಾಗಿಲಾ ಬಡಿಯುವವ ?”

“ ನಾನ್ರೆಪ, ಬಾಗಿಲಾ ತಗೀರಿ. ಸ್ವಲ್ಪ ಕೆಲಸ ಐತಿ ” ಎಂಬುದಾಗಿ ಪ್ರತ್ಯುತ್ತರ ಬಂದಿತು.

ಸಂಗಣ್ಣ ಎದ್ದುಹೋಗಿ ಬಾಗಿಲು ತೆರೆದೊಡನೆಯೆ ರಂಗಣ್ಣ–ಆ ಊರಿನ ಕುಲಕರಣಿ ರಂಗಣ್ಣ–ದೇಶಾವರಿ ನಗೆ ಬೀರುತ್ತ ಒಳಸೇರಿದ ; “ ಇಂಥಾ ಹೊತ್ತಿನಾಗ ಇಲ್ಯಾಕ ಬಂತೋ ಈ ಪೀಡಾ ” ಎಂದು ಮುದುಕ ಗೊಣಗಿಕೊಳ್ಳುತಿದ್ದುದು ಅವನಿಗೆ ಕೇಳಿಸಿದರೂ ಕೇಳಿಸದಿದ್ದ ಹಾಗೆ ನಟಿಸುತ್ತ, ಮುಂದೆ ಬಂದು ಕಂಬಳಿಯ ಮೇಲೆ ಕುಳಿತುಕೊಂಡು, ಮತ್ತೊಂದು ಸಲ ಕುಳಿತಿದ್ದವರನ್ನೆಲ್ಲ ದಿಟ್ಟಿಸುತ್ತ ದೇಶಾವರಿ ನಗೆ ನಕ್ಕ.

“ ಏನು ಸುದ್ದಿ ರಂಗಣ್ಣನವರೆ, ಇಂಥಾ ಹೊತ್ತಿನಾಗ ಬಂದುಬಿಟ್ಟರಿ ?” ಎಂದು ಕೇಳಿದ ಶೇಖರ.

“ ಏನೂ ಇಲ್ಲ ಶೇಖರಣ್ಣ, ಹಾಂಗs ನಿಮ್ಮ ಕೂಡ ಒಂದೆರಡು ಮಾತು ಮಾತಾಡಿ ಹೋಗಬೇಕಂತ ಬಂದೆ.”

“ ಏನು ಮಾತೋ ಅದು, ರಂಗಪ್ಪಾ ?” ಎಂದ ಮುದುಕ.

“ ಏನಿಲ್ಲಪಾ. ಈ ಸರಕಾರೀ ನೋಕರಿ ಅಂದರ ಬಹಾಳ ಕೆಟ್ಟದ್ದು ನೋಡು. ಅವರ ಹಂಗಿಗೆ ಬಿದ್ದು ಜೀವಾನs ಹೋಗೂ ಪ್ರಸಂಗ ಬಂದೈತಿ. ನಮಗೇನು ನಮ್ಮೂರು ಅಂದರ ಅಭಿಮಾನ ಇಲ್ಲಾ? ಅಕ್ಕರತೆ ಇಲ್ಲಾ ?

ಊರವರು ಅಂದಮ್ಯಾಲ ನಾವೆಲ್ಲಾರೂ ಒಂದS. ಊರಿನ ಕೆಲಸ ಅಂದಮ್ಯಾಲ ಅದು ನನ್ನದೂ ಕೆಲಸಾನS ಅಲ್ಲ? ಈಗ ನೀವು ಚಳವಳಿ ಸುರು ಮಾಡಿದ್ದೀರಿ. ಇದರ ಸುದ್ದಿ ಎಲ್ಲಾ ಇಷ್ಟೊತ್ತಿಗೆ ಹೊಂಗಲಕ್ಕ ಗೊತಾಗೈತಂತೆ. ಇಂದು ಮಾಸ್ತರರ ಹಾಡು ಮುಗಿದ ಮ್ಯಾಲ ಒಬ್ಬ ಪೋಲೀಸ ಬಂದಿದ್ದ ನಮ್ಮ ಮನೆಗೆ...."

ಆ ಸಮಾಚಾರ ಗುಂಪಿನಲ್ಲಿ ಕೆಲವರನ್ನು ದಿಗಿಲುಗೊಳಿಸಿತಾದರೂ ಶೇಖರನ ಮೇಲೆ ಮಾತ್ರ ಅದರಿಂದ ಯಾವ ಪರಿಣಾಮವೂ ಉಂಟಾಗಲಿಲ್ಲ. ಶಾಂತಚಿತ್ತ ದಿಂದ ಕೇಳಿದ: "ಇನ್ನೂ ಇದಾನೋ ಅವ, ಇಲ್ಲ....ಹೋದನೋ?"

"ಸಂಪಗಾಂವಿಗೆ ಹೋಗೂದೈತಿ ಅಂತ ಹೇಳಿ ಹಾಂಗS ಹೋಗಿಬಿಟ್ಟ. ಅಂತೂ ನಿಮ್ಮ ಸುದ್ದಿ ಎಲ್ಲಾ ಸರಕಾರಕ್ಕ ಗೊತ್ತಾದಾಂಗಾತು. ಇನ್ನುಮ್ಯಾಲ ಸ್ವಲ್ಪ ಎಚ್ಚರಿಕೆಯಿಂದ ಕೆಲಸಾ ಮಾಡಿರಪ್ಪ. ಹೀಂಗ ಊರನ್ನೆಲ್ಲಾ ಗುಡೀ ಮುಂದ ಸೇರಿಸಿ ಹಾಡುಗೀಡು ಹೇಳಬಾರದು. ಭಾಷಣಾ ಗೀಷಣಾ ಮಾಡ ಬಾರದು, ನೋಡ್ರಿ. ನಾವೇನೋ ನಿಮ್ಮೂರವರೇ, ನಿಮ್ಮವರೇ. ಆದರೂ ನಮ್ಮ ಸುತ್ತ ಏನೂ ಬರದಂಗ ಇರಬೇಕಲ್ಲಪ್ಪಾ" ಎಂದು ಹೇಳಿ ರಂಗಣ್ಣ ಮತ್ತೊಂದು ಸಲ ದೇಶಾವರಿ ನಗೆ ಬೀರಿದ.

"ನೀವೂ ನಮ್ಮವರೇ ಅನ್ನೂದು ನಮಗ ಗೊತ್ತೇ ಐತೇಳ್ರಿ ಕುಲಕರ್ಣೇರS. ಅದಕ್ಕS ನಾವು ಈಗ ನಿಮಗೊಂದು ಮಾತು ಹೇಳತೀವಿ. ಗಾಂಧೀಮ್ಯಾಲ ನಿಮಗ ಭಕ್ತಿ ಐತ್ಯೋ ಇಲ್ಲ್ಯೋ?" ಎಂದು ಕೇಳಿದರು ಮಾಸ್ತರರು.

"ಎಂಥಾ ಮಾತು ಕೇಳ್ತೀರಪಾ! ಗಾಂಧೀ ಅಂದರ ದೇವರು, ಮಹಾತ್ಮಾ. ದೇವರ ಕೋಣೆಯೊಳಗ ಇಟ್ಟು ಪೂಜಾ ಮಾಡಬೇಕು ಅವನ್ನ."

"ಪೂಜಾ ಮಾಡೂದೇನೂ ಬೇಕಾಗಿಲ್ಲ ಅನ್ನಿರಿ. ಅವನ ಮಾತು ಕೇಳಿ ಕೊಂಡು ಅದರಂಗ ನಡದರ ಸಾಕು, ಕುಲಕರ್ಣೇರS. ಚಳವಳಿ ಸುರು ಮಾಡು ವಾಗ ಅವ ಒಂದು ಮಾತು ಹೇಳಿದಾನ–ನಮಗ ನಿಮಗ ಎಲ್ಲರಿಗೂ. ಇವತ್ತು ಹಾಡಿನೊಳಗ ಬಂದಿತಲ್ಲ–ಕೇಳಿದಿರೇನು ಅದನ್ನ?"

"ಕೇಳಿದೆ."

"ಅದೇ. ಅದೇ ಮಾತೇ. ಇನ್ನುಮ್ಯಾಲ ಈ ಸರಕಾರದ ಅಧಿಕಾರವನ್ನ ಯಾರೂ ಒಪ್ಪಬಾರದು. ಅದಕ್ಕ ಬಾಗಬಾರದು. ಅದರ ಕೆಲಸಾ ಮಾಡ

ಬಾರದು. ನಾವಂತೂ ನೋಡಿರದಾರದಲ್ಲ. ನೀವೇನು ಮಾಡುವವರು ಈಗ? ಹೇಳ್ರಿ."

ರಂಗಣ್ಣ ಕೊಂಚಕಾಲ ಮೌನವಾಗಿ ಕುಳಿತು ಜಂತಿಯನ್ನು ನಿಟ್ಟಿಸುತ್ತಿದ್ದು, ಹೇಳಿದ: "ನೋಡ್ರಿ. ನಾನೂ ವಿಚಾರ ಮಾಡೀನಿ. ಗಾಂಧಿ ಹೇಳೂ ಮಾತು ನಿಜ. ಎಲ್ಲರೂ ವಿರುದ್ಧ ಆಗಿ ನಿಂತರ ಸ್ವತಂತ್ರ ಬಂದ ಹಾಂಗs. ಆದರ, ಇಂದು ನಾನು ಅದಕ್ಕ ವಿರುದ್ಧ ಆದರ ನಾಳೀ ನನ್ನ ಹಿಡಕೊಂಡು ಹೋಗುತಾರ ಪೋಲೀಸರು. ನಾವು ಸಂಸಾರಿಗಸ್ಥರು. ಮಕ್ಕಳುಮರಿ, ಮನಿಮಾರು....ಎಲ್ಲಾ ವಿಚಾರ ಮಾಡಬೇಕಾಗತೈತ್ಯೋ ಇಲ್ಲೋ?"

ರಂಗಣ್ಣನ ಪ್ರಶ್ನೆಗೆ ಬಾಳಪ್ಪ ಉತ್ತರವಿತ್ತ:

"ಹೌದೋ ರಂಗಣ್ಣಾ, ನೀ ಹೇಳೂ ಮಾತೆಲ್ಲ ಬರಾಬರಿ. ನಿನಗೂ ಮಕ್ಕಳು ಮರಿ, ಮನಿಮಾರು ಅದಾವ. ನಮಗೂ ಅದಾವ. ಶೇಖರಪ್ಪಗ ಸಂಸಾರ ಇಲ್ಲೇನು? ಮಾಸ್ತರಗ ಇಲ್ಲೇನು? ನಮ್ಮ ಸಂಗಣ್ಣಗ ಇಲ್ಲೇನು? ಹಸನ್ ಸಾಹೇಬಗ ಇಲ್ಲೇನು? ನಿಂದೇ ಏನು ಒಬ್ಬಂದs ಸಂಸಾರ ಇರೂದು ಕಲ್ಲಾಪುರದಾಗ? ಚಳವಳಿ ಅಂದಮ್ಯಾಲ ಜೇಲಿಗೂ ಹೋಗಬೇಕಾಗತೈತಿ, ವನವಾಸಕ್ಕೂ ಹೋಗಬೇಕಾಗತೈತಿ. ಊರೆಲ್ಲಾ ಚಳವಳಿಗೆ ಬೀಳುವಾಗ ನೀ ಒಬ್ಬನs ಸರಕಾರದ ಕಡೆ ಇರತೀಯೇನು?"

"ಛೆ! ಛೆ! ಎಂಥಾ ಮಾತಾಡತೀ ಅಣ್ಣಾ? ನಾ ಸರಕಾರದ ಕಡೆ ಇರತೀನಿ ಅಂತ ಯಾವಾಗ ಹೇಳಿದೆನಪ್ಪ? ನಾ ಇರೂದು ನಿಮ್ಮ ಕಡೆಗೇ. ನಿಮಗೇನು ಬೇಕು ಅದನ್ನೆಲ್ಲಾ ಮಾಡಿಕೊಳ್ರಿ. ಆದರs ಸಭಾಗಿಭಾ ಮಾಡ ಬ್ಯಾಡ್ರಿ ಮಾರಾಯರs. ಸಭಾ ಮಾಡಿದರ ಮಾತ್ರ ನನ್ನ ಸುತ್ತ ಬರ್ತೈತಿ ಸಂಕಟ."

"ಆ ಸಂಕಟದಿಂದ ಪೂರಾ ತಪ್ಪಿಸಿಕೊಂಡು ಬಿಡಲ್ಲ ರಂಗಣ್ಣ? ರಾಜೀನಾಮೆ ಕೊಟ್ಟುಬಿಡು ಕೆಲಸಕ್ಕ" ಎಂದ ಸಂಗಣ್ಣ.

"ಹೇಳೂದು ಬಹಳ ಸುಲಭ. ಮೈಮ್ಯಾಲ ಬಂದರ ಗೊತ್ತಾಗತದ ರಾಜೀನಾಮೆಯ ಸಂಕಟ. ನಿನಗೇನು ಗೊತ್ತಾದೀತು ಅದೆಲ್ಲಾ!" ಎಂದು ಸಿಟ್ಟಿನಿಂದ ನುಡಿದ ರಂಗಣ್ಣ.

" ಬಿಡು ರಂಗಣ್ಣಾ, ಆ ಪೈಲ್ವಾನಗೇನು ಬುದ್ಧಿ ಐತೇನು ನಿನ್ನಷ್ಟು ? ಅವ ಹುಂಬ. ಮನಸಿನಾಗಿದ್ದದ್ದನ್ನ ಅಂದುಬಿಡುತಾನ. ನಿನ್ನಂಗ ಪೇಶವಾಯಿಯಾ ಮಾತು ಆಡಾಕ ನಮಗೆಲ್ಲಿ ಬಂದೀತು ?" ಎಂದು ಅಣಕವಾಡಿದ ಬಾಳಪ್ಪ.

" ಸಿಟ್ಟಾಗಬ್ಯಾಡ್ರಿ ರಂಗಣ್ಣನವರೆ, ಅಂತೂ ನೀವು ರಾಜೀನಾಮೆ ಕೊಟ್ಟು ಬಿಡೂದೇ ಒಳ್ಳೇದು. ನಿಮಗೂ ಸಂಕಟ ಬರೂದಿಲ್ಲ. ನಮ್ಮದೂ ಒಂದು ಕೆಲಸ ಹಗುರು ಆದಂಗ ಆಗುತ್ತೈತಿ " ಎಂದ ಶೇಖರಪ್ಪ.

ರಂಗಣ್ಣನಿಗೆ ಮುಂದೆ ಏನು ಮಾತಾಡಬೇಕೆಂಬುದು ಹೊಳೆಯಲಿಲ್ಲ. "ಆಗಲಪ್ಪ. ನೀವೆಲ್ಲರೂ ಒತ್ತಾಯ ಮಾಡಿದ ವ್ಯಾಲ ಇನ್ನೇನು ಮಾಡುವುದ ಕ್ಕಾಗುತ್ತೈತಿ ? ನಾಳೆ ಗೌಡರಿಗೆ ಕೇಳಿ, ಇಬ್ಬರೂ ಕೂಡೇ ರಾಜೀನಾಮೆ ಕಳಿಸ್ತೇವಿ " ಎಂದು ಹೇಳಿ, " ನಾನಿನ್ನು ಹೊರಡ್ತೀನಿ, ನಮಸ್ಕಾರ" ಎಂದು ನುಡಿದು ಎದ್ದುಬಿಟ್ಟ.

ಆತ ಹೊರಟುಹೋದನಂತರ ಕೆಲಕಾಲ ಗುಂಪಿನವರೆಲ್ಲ ಮೌನವಾಗಿದ್ದರು. ಎಂಟು ಹತ್ತು ನಿಮಿಷ ಹಾಗೆ ಕಳೆದ ತರುವಾಯ ಬಾಳಪ್ಪನೆಂದ: " ಈ ಕುಲಕರ್ಣಿ ಒಬ್ಬ ಭಯಂಕರ ಘಾತಕಿ ಇದಾನ ನಮ್ಮ ಊರಾಗ. ಇವನ ವ್ಯಾಲ ನಂಬಿಕೀ ಇಟ್ಟವರ್ಯಾರೂ ಇದುತನಕ ಬಾಳ್ವೆ ಮಾಡಿಲ್ಲ. ಮೂವತ್ತೆರಡರ ಚಳವಳಿ ಯೊಳಗೂ ಹೀಂಗs ಕುತ್ತಿಗ್ಗೊಯ್ಕತನ ಮಾಡಿದ್ದ ಇವ. ನಮ್ಮ ಕಡೆಗೇ ಇದ್ದಂಗ ಸೋಗು ಹಾಕಿ ಒಳಗಿಂದ ಒಳಗs ಸರಕಾರಕ್ಕ ಸುದ್ದೀ ತಿಳಿಸತಿದ್ದ. ಅದಕ್ಕs ಇನಾಮು ಸಿಕ್ಕಿತಲ್ಲ ಆ ಕೆರೀ ಕೆಳಗಿನ ಹೊಲಾ !"

" ನನಗೂ ಎಲ್ಲಾ ಗೊತ್ತೈತಿ ಬಿಡು ಅಜ್ಜ. ರೊಕ್ಕದ ಆಸೆಗೆ, ಹೊಲದ ಆಸೆಗೆ ಏನು ಬೇಕಾದರೂ ಮಾಡುವದಕ್ಕ ತಯಾರ ಆಗತಾನ ಈ ಕುಲಕರ್ಣಿ. ಇಂಥವರು ಊರಿಗೆ ಒಬ್ಬಿಬ್ಬರು ಇದ್ದೇ ಇರುವವರೇ. ಇಂಥವರಿಂದಲೇ ಹಿಂದುಸ್ಥಾನ ಪರತಂತ್ರ ಆಯ್ತು. ಇಂಥವರಿಂದಲೇ ಇನ್ನೂ ಪರತಂತ್ರ ಆಗಿ ಉಳಿದಿರೂದು. ಎಲ್ಲರೂ ನಿನ್ನಂಥವರೇ ಇದ್ದಿದ್ದರೆ ಎಂದೋ ಬರ್ತಿತ್ತು ಸ್ವಾತಂತ್ರ್ಯ !" ಎಂದ ಶೇಖರಪ್ಪ.

" ವಿಶ್ವಾಸಘಾತಕದ ಕೆಲಸಾ ಮಾಡಿ ಕಿತ್ತೂರ ಕಿಲ್ಲೇ ಹಾಳುಮಾಡಿದರು ಇಂಥಾ ಮಂದಿ. ಈಗಲೂ ಇವರೇ ಈ ಚಳವಳಿಯನ್ನೂ ಹಾಳುಮಾಡತಾ ರೇನೋ" ಎಂದು ವಿಷಾದದಿಂದ ನುಡಿದ ಾಳಪ್ಪ.

"ಅವರು ಘಾತಮಾಡವ ಹಾಂಗ ನಾವು ಕೆಲಸಾ ಮಾಡಬೇಕು, ಅಜ್ಜಾ. ಹಾವಿನ ಹಲ್ಲು ಮುರಿದುಬಿಟ್ಟರ ಏನು ಮಾಡೂಹಾಂಗೈತಿ ಅದು? ಹಾಂಗಽ ಇಂಥಾ ಮಂದೀನ್ನ ಮೊದಲೇ ಬಂದೋಬಸ್ತು ಮಾಡಬೇಕು" ಎಂದರು ಮಾಸ್ತರರು.

"ಹ್ಯಾಂಗ ಮಾಡೂದು ಬಂದೋಬಸ್ತು?" ಎಂದು ಕೇಳಿದ ಹಸನ್‌ಸಾಬಿ.

"ಅದಕ್ಕ ನಾವೊಂದು ಕಾರ್ಯಕ್ರಮ ತಯಾರು ಮಾಡಿದ್ದೀವಿ. ಮೊದಲು ನಮ್ಮ ಊರಲ್ಲೇ ಸುರು ಮಾಡಿಬಿಟ್ಟರಾಯ್ತು ಅದನ್ನ ಕುಲಕರ್ಣಿಯ ವ್ಯವಸ್ಥಾನೂ ಆದಂಗ ಆಯ್ತು" ಎಂದ ಶೇಖರಪ್ಪ.

"ಎಂದು ಸುರು ಮಾಡೋದು ಶೇಕ್ರಣ್ಣ? ಈಗಽ ಯಾಕ ಮಾಡಿಬಿಡಬಾರದು? ಪೋಲೀಸ ಬ್ಯಾರೆ ಬಂದು ಹೋದನಂತ. ಅವನ ಕೂಡ ಏನೇನು ಹೇಳಿ ಕಳಿಸ್ಯಾನೋ ಏನೋ ಈ ಕುಲಕರ್ಣಿ. ಇವನಿಂದ ಹೆಚ್ಚು ಪಿತೂರಿ ಆಗೂದಕ್ಕೆ ಮೊದಲೇ ಬಂದೋಬಸ್ತಿ ಮಾಡಿಬಿಟ್ಟರ ನೆಟ್ಟಗಲ್ಲೇನು?" ಎಂದ ಬಾಳಪ್ಪ.

"ನೀ ಹೇಳೂದು ಸರಿ ಅಜ್ಜಾ. ಏಳಿರಪ್ಪ, ಹೋಗಿಬರೋಣ" ಎಂದು ನುಡಿದು ಶೇಖರ ಮೇಲಕ್ಕೆದ್ದ.

"ಹುಷಾರಾಗಿರಪ್ಪೊ ಶೇಕ್ರಣ್ಣಾ. ಬಡದಾಟ ಗಿಡದಾಟಕ್ಕ ಹೋಗಬ್ಯಾಡ" ಎಂದು ತಾಯಿ ಒಳಗಿನಿಂದಲೇ ಕೂಗಿ ಹೇಳಿದಳು. "ಇಲ್ಲವ್ವಾ. ಬಡದಾಟದ ಪ್ರಸಂಗ ಆದರೂ ಎಲ್ಲಿ ಬರುತೈತಿ ಆ ಕುಲಕರ್ಣಿಯ ಹತ್ತಿರ?" ಎಂದು ನುಡಿದು ಆತ ಕಂಬಳಿಯನ್ನು ಮೈತುಂಬಾ ಹೊದೆದುಕೊಂಡು ಮೂಲೆಯಲ್ಲಿದ್ದ ದೊಣ್ಣೆಯನ್ನೆತ್ತಿ ಕೈಯಲ್ಲಿ ಹಿಡಿದು ಹೊರಬಿದ್ದ. ದೊಡ್ಡದಾದ ಟಾರ್ಚನ್ನು ಕೈಲಿ ಹಿಡಿದು ಮಾಸ್ತರರು ಅವನನ್ನು ಹಿಂಬಾಲಿಸಿದರು. ಮಿಕ್ಕವರೂ ಅವರನ್ನನುಸರಿಸಿದರು.

## ೧೦

"ರಂಗಣ್ಣನವರಽ, ರಂಗಣ್ಣನವರಽ."

ಆಗತಾನೆ ಶೇಖರನ ಮನೆಯಿಂದ ಹಿಂದಿರುಗಿದ್ದ ರಂಗಣ್ಣ ಒಳಗಡೆ ಮಲಗುವ ಸಿದ್ಧತೆಯಲ್ಲಿದ್ದ. ಕೂಗು ಕೇಳಿ ಬಂದು ಬಾಗಿಲು ತೆರೆದಾಗ ಒಮ್ಮೆಲೆ

ಸುರಿದ ‘ಟಾರ್ಚ್’ ಬೆಳಕಿನಿಂದಾಗಿ ಅವನ ಕಣ್ಣು ಕುಕ್ಕಿ ಹೋದುವು. ಭಯ ದಿಂದ ನಡುಗುವ ಧ್ವನಿಯಲ್ಲಿ “ಯಾರವರು? ಯಾಕ ಬಂದಿರಿ?” ಎಂದು ಕೇಳಿದ.

ಅವನನ್ನು ಬದಿಗೆ ಸರಿಸಿ ಗುಂಪಿನವರೆಲ್ಲ ಒಳಸೇರಿದರು. ಬಾಗಿಲನ್ನು ಕಾಯುತ್ತ ಹಸನ್‌ಸಾಬಿ ಅಲ್ಲಿಯೆ ನಿಂತುಕೊಂಡ. ರಂಗಣ್ಣನ ಭುಜದ ಮೇಲೆ ಕೈಹಾಕಿ ಪೈಲ್ವಾನ್ ಸಂಗಣ್ಣ ಅವನನ್ನು ಒತ್ತಾಯದಿಂದಲೇ ಒಳಕ್ಕೆ ಕರೆದು ತಂದ. “ಮಾತಾಡಿ ಗುಲ್ಲುಮಾಡಬ್ಯಾಡ್ರಿ ಕುಲಕರ್ಣೇರಃ. ನಾವು ಹೇಳಿದ ಹಾಂಗ ಕೆಲಸ ಮಾಡಿಬಿಡ್ರಿ. ನಿಮಗ ಏನೂ ಆಗದಾಂಗ ನಾವು ನೋಡಿಕೋ ತೀವಿ,” ಎಂದು ಹೇಳಿದ.

ಅಷ್ಟರಲ್ಲಿ ಮನೆಯ ಹೆಂಗಸರು ಮಕ್ಕಳೆಲ್ಲ ದಿಗಿಲುಗೊಂಡು ಎಚ್ಚರು ಗೊಂಡಿದ್ದರು. ಒಳಗಿನ ಕೊಟಡಿಯಿಂದ ಕಂದೀಲನ್ನು ತಂದು ಪಡಸಾಲೆಯಲ್ಲಿ ಹಿಡಿದಾಗ ಕಾಣಿಸಿದ ಜನರನ್ನೆಲ್ಲ ನೋಡಿ ಅವರ ಗಾಬರಿ ಇನ್ನೂ ಹೆಚ್ಚಾಯಿತು.

“ನೀವೇನೂ ಚಿಂತೀ ಮಾಡಬ್ಯಾಡ್ರಿ, ಅವ್ವಾ. ಸುಮ್ಮನಃ ಒಳಗ ಕೂತುಕೊಳ್ರಿ. ನಾವು ಇವರಿಗೇನೂ ಕೈಹಚ್ಚುವದಿಲ್ಲ” ಎಂದು ಶೇಖರ ಅವರನ್ನು ಸಾಂತ್ವನಗೊಳಿಸಿದ. ಅನಂತರ ರಂಗಣ್ಣನನ್ನು ಕುರಿತು—“ತಗೀರಿ ರಂಗಣ್ಣವರ ನಿಮ್ಮ ಕಾಗದ ದೌತಿ. ರಾಜೀನಾಮೆ ಪತ್ರ ಬರೆದು ಕೊಡ್ರಿ” ಎಂದ.

ಪಡಸಾಲೆಯ ಕಟ್ಟೆಯ ಮೇಲೆ ನಿಂತಿದ್ದ ರಂಗಣ್ಣ ತಡವರಿಸುತ್ತಾ— “ರಾಜೀನಾಮೆ?” ಎಂದು ಕೇಳಿದ.

“ಹೌದುಃ. ರಾಜೀನಾಮೆ. ಅದನ್ನೀಗ ನೀವು ಬರೆದು ಕೊಟ್ಟರೆ ಪೂರಾ ನಮ್ಮ ಕಡೆಗೇ ಆದಂಗ ಆಗತೀರಿ. ನಮ್ಮವರೇ ಆಗತೀರಿ. ನಮಗೂ ಸಹಾಯ ವಾದಂಗ ಆಗುತೈತಿ. ನಮ್ಮೂರು ಸ್ವತಂತ್ರ ಆಗುತೈತಿ,” ಎಂದರು ಮಾಸ್ತರರು.

ರಂಗಣ್ಣ ಕೊಂಚ ಧೈರ್ಯ ತಂದುಕೊಂಡು, “ಆಗಲೆ ಹೇಳಿದ್ದೆನಲ್ಲ— ಗೌಡರೂ ನಾನೂ ಕೂಡಿ ಮಾತಾಡಿ ಕೊಡ್ತೀವಿ ಅಂತ. ಇಷ್ಟ್ಯಾಕ ಅವಸರಾ ಮಾಡ್ತೀರಿ?” ಎಂದ.

“ಅವಸರ ಏನೂ ಇಲ್ಲವಲ್ಲ, ರಂಗಣ್ಣನವರಃ. ಗೌಡರು ಬೆಳಗಾವಿಗೆ ಹೋಗ್ಯಾರ. ಅವರು ಬಂದಮ್ಯಾಲ ನಾವು ಅವರ ಹತ್ತಿರ ಹೋಗಿ ಅವರ

ರಾಜೀನಾಮೆಯನ್ನೂ ಬರಿಸಿಕೋತೇವೆ. ಮೊದಲು ನೀವು ಬರೆದುಕೊಡ್ರಿ. ಈ ಹಳ್ಳಿಗೆಲ್ಲಾ ನೀವು ಸರಕಾರೀ ಮಂತ್ರಿ ಇದ್ದಂಗ. ನೀವೇ ಮೊದಲು ಕೊಡೂದು ಒಳ್ಳೇದಲ್ಲವೇನು ?" ಎಂದು ನುಡಿದು ಸಂಗಣ್ಣ ಮೂಲೆಯಲ್ಲಿದ್ದ ಬರೆಯುವ ಪೆಟ್ಟಿಗೆಯನ್ನೆತ್ತಿ ರಂಗಣ್ಣನ ಮುಂದಿರಿಸಿದ. ಅದರೊಳಗಿನಿಂದ ಲೆಕ್ಕಣಿಕೆಯನ್ನೂ ಕಾಗದವನ್ನೂ ತೆಗೆದು ಮೇಲ್ಗಡೆ ಇರಿಸಿದ. ಇನ್ನು ಅವರ ಕೈಯಿಂದ ಪಾರಾಗುವುದು ಸಾಧ್ಯವಿಲ್ಲವೆಂಬುದು ಮನವರಿಕೆಯಾಗುತ್ತಲೂ ರಂಗಣ್ಣ ಕುಳಿತು ಕೊಂಡು ಬರೆಯಲಾರಂಭಿಸಿ, ಕಂದೀಲು ಹಿಡಿದುಕೊಂಡು ನಿಂತಿದ್ದ ಶೇಖರಪ್ಪ ನನ್ನು ಕುರಿತು "ಏನಂತ ಬರೀಲಪ್ಪ ?" ಎಂದು ಕೇಳಿದ.

ಹತ್ತಿರದಲ್ಲಿ ನಿಂತು ನೋಡುತ್ತಿದ್ದ ಸಂಗಣ್ಣನಿಗೆ ಕೋಪ ಬಂದುಬಿಟ್ಟ ತೇನೊ. ಆತ, "ಬರಿಯೋದನ್ನ ನಾವು ಕಲಿಸೂದು ಅಂದರೇನ್ರಿ ಕುಲಕರ್ಣೇರs, ನಿಮಗೆ ? ಹಾಂಗ ಬರೀರಿ, ಹೀಂಗ ಬರೀರಿ ಅಂತ ನಾವು ಹೇಳೂದು ಅಂದರ ನಿಮ್ಮ ಮರ್ಯಾದೆಗೆ ಕಮ್ಮಿ ಅಲ್ಲೇನ್ರಿ ? ಬರೀರಿ. ಸುಮ್ಮನs ಹಗರಣಾ ಮಾಡಬ್ಯಾಡಿ !" ಎಂದು ನುಡಿದ.

ಪೈಲ್ವಾನನ ಈ ದುಡುಕಿನ ನುಡಿ ಶೇಖರನಿಗೆ ಸರಿಬರಲಿಲ್ಲ. ಆತ "ನೀ ಸುಮ್ಮನಿರು ಸಂಗಣ್ಣಾ" ಎಂದು ಹೇಳಿ, ರಂಗಣ್ಣನ ಕಡೆ ತಿರುಗಿ, "ಬರೀರಿ ಕುಲಕರ್ಣೇರ, ಇಂದಿನಿಂದ ನಾನು ನನ್ನ ಕೆಲಸಕ್ಕ ರಾಜೀನಾಮೆ ಕೊಟ್ಟೆದ್ದೀನಿ– ಇನ್ನುಮ್ಯಾಲ ನಾನು ಸ್ವತಂತ್ರ ಕಾಂಗ್ರೆಸ್ ಸರಕಾರದ ಸೇವಕನೇ ಹೊರ್ತು ಬ್ರಿಟಿಷ್ ಸರಕಾರದ ನೌಕರನಲ್ಲ ಅಂತ ತಿಳಿಸಿಬಿಡ್ರಿ ಮಾಮಲೇದಾರ್‍ರಿಗೆ," ಎಂದು ಹೇಳಿದ.

ರಂಗಣ್ಣ ತಲೆ ತಗ್ಗಿಸಿಕೊಂಡು ಪತ್ರವನ್ನು ಬರೆದು ಮುಗಿಸಿ, ಸಹಿ ಹಾಕಿ ಶೇಖರನ ಕೈಗೆ ಕೊಟ್ಟು—"ಇನ್ನಾದರೂ ನಿಮಗೆ ಸಮಾಧಾನ ಆಯ್ತಿಲ್ಲೋ ಮಹಾರಾಯಾ. ಏನು ಕಾಡಿಸ್ತೀರಿ ನನ್ನಂಥಾ ಮುದುಕನ್ನ, ಈ ವಯಸ್ಸಿನಾಗ ?" ಎಂದು ಅಳುದನಿಯಲ್ಲಿ ನುಡಿದ.

"ಮುದುಕ ! ಯಾರೆ ಮುದುಕ ! ನಿಮಗಿಂತಲೂ ಇಪ್ಪತ್ತು ವರ್ಷಕ್ಕೆ ಮುದುಕನಾದ ಆ ಗಾಂಧೆಪ್ಪನ್ನ ರಾತ್ರೋರಾತ್ರಿ ಹಿಡಕೊಂಡು ಹೋಗಿ ಎಲ್ಲಿಟ್ಟೈತಿ ನಿನ್ನ ಆ ಕೆಂಪುಮೋತೀ ಸರಕಾರ ! ಅಂಥಾ ಸರಕಾರದ ಚಾಕರಿ ಮಾಡ ಬ್ಯಾಡಂತ ಹೇಳಿದರ ಕಾಡಿಸಿದಂಗಾತೇನು ನಿನ್ನ !" ಎಂದು ಸಂಗಣ್ಣ ಗದರಿಸಿದ.

"ಹೋಗಲಿ ಬಿಡು ಸಂಗಣ್ಣ. ಅಂತೂ ಪತ್ರ ಬರಕೊಟ್ಟೆರಲ್ಲ. ಏನೂ ಚಿಂತೀ ಮಾಡಬ್ಯಾಡಿ ರಂಗಣ್ಣವರಃ. ನಾವೇ ಇದನ್ನು ಕಳಿಸರ್ತೇವೆ. ಇನ್ನು ಒಂದು ಕೆಲಸ ಉಳೀತು ನೀವು ಮಾಡೂದು. ಅದನ್ನಷ್ಟು ಈಗಲೇ ಮುಗಿಸಿಬಿಡ್ರಿ, ಅಂದರಾಯ್ತು. ಮತ್ತೆ ಮತ್ತೆ ಬಂದು ನಿಮ್ಮನ್ನ್ಯಾಕ ಕಾಡಿಸಬೇಕು ನಾವು ಈ ವಯಸ್ಸಿನೊಳಗ?" ಎಂದ ಶೇಖರ.

ಅಭ್ಯಾಸಬಲದಿಂದ ಲೇಖಣಿಯನ್ನು ಕಿವಿಯ ಮೇಲೆ ಇಟ್ಟುಕೊಳ್ಳುತ್ತ ರಂಗಣ್ಣ, "ಮತ್ತೇನಪಾ ಮಾರಾಯಾ?" ಎಂದು ಕೇಳಿದ.

"ಅಂಥಾ ದೊಡ್ಡ ಕೆಲಸೇನೂ ಅಲ್ರೀ ಅದು. ನಿಮ್ಮ ಹತ್ತಿರ ಇರುವ ದಪ್ತರ್ ಎಲ್ಲಾ ಹೊರಗ ತಗೀರಿ. ಕೆಲಸಕ್ಕಃ ರಾಜೀನಾಮೆ ಕೊಟ್ಟಮ್ಯಾಲೆ ಆ ದಪ್ತರು ಇಟ್ಟುಕೊಂಡು ಏನು ಮಾಡುರ್ತೀರಿ? ಅವನ್ನೂ ಕೊಟ್ಟುಬಿಡ್ರಿ," ಎಂದ ಶೇಖರ.

ರಂಗಣ್ಣನಿಗೆ ಈಗ ನಿಜಕ್ಕೂ ನಡುಕ ಬಂದಿತು. ರಾಜೀನಾಮೆಯ ಪತ್ರ ಬರೆದುಕೊಟ್ಟದ್ದೇನೂ ದೊಡ್ಡ ವಿಷಯವಾಗಿರಲಿಲ್ಲ. ಹತ್ತು ಹನ್ನೆರಡು ಜನ ಕೂಡಿ ರಾತ್ರಿಕಾಲದಲ್ಲಿ ಮನೆಗೆ ಬಂದು ಹೆದರಿಸಿ ಬೆದರಿಸಿ, ಬಲವಂತವಾಗಿ ಅದನ್ನು ಬರೆಯಿಸಿಕೊಂಡು ಹೋದರೆಂದು ಮಾಮಲೇದಾರರ ಹತ್ತಿರ ಅಡ್ಡಬಿದ್ದು ಹೇಳಿಕೊಂಡರೆ ಕೆಲಸ ಉಳಿಯಬಹುದೆಂಬುದು ಅವನಿಗೆ ಗೊತ್ತಿದ್ದಿತು. ಆದರೆ ಪ್ರಾಣಕ್ಕಿಂತಲೂ ಹೆಚ್ಚು ಭದ್ರವಾಗಿ ಕಾಯ್ದುಕೊಳ್ಳಬೇಕಾದ ದಪ್ತರುಗಳನ್ನೇ ಇವರು ಕೇಳುತ್ತಿರುವರಲ್ಲ! ಅವು ಈಗ ತನ್ನ ಕೈಬಿಟ್ಟರೆ ಮುಂದೆ ಬದುಕುವ ದಾರಿಯೆ ಇಲ್ಲ....

"ದಪ್ತರು ಯಾತಕ್ಕಪಾ ಈಗ? ಬಿದ್ದಿರಲಿ ಅಲ್ಲ ಇಲ್ಲೇ ಮನೆಯೊಳಗ? ಅವನ್ನ ತಗೊಂಡೇನು ಮಾಡ್ತೀರಿ?"

"ಇಲ್ಲಿ ಬಿದ್ದಿದ್ದರೇನು, ಎಲ್ಲಿ ಬಿದ್ದಿದ್ದರೇನು? ಎಲ್ಲಾ ಒಂದೇ ಅಲ್ಲೇನ್ರಿ ರಂಗಣ್ಣನವರಃ? ಕೆಲಸಕ್ಕಃ ರಾಜೀನಾಮೆ ಕೊಟ್ಟೀರಿ ಅಂದಮ್ಯಾಲ ಸರಕಾರೀ ಕಾಗದಪತ್ರ ಇಟ್ಟುಕೊಂಡು ಏನು ಮಾಡುತೀರಿ? ಇನ್ನುಮ್ಯಾಲ ನಮ್ಮ ಸರಕಾರದ, ಕಾಂಗ್ರೆಸ್ ಸರಕಾರದ ಕುಲಕರ್ಣೇರಾಗುತೀರಿ ನೀವು. ಎಲ್ಲಾ ಹೊಸಾ ದಪ್ತರು ಇಟ್ಟೀರಂತೆ. ಆ ಪರದೇಶೀ ಸರಕಾರದ್ದು ಏನೂ ಬ್ಯಾಡ ನಿಮ್ಮ ಮನೆಯೊಳಗ. ಕೊಟ್ಟುಬಿಡ್ರಿ," ಎಂದ ಶೇಖರ.

ರಂಗಣ್ಣ ಎದ್ದುಬಿಡಲೇಬೇಕಾಗಿ ಬಂದಿತು. ಒಳಗಿನ ಕೊಟಡಿಗೆ ಹೋಗಿ ಅಲ್ಲಿದ್ದ ದಪ್ತರುಗಳನ್ನೆಲ್ಲ ತಂದು ಶೇಖರನ ಮುಂದೆ ಇರಿಸಿದ. ಶೇಖರ ಅವುಗಳನ್ನು ಬಿಚ್ಚಿ ಒಂದೊಂದೇ ಪುಸ್ತಕವನ್ನು ಎತ್ತಿ ಸಂಗಣ್ಣನ ಕೈಗೆ ಕೊಡುತ್ತ —“ಅವನ್ನೆಲ್ಲ ಸುಟ್ಟುಬಿಡ್ರಿ” ಎಂದು ಹೇಳಿದ.

ಸರಿ. ಪಡಸಾಲೆಯ ಕೆಳಗಿನ ಸ್ಥಳದಲ್ಲಿ ಕಾಗದಪತ್ರಗಳನ್ನಿಟ್ಟು ಅವುಗಳನ್ನೆಲ್ಲ ಬೆಂಕಿಯ ಬಾಯಿಗೆ ಬಲಿ ಕೊಟ್ಟದ್ದಾಯಿತು.

“ನಾವಿನ್ನು ಹೊರಡತೀವಿ ರಂಗಣ್ಣವರ! ಇನ್ನುಮ್ಯಾಲ ಮಾಮಲೇದಾರಗ ಸುದ್ದೀ ತಿಳಿಸಾಕ ಹೋಗಬ್ಯಾಡ್ರಿ ಮತ್ತ!” ಎಂದು ಹೇಳಿ ಶೇಖರ ದೊಣ್ಣೆಯನ್ನೆತ್ತಿಕೊಂಡು ಮೇಲಕ್ಕೆದ್ದ.

ಗುಂಪಿನವರೆಲ್ಲ ಹೊರಟುಹೋದ ಬಳಿಕ ರಂಗಣ್ಣ ತಲೆಗೆ ಕೈಯಿಟ್ಟುಕೊಂಡು ಆರುತ್ತಿದ್ದ ಬೆಂಕಿಯನ್ನು ಶೂನ್ಯದೃಷ್ಟಿಯಿಂದ ನಿಟ್ಟಿಸುತ್ತ ಕೆಲ ಕಾಲ ಮೌನವಾಗಿ ಕುಳಿತುಕೊಂಡಿದ್ದು, ಅನಂತರ ಏನನ್ನೋ ನಿರ್ಧರಿಸಿದವನಂತೆ ಎದ್ದು ಬರೆಯುವ ಪೆಟ್ಟಿಗೆಯ ಬಳಿ ಬಂದು ಕಾಗದದ ಮೇಲೆ ಸರಸರನೆ ಬರೆಯತೊಡಗಿದ.

“ಮತ್ತೇನ ಬರೀತೀರಿ?” ಎಂದಳು ಅವನ ಪತ್ನಿ ಗೋದಾಬಾಯಿ.

“ಈ ಮಕ್ಕಳಿಗೆಲ್ಲ ಸರಿಯಾಗಿ ಬುದ್ಧೀ ಕಲಿಸದಿದ್ದರ ನನ್ನ ಹೆಸರು ಕುಲಕರ್ಣಿ ರಂಗಣ್ಣ ಅಲ್ಲ!” ಎಂದು ತ್ವೇಷದಿಂದ ನುಡಿದು ಆತ ರಭಸದಿಂದ ಬರೆಯತೊಡಗಿದ.

“ಊರವರ ವಿರುದ್ಧ ಹೋಗಬ್ಯಾಡ್ರಿ, ಮಾರಾಯರ. ಯಾವ ವ್ಯಾಳೇದಾಗ ಏನಾದೀತು ಅಂಬೋ ಭರವಸೆ ಇಲ್ಲ” ಎಂದಳು ಗೋದಾಬಾಯಿ.

“ನಿನಗೇನು ತಿಳಿತೈತಿ ತಲಿ, ಇದರಾಗ? ಸುಮ್ಮನೆ ಬಿದ್ದುಕೋ ಹೋಗು. ಸರಕಾರ ಏನೂ ಸತ್ತು ಹಾಳಾಗಿ ಹೋಗಿಲ್ಲ. ಒಂದು ಚೀಟಿ ಕಳಿಸಿದರ ಸಾಕು—ನಾಳೆ ಮುಂಜಾನೆಯೊಳಗಾಗಿ ದಂಡು ಬರತೈತಿ ದಂಡು. ಆಮ್ಯಾಲ ಬರಲಿ ಇವರು ನನ್ನ ಹೆದರಿಸೂದಕ್ಕ!” ಎಂದು ನುಡಿದು ಆತ ಬರೆಯುತ್ತಲೇ ಇದ್ದ.

“ದಂಡೂ ಬಂದೀತು. ಗುಂಡೂ ಬಂದೀತು. ನಾಳೆ ಬಂದು ನಾಡದು ಹೋದೀತು. ವರ್ಷಾನುಗಟ್ಲೆ ಏನೂ ಇಲ್ಲೇ ಇರೂದಿಲ್ಲಲ್ಲ, ನಿಮ್ಮನ್ನ ಕಾಯಲಿಕ್ಕೆ? ಏನಾದರೂ ನಮ್ಮದೂ ಊರವರದೂ ಋಣಾನುಬಂಧ ಇದ್ದ

ಹಾಂಗ. ಅವರ ವಿರುದ್ಧ ಸರಕಾರಕ್ಕ ಬರೀಬ್ಯಾಡ್ರಿ. ಘಾತ ಆದೀತು!" ಎಂದು ಗೋದಾಬಾಯಿ ಹೆದರುತ್ತಲೇ ಹೇಳಿದಳು.

ರಂಗಣ್ಣ ಅವಕ್ಕನೆ ಅವಳ ಮೈಮೇಲೆ ಹೋದಹಾಗೆ ಮಾಡಿ— "ಹೇಳಿದ್ದು ಕೇಳಿಸಲಿಲ್ಲೇನು ನಿನಗ? ಇಂಥಾದ್ದರಾಗೆಲ್ಲ ನಿನಗ ತಿಳಿಯೂದಿಲ್ಲ. ನಡೀ ಹೋಗು. ಬಿದ್ದುಕೋ ಹೋಗು. ನಿಮ್ಮ ದಶೆಯಿಂದs ಅಲ್ಲೇನು ನಾ ನೋಕರಿ ಮಾಡ್ತಾ ಇರೂದು? ಇನ್ನೂ ಮೂರು ಮಂದಿ ಹುಡುಗಿಯರ ಮದುವೀ ಮಾಡಬೇಕು. ಸಣ್ಣವರಿಗೆ ಸಾಲೀ ಕಲಿಸಬೇಕು. ಅದೆಲ್ಲಾ ಪುಕಟ ಆಗ್ತದೇನು? ನನ್ನ ನೋಕರಿ ಹೋದರ ಊರವರಿಗೇನು? ಅವ ರೇನೋ ಹೊಲದಾಗ ಕೂಲಿ ಕುಂಬಳಿ ಮಾಡಿ ಹೊಟ್ಟಿ ಹೊರೆದಾರು. ನಾವು ಅವರಾಂಗ ಕೂಲೀ ಮಾಡಾಕಾಗ್ತದೇನು? ನಮ್ಮ ನಮ್ಮ ಸಂಕಟ ನಮ ನಮಗೇ ಗೊತ್ತು. ಅವರಿಗ್ಯಾಂಗ ತಿಳಿದೀತು!" ಎಂದು ಗೊಣಗಿಕೊಳ್ಳುತ್ತ ಕಾಗದ ಬರೆದು ಮುಗಿಸಿ, ಲಕೋಟಿಯಲ್ಲಿ ಹಾಕಿ ಭದ್ರಗೊಳಿಸಿ, ಮೇಲೆ ವಿಳಾಸವನ್ನು ಬರೆದ; ಅನಂತರ ಕಂಬಳಿಯನ್ನು ಮೈಮೇಲೆ ಹೊದೆದುಕೊಂಡು ಹೆಂಡತಿಯ ಕಡೆಗೆ ತಿರುಗಿ—"ನೀವೆಲ್ಲಾ ಮಲಗಿಕೊಳ್ರಿ. ನಾ ಸ್ವಲ್ಪ ಆ ತಳವಾರನ್ನ ಎಬ್ಬಿಸಿ ಕಳಿಸಿ ಬರ್ತೀನಿ" ಎಂದು ಹೇಳಿ ಮನೆಯಿಂದ ಹೊರ ಹೊರಟ.

೧೧

ಹಳ್ಳೂರಿನ ದೇಸಾಯಿ ಬಾಬಾ ಸಾಹೇಬರೆಂದರೆ ಬೆಳಗಾವಿ ಜಿಲ್ಲೆಯ ಜನರಿಗೆಲ್ಲ ಗೊತ್ತು. ತಾಲೂಕಿನ ಜನರಂತೂ ಅವರನ್ನು "ಹುಚ್ಚ ದೇಸಾಯಿ" ಎಂದು ಕರೆಯುತ್ತಿದ್ದರು; ಹಿರಿಯರು ಗಳಿಸಿದ್ದ ಆಸ್ತಿಯಲ್ಲಿ ಬಹುಭಾಗವನ್ನು ಅವರು ವಿಲಕ್ಷಣ ಹಾಗೂ ಅನವಶ್ಯಕ ವಿಷಯಗಳಿಗಾಗಿ ಹಾಳುಮಾಡಿದ್ದುದೇ ಅದಕ್ಕೆ ಕಾರಣವಾಗಿದ್ದಿತು. ಗಾಂಧೀಯುಗದಲ್ಲೂ ಅವರು ಪ್ರದರ್ಶಿಸುತ್ತಿದ್ದ ಅದ್ಭುತವಾದ ರಾಜನಿಷ್ಠೆ, ರಾಷ್ಟ್ರೀಯ ಚಳವಳಿಗಳ ಬಗೆಗೆ ಅವರು ತೋರಿಸುತ್ತಿದ್ದ ಕಡುವಿರೋಧಗಳೂ ಅದಕ್ಕೆ ಕಾರಣವಾಗಿದ್ದುವು.

ಪತ್ನಿಯನ್ನು ಕಳೆದುಕೊಂಡಂದಿನಿಂದ ದೇಸಾಯಿಯ ಸ್ವಭಾವ ಇನ್ನೂ ವಿಲಕ್ಷಣವಾಗಿದ್ದಿತು. ಹಗಲಿನ ಬಹುಭಾಗವನ್ನೂ, ಇರುಳಿನ ಅರ್ಧಭಾಗವನ್ನೂ

ಮನೆಯ ಹೊರಗಡೆಗೇ ಕಳೆದು, ರಾತ್ರಿ ಒಂದು ಗಂಟೆಯ ಕಾಲಕ್ಕೆ ಬಂದು ಮಲಗಿಕೊಳ್ಳುತ್ತಿದ್ದರು. ಬೇಟೆಯಾಡುವುದರಲ್ಲಿ ಮೊದಲು ಅವರಿಗಿದ್ದ ಆಸಕ್ತಿ ಬರುಬರುತ್ತ ಕಡಿಮೆಯಾಗಿ ಕೊನೆಗೆ ಪೂರ್ಣವಾಗಿ ಅಳಿದುಹೋಗಿದ್ದಿತು. ಇಸ್ಪೀಟು, ಮದ್ಯ, ಮದಿರಾಕ್ಷಿ ಇವು ಮೂರೂ, ಅವರು ಪ್ರಪಂಚವನ್ನೆಲ್ಲ ಮರೆಯುವಂತೆ ಮಾಡಿದ್ದುವು.

ಪುಣೆಯಲ್ಲಿ ಕಾಲೇಜಿನಲ್ಲಿ ಕಲಿಯುತ್ತಿದ್ದ ತಮ್ಮ ಮಗ ವಿಶ್ವನಾಥನ ನೆನಪೂ ಆಗಾಗ ಬರದಿರುತ್ತಿರಲಿಲ್ಲ. ಆದರೆ ಅವನ ಬಗ್ಗೆ ವಿಶೇಷ ಚಿಂತೆ ಮಾಡುವ ಸಂದರ್ಭಗಳು ಅವರಿಗೊದಗಿರಲಿಲ್ಲ. ತಿಂಗಳಿಗೊಮ್ಮೆ ಅವನಿಗೆ ಹಣ ಕಳುಹಿಸಿಬಿಟ್ಟರಾಯಿತು,ಮತ್ತೆ ಮುಂದಿನ ತಿಂಗಳಿನವರೆಗೆ ಯಾವ ಯೋಚನೆಯೂ ಇರುತ್ತಿರಲಿಲ್ಲ. ಕಾಲೇಜು ಹಾಸ್ಟಲಿನಲ್ಲಿ ಸುಖವಾಗಿ ಊಟ ಮಾಡಿಕೊಂಡು ಪುಣೆಯಂಥ ಭವ್ಯ ನಗರದಲ್ಲಿ ಆನಂದದಿಂದ ಆತ ಕಾಲ ಕಳೆಯುತ್ತಿರುವನೆಂಬ ನಂಬಿಕೆ ಅವರನ್ನು ನೆಮ್ಮದಿಯಿಂದ ಇರಿಸಿದ್ದಿತು.

ಆದರೆ — ಈಚೆಗೆ ಕೆಲದಿನಗಳಿಂದ ದೇಸಾಯರಿಗೆ ಅವನನ್ನು ಕುರಿತು ಬಲವಾದ ಚಿಂತೆ ಮುತ್ತಿಕೊಂಡಿದ್ದಿತು. "ಕ್ವಿಟ್ ಇಂಡಿಯಾ" ಚಳವಳಿಗಾರಂಭವಾಗಿ ದೊಡ್ಡ ದೊಡ್ಡ ನಗರಗಳಲ್ಲೆಲ್ಲ ಲಾಠೀಚಾರ್ಜು, ಗೋಳೀಬಾರು ನಡೆಯತೊಡಗಿದಾಗ ಅವರಿಗೆ ತಮ್ಮ ಏಕಮಾತ್ರ ಪುತ್ರನ ಕ್ಷೇಮದ ಬಗ್ಗೆ ಆಶಂಕೆಯುಂಟಾಗದಿರಲಿಲ್ಲ. ಮೂರು ತಿಂಗಳುಗಳ ಕಾಲ ಕಾಲೇಜುಗಳಿಗೆಲ್ಲ ರಜ ಕೊಡಲ್ಪಟ್ಟದೆಯೆಂಬ ಸುದ್ದಿಯೂ ಅವರ ಕಿವಿಗೆ ಬಿದ್ದಿತು. ಅಂದಿನಿಂದ ಅವರ ಯೋಚನೆ ಇನ್ನೂ ಬಲವಾಗಿದ್ದಿತು. ಕಾಲೇಜು ಮುಚ್ಚಲ್ಪಟ್ಟ ಮೇಲೆ ವಿಶ್ವನಾಥ ಅಲ್ಲಿದ್ದು ಏನು ಮಾಡಿಯಾನು? ಇಷ್ಟು ಹೊತ್ತಿಗೆ ಊರಿಗೆ ಬರಬೇಕಾಗಿದ್ದಿತು, ಬರಲಿಲ್ಲ. ಅಂದಮೇಲೆ....?

ಅವರ ಬಗೆಗಣ್ಣಿನೆದುರಿಗೆ ಹಲವಾರು ಭೀಕರ ದೃಶ್ಯಗಳು ಮೂಡಿ ಮಾಯವಾಗಿದ್ದುವು. ನಗರದಲ್ಲಿ ತಿರುಗಾಡಲು ಹೋದ ವಿಶ್ವನಾಥ ಜನದ ಗುಂಪಿನಲ್ಲಿ ಸೇರಿಕೊಂಡು ಲಾಠಿ ಪೆಟ್ಟುಗಿಟ್ಟು ತಿಂದಿರಬಹುದೇ?— ಅಥವಾ ಗೋಳೀಬಾರು ನಡೆದಿದ್ದಾಗ ಈತನಿಗೆ ಎಲ್ಲಾದರೂ ಗುಂಡು....ಗಿಂಡು....! ಅದರೊಂದಿಗೆ ಅವರ ಮೈ ರೋಮಾಂಚಿತವಾಗುವುದು.

ವಿಶ್ವನಾಥನ ಸುದ್ದಿಯನ್ನು ತಿಳಿಯಲೆಂದು ಅವರೊಂದು ಕಾಗದವನ್ನೂ ಬರೆದಿದ್ದರು. ಅದಕ್ಕೆ ಮಾರುತ್ತರ ಬಂದಿರಲಿಲ್ಲವಾದ್ದರಿಂದ ಅವರ ಕಳವಳವಿನ್ನೂ ಹೆಚ್ಚಿದ್ದಿತು. ಕೂಡಲೆ, ಅವನ ಕ್ಷೇಮಸಮಾಚಾರ ತಿಳಿಸಬೇಕೆಂದು ಹಾಸ್ಟಲ್ ಸೂಪರಿಂಟೆಂಡೆಂಟರಿಗೆ ತಂತಿ ಕಳುಹಿಸುವ ಯೋಚನೆ ಮಾಡುತ್ತ ಅಂದು ಅವರು ಮನೆಗೆ ಮರಳಿದ್ದರು. ನೇರವಾಗಿ ಮಲಗುವ ಕೊಟಡಿಗೆ ಬಂದು ಬಟ್ಟೆಗಳನ್ನು ತೆಗೆದಿಡುವುದನ್ನು ಮರೆತು ಹಾಗೇ ಮಂಚದ ಮೇಲೆ ದೇಹವನ್ನೊರಗಿಸಿದ್ದರು. ಆಗತಾನೆ ಸೇವಿಸಿದ್ದ ವಿದೇಶೀಯ ಮದ್ಯದ ಗುಂಗು ಅವರ ಸ್ಮೃತಿಯನ್ನೆಲ್ಲ ಕವಿದುಕೊಂಡಂತಿದ್ದಿತು.

ಒಂದೆರಡು ಗಂಟೆಗಳ ಕಾಲ ಕಳೆದಿರಬಹುದು.

ಹೊರಬಾಗಿಲಿನ ಹತ್ತಿರ ಪಡಸಾಲೆಯಲ್ಲಿ ಮಲಗಿದ್ದ ಆಳುಮನುಷ್ಯನಿಗೆ ಅಕಸ್ಮಾತ್ತಾಗಿ ಎಚ್ಚರವಾಯಿತು. ತಲೆತುಂಬ ಹೊದೆದುಕೊಂಡಿದ್ದ ಕಂಬಳಿಯನ್ನು ತೆಗೆದು ಆತ ಕಣ್ಣುಜ್ಜಿಕೊಳ್ಳುತ್ತ ಮೇಲಕ್ಕೆದ್ದ.

ಬಾಗಿಲಿನ ಮೇಲೆ ಯಾರೋ ಸದ್ದು ಮಾಡುತ್ತಿದ್ದರು.

ಆಳು ಗೊಣಗಿಕೊಳ್ಳುತ್ತ ಮೇಲಕ್ಕೆದ್ದು ಬಾಗಿಲು ತೆರೆಯುತ್ತಲೂ ಮೂರು ನಾಲ್ಕು ಜನ ಒಳಸೇರಿ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡರು. ಗಾಬರಿಗೊಂಡು ಆತ ಕೂಗಿಕೊಳ್ಳುವಷ್ಟರಲ್ಲೇ ಅವನ ಬಾಯಲ್ಲಿ ಬಟ್ಟೆಯನ್ನು ತುರುಕಿ ಕೈಕಾಲುಗಳನ್ನು ಕಟ್ಟಿಬಿಡಲಾಯಿತು. ಪಡಸಾಲೆಯ ಬದಿಯಲ್ಲಿದ್ದ ಕೊಟಡಿಯೊಂದರಲ್ಲಿ ಅವನನ್ನು ನೂಕಿ ಅದರ ಬಾಗಿಲು ಮುಚ್ಚಿ ಚಿಲಕ ಹಾಕಲಾಯಿತು.

"ನೀನೊಬ್ಬನೇ ಮೇಲೆ ಹೋಗ್ತೀಯೇನು ಸಂಗಣ್ಣ ?"

"ಹೂಂ. ನೀವು ಹೊರಗಡೆ ಇರ್ರಿ. ನಾನು ಸನ್ನೆ ಮಾಡಿದಾಗ ಬರ್‍ರಿ," ಎಂದು ನುಡಿದು ಸಂಗಣ್ಣ, ದೇಸಾಯರು ಮಲಗುವ ಕೊಟಡಿಯ ಕಡೆಗೆ ನಡೆದ. ಮೆಟ್ಟಲುಗಳನ್ನೇರಿ ಮೇಲೆ ಹೋಗಿ ಬಾಗಿಲಿನ ಮೇಲೆ ಬೆರಳಿನಿಂದ ತಟ್ಟಿ "ದೇಸಾಯರs, ದೇಸಾಯರ" ಎಂದು ಕೂಗಿದ.

ಮೂರು ನಾಲ್ಕು ನಿಮಿಷಗಳವರೆಗೆ ಒಳಗಡೆ ಯಾವ ಚಲನವಲನವೂ ಆದಂತೆ ತೋರಲಿಲ್ಲ. ಸಂಗಣ್ಣ ಮತ್ತೊಂದು ಬಾರಿ ಗಟ್ಟಿಯಾಗಿ ಕೂಗಿದಾಗ ದೇಸಾಯಿಯವರಿಗೆ ಎಚ್ಚರವಾಯಿತು. ಮದ್ಯದ ಗುಂಗು ಇನ್ನೂ ಇಳಿದಿರಲಿಲ್ಲ

ನಾದರೂ ಯಾರೋ ಬಂದು ಬಾಗಿಲು ತಟ್ಟುತ್ತಿರುವುದರ ಅರಿವೂ ಆಗದಿರಲಿಲ್ಲ. ಹಾಸಿಗೆಯ ಮೇಲೆ ಒರಗಿದ್ದ ಹಾಗೇ "ಯಾರೋ ಅವರು?" ಎಂದು ಕೂಗಿದರು.

"ಸಾಸ್ರಿ, ಕಲ್ಲಾಪುರದ ಸಂಗಣ್ಣ, ಪೈಲ್ವಾನ್ ಸಂಗಣ್ಣ."

"ಯಾಕ ಬಂದಿಯೋ ಇಂಥಾ ಹೊತ್ತಿನಾಗ ?"

"ಬೆಳಗಾವಿಯಿಂದ ಬಂದೀನ್ರಿ, ದೇಸಾಯರs, ಅಲ್ಲಿ ಸಣ್ಣ ದೇಸಾಯರು ಭೆಟ್ಟಿ ಆಗಿದ್ರು. ನಿಮಗೊಂದು ಸುದ್ದೀ ತಿಳಿಸಿದಾರ. ಅದಕ್ಕ ಬಂದೇನ್ರಿ ಓಡಿ...."

ಸಣ್ಣ ದೇಸಾಯರು ಎಂಬ ಶಬ್ದ ಕಿವಿಗೆ ಬೀಳುತ್ತಲೂ ಬಾಬಾಸಾಹೇಬರ ತಲೆಯಲ್ಲಿನ ಅಮಲು ಪೂರ್ಣವಾಗಿ ಇಳಿದುಹೋದಂತಾಯಿತು. ಆತುರದಿಂದ ಎದ್ದು ಬಾಗಿಲು ತೆರೆದು, ಸಂಗಣ್ಣನನ್ನು ಒಳಕ್ಕೆ ಕರೆದುಕೊಂಡರು. ಮಂಚದ ಬದಿಯಲ್ಲಿದ್ದ ಪುಟ್ಟ ಮೇಜಿನ ಮೇಲೆ ಸಣ್ಣಗೆ ಉರಿಯುತ್ತಿತ್ತು ಒಂದು ಕಂದೀಲು. ಗೋಡೆಯ ಮೇಲೆ ನೇತುಹಾಕಲ್ಪಟ್ಟಿದ್ದ ಮೂರು ಬಂದೂಕುಗಳನ್ನು ಆನಂದ ದಿಂದ ನಿಟ್ಟಿಸುತ್ತ ಸಂಗಣ್ಣ ಹಾಗೇ ನಿಂತಿದ್ದ.

"ಏನು ಸಂಗಣ್ಣ, ಎಲ್ಲಿದಾನೆ ನಮ್ಮ ವಿಶ್ವನಾಥ?" ಎಂದು ಆತುರದಿಂದ ಕೇಳಿದರು ದೇಸಾಯಿ.

"ಇಲ್ಲೇ ಇದಾರ ದೇಸಾಯರs."

"ಅಂದರs ? ಊರಿಗೆ ಬಂದಾನೋ ಏನು ಅವ ? ಹಾಗಾದರ ಮನಿಗೆ ಯಾಕ ಬಂದಿಲ್ಲ ? ಇದೇನು ಚಮತ್ಕಾರಾನೊ ?"

"ಚಮತ್ಕಾರದ ಮಾತs ಅನ್ರಿ ದೇಸಾಯರs. ನೀವು ಸಿಟ್ಟಿಗೆ ಬರದಿದ್ದರ ಎಲ್ಲಾ ಹೇಳಬೇಕಂತ ನನ್ನ ಇಲ್ಲಿಗೆ ಕಳಿಸಿದ್ದಾರ. ನೀವು ಸಿಟ್ಟಾಗದಿದ್ದರ ಮಾತ್ರ ಅವರು ನಿಮ್ಮನ್ನ ಭೆಟ್ಟಿ ಆಗತಾರಂತ!"

"ಸಿಟ್ಟಾಗುವಂಥಾದ್ದೇನ ಮಾಡಿದಾನ ಅವ? ಈಗ ಅವ ಇರೂದಾದ್ರೂ ಎಲ್ಲಿ ?"

"ಇಲ್ಲೇ ಇದಾರ ಊರ ಹೊರಗ-ಹಣಮಪ್ಪನ ಗುಡಿಯ ಹತ್ತಿರ. ನೀವು ಕರೆದರೆ ಮಾತ್ರ ಬರತಾರಂತೆ ಮನೆಗೆ. ಇಲ್ಲದಿದ್ದರ ಹಾಂಗs ಹೋಗಿಬಿಡ್ತಾರಂತೆ!"

"ಏನದು, ಬಿಡಿಸಿ ಹೇಳೋ! ಯಾಕ ಒಗಟದಂಗ ಮಾತಾಡ್ತೀ?" ಎಂದು ಅಸಹನೆಯಿಂದ ನುಡಿದರು ದೇಸಾಯಿ.

“ಚಿಕ್ಕ ಧಣೇರ ಮ್ಯಾಲಿ ನೀವು ಸಿಟ್ಟಾಗಬಾರದು, ದೇಸಾಯರs. ಅವರು ಚಳವಳಿಯೊಳಗ ಸೇರಿಕೊಂಡುಬಿಟ್ಟಾರ. ಅವರ ಮ್ಯಾಲ ವಾರಂಟೂ ಬಂದೈತಂತೆ. ಈಗ ಪೋಲೀಸರ ಕಣ್ಣು ತಪ್ಪಿಸಿ ತಿರುಗಾಡ್ತಾ ಇದಾರ. ನಿನ್ನೆ ಬೆಳಗಾವಿಯೊಳಗ ನನಗ ಪಟ್ಟನs ಭೆಟ್ಟಿಯಾಗಿ ಎಲ್ಲಾ ಹೇಳಿದರು. ಒಮ್ಮೆ ಊರಿಗೆ ಬಂದು ನಿಮ್ಮನ್ನು ಭೆಟ್ಟಿಯಾಗಬೇಕಂತ ಅನಿಸ್ತದಂತ ಹೇಳಿದರು. ಆದರs, ನೀವು ಕಾಂಗ್ರೆಸ್ಸಿಗೆ ಪೂರಾ ವಿರುದ್ಧ ಅನ್ನೂದು ಅವರಿಗೇನು ಗೊತ್ತಿಲ್ಲೇನು? ಅದಕ್ಕs ಒಮ್ಮೆಲೆ ಮನೆಗೆ ಬರೂ ಧೈರ್ಯ ಮಾಡದೆ ನನಗೆ ಹೇಳಿ ಕಳಿಸ್ಯಾರ....”

ಮನೆಯ ಮೇಲ್ಛಾವಣಿ ಮುರಿದುಬಿದ್ದಂತಾಯಿತು, ದೇಸಾಯರ ತಲೆಯ ಮೇಲೆ. ತಮ್ಮ ಒಬ್ಬನೇ ಒಬ್ಬ ಮಗ, ತಾವು ಅಷ್ಟೊಂದು ಅಕ್ಕರೆಯಿಂದ ಸಾಕಿ ಬಳೆಯಿಸಿದ ಮಗ ವಿಶ್ವನಾಥ ಚಳವಳಿಗೆ ಸೇರಿಕೊಂಡಿದ್ದ, ಕಾಂಗ್ರೆಸ್ ಚಳವಳಿಗೆ! ಮಾಡಲು ಕೆಲಸವಿಲ್ಲದ ಕೆಲವರು ನಿರುದ್ಯೋಗಿಗಳು ನಡಸುವ ಚಳವಳಿಗೆ! ಮೊದಲಿನಿಂದಲೂ ಅವರಿಗೆ ಕಾಂಗ್ರೆಸ್ ಎಂದರಾಗದು. ಗಾಂಧೀ ಟೋಪಿಯನ್ನು ಕಾಣುತ್ತಲೂ ಉರಿದುಬೀಳುತ್ತಿದ್ದರು. ನಡುವೆ ಕೆಲವು ವರುಷ ಆ ಟೋಪಿಯವರೇ ರಾಜ್ಯಭಾರ ವಹಿಸಿದ್ದಾಗ, ಮನಸ್ಸಿನಲ್ಲಿಲ್ಲದಿದ್ದರೂ ಸುಮ್ಮನಿದ್ದುಬಿಟ್ಟದ್ದರು. ಯುದ್ಧಕ್ಕಾರಂಭವಾಗುತ್ತಲೂ ಮತ್ತೆ ಆ ಬಿಳಿಟೋಪಿಗಳ ರಾಜ್ಯ ಹೋಗಿ ಹ್ಯಾಟುಗಳ ಅಧಿಕಾರಕ್ಕಾರಂಭವಾದಾಗ ದೊಡ್ಡ ಪೀಡೆ ತೊಲಗಿಹೋಯಿತೆಂದು ಸಂತೋಷಗೊಂಡಿದ್ದರು. ಕಲೆಕ್ಟರ್, ಕಮಿಶನರ್, ಡಿ. ಎಸ್. ಪಿ., ಮಾಮಲೇದಾರ್ ಇತ್ಯಾದಿ ಸರಕಾರಿ ಅಧಿಕಾರಿಗಳಿಗೂ ಅವರಿಗೂ ಬಹಳ ಸ್ನೇಹ. ಸಾವಿರಾರು ಜನ ಅಧಿಕಾರಿಗಳನ್ನು ತಮ್ಮೂರಿಗೆ ತಮ್ಮಲ್ಲಿಗೆ ಬರಮಾಡಿಕೊಂಡು ಸತ್ಕರಿಸಿದ್ದರು, ಅವರಿಗಾಗಿ ಹಣವನ್ನೂ ಹಾಳುಮಾಡಿಕೊಂಡಿದ್ದರು. ಯುದ್ಧಕ್ಕಾರಂಭವಾದಂದಿನಿಂದ ಅದರ ನೆರವಿಗಾಗಿ ನಡೆದ ಅನೇಕ ಕಾರ್ಯಕ್ರಮಗಳಿಗೆ ಉದಾರವಾಗಿ ಸಹಾಯ ಮಾಡಿದ್ದರು. ಸೈನ್ಯ ಭರತಿಗಾಗಿ ಶ್ರಮವಹಿಸಿ ದುಡಿದಿದ್ದರು. ತಮ್ಮ ಏಕನಿಷ್ಠ ಸೇವೆಯನ್ನು ಮನಗಂಡು ಇಷ್ಟರಲ್ಲೇ ಸರಕಾರದವರು ತಮಗೊಂದು ಪದವಿಯನ್ನರ್ಪಿಸಬಹುದೆಂದೂ ಆಶಿಸಿಕೊಂಡಿದ್ದರು. ದಿವಾನ್ ಬಹದ್ದೂರ್ ಅಲ್ಲದಿದ್ದರೂ ರಾವ್ ಬಹದ್ದೂರ್ ಎಂಬ ಪದವಿಯಾದರೂ ಸಿಕ್ಕೇ ಸಿಗಬಹುದೆಂದು ನಂಬಿಕೊಂಡಿದ್ದರು. ಅಂತೆಯೆ, ಸರಕಾರದ ವಿರುದ್ಧ ಚಳವಳಿಗಳನ್ನೆಲ್ಲ ಅವರು ಬಲವಾಗಿ ವಿರೋಧಿಸುತ್ತಿದ್ದರು. ಕಾಂಗ್ರೆಸ್ಸಿಗರ ಕಟ್ಟಾ ವೈರಿಯಾದ

ತಮ್ಮ ಏಕಮಾತ್ರ ಪುತ್ರನೇ ಕಾಂಗ್ರೆಸ್ ಚಳವಳಿಗೆ ಸೇರಿಕೊಂಡು, ಪೋಲೀಸರ ಕಣ್ಣು ತಪ್ಪಿಸಿ ಅಲೆಯುತ್ತಿರುವ ಈ ಸಮಾಚಾರ ಅವರನ್ನು ದಿಙ್ಮೂಢರನ್ನಾಗಿ ಮಾಡದಿದ್ದೀತೇ? ಇಷ್ಟು ವರ್ಷಗಳ ಕಾಲ ತಾವು ಕಷ್ಟಪಟ್ಟು ಸರಕಾರಕ್ಕೆ ನಿಷ್ಠೆಯಿಂದ ಸಲ್ಲಿಸಿದ ಸೇವೆಗೆ ಪ್ರತಿಫಲ ದೊರೆಯುವ ಸಮಯ ಬಂದಿದ್ದಾಗ ಅದು ವ್ಯರ್ಥವಾಗುವ ದುಷ್ಟಯೋಗ ಬರಬೇಕೇ ಈ ಕೆಟ್ಟ ಹುಡುಗನಿಂದ! ತಮ್ಮ ಹೊಟ್ಟೆಯ ಮಗನಿಂದ! ಕೊಂಚಹೊತ್ತು ಅವರ ಮುಖದಿಂದ ಮಾತೇ ಹೊರಡ ಲಿಲ್ಲ. ಅನಂತರ ತಮ್ಮನ್ನು ತಾವೇ ಸಾವರಿಸಿಕೊಂಡು–"ಅಂತೂ ಸರ್ವನಾಶ ಮಾಡಿದ ಅನ್ನು—ಈಗೇನು ಅಂತಾನ ಅವ?" ಎಂದು ಕೇಳಿದರು.

"ನಿಮಗೆ ಇಚ್ಛಾ ಇದ್ದರೆ ಮಾತ್ರ ಭೆಟ್ಟಿಯಾಗುತ್ತಾರಂತೆ."

"ಆಗಲಿ. ಬಾ ಅಂತ ಹೇಳು."

"ಹಾಂಗಲ್ಲರಿ. ನೀವೇ ಬಂದು ಕರೆಯಬೇಕಂತೆ. ಅಂದರ ಬರ್ತಾರ."

"ಹೀಂಗೇನು....?" ಎಂದು ಉದ್ಗಾರ ತೆಗೆದು ದೇಸಾಯಿ ವಿಚಾರ ಮಾಡ ತೊಡಗಿದರು. ತಮ್ಮ ಇಚ್ಛೆಗೆ ವಿರುದ್ಧವಾಗಿ ಚಳವಳಿಗೆ ಸೇರಿ ತಮ್ಮ ಆಕಾಂಕ್ಷೆ ಗಳಿಗೆಲ್ಲ ಕೊಡಲಿಯೇಟು ಹಾಕುತ್ತಿರುವ ಈ ಕುಲಾಂಗಾರನನ್ನು ಮತ್ತೊಮ್ಮೆ ನೋಡಬಾರದೆಂದು ಒಮ್ಮೆ ಅಂದುಕೊಂಡರು. ಆದರೆ ಮರುಕ್ಷಣವೇ ಆತ ತಮ್ಮ ಏಕಮಾತ್ರ ಪುತ್ರನೆಂಬುದು ನೆನಪಿಗೆ ಬಂದಾಗ ಅವರ ರೊಚ್ಚು ಮೆಲ್ಲ ಮೆಲ್ಲನೆ ಕಡಮೆಯಾಗತೊಡಗಿತು. ಅವನೊಬ್ಬನನ್ನುಳಿದು ಇನ್ನಾರೂ ತಮಗಿಲ್ಲ. ಆತನೇ ತಮ್ಮ ಏಕಮಾತ್ರ ಆಧಾರ, ಇಷ್ಟು ವರ್ಷಗಳ ಕಾಲ ಮುದ್ದಿನಿಂದ ಸಾಕಿ ಬೆಳೆಯಿಸಿದ ಹುಡುಗ. ಇಂದು ಕೆಟ್ಟ ಸಹವಾಸದಿಂದಾಗಿ ಆತ ಅರಿಯದೆ ತಪ್ಪುದಾರಿ ತುಳಿದಿದ್ದಾನು–ಮನೆಗೆ ಕರೆದು ತಂದು ಚೆನ್ನಾಗಿ ಬುದ್ಧಿ ಹೇಳಿದರೆ ಸರಿಯಾದ ದಾರಿಗೆ ಬಂದಾನು. ಅವನ ಮೇಲೆ ಬಂದಿರಬಹುದಾದ ವಾರಂಟ್ ರದ್ದುಗೊಳಿಸುವುದೇನೂ ದೊಡ್ಡ ವಿಷಯವಲ್ಲ; ಕಲೆಕ್ಟರರಿಗೊಂದು ಪತ್ರ ಬರೆದರೆ ಸಾಕು–ಹೊರಟುಹೋಗುವುದು. ಚಳವಳಿಯ ಗೊಂದಲ ತೀರುವ ತನಕ ಆತನ ನ್ನಿಲ್ಲಿಯೆ ಇರಿಸಿಕೊಂಡು ಅನಂತರ ಮತ್ತೆ ಕಾಲೇಜಿಗೆ ಕಳುಹಿಸಬಹುದು. ಅಂತೂ ಈಗ ಗುಡಿಯ ಬಳಿಗೆ ಹೋಗಿ ಅವನನ್ನು ಕರೆದು ತರುವುದೇ ಉತ್ತಮವಾದ ಉಪಾಯ ಎಂದು ಅವರಿಗೆ ಮನವರಿಕೆಯಾಗುತ್ತಲೂ ದೇಸಾಯರು ಎದ್ದು ಬಿಟ್ಟು

" ನಡಿ ಹಾಂಗಾದರ ಸಂಗಣ್ಣ. ಅವನ್ನ ಕರಕೊಂಡು ಬರೋಣ " ಎಂದು ಹೇಳಿ ಹೊರಹೊರಟರು.

ಊರ ಹೊರಗಿನ ಹನುಮಪ್ಪನ ಗುಡಿಯುವರೆಗೆ ಬರುವತನಕ ಯಾರೂ ಮಾತನಾಡಲಿಲ್ಲ. ಸಂಗಣ್ಣ ಅತ್ತ ಇತ್ತ ದೃಷ್ಟಿಸಿದ ಹಾಗೆ ನಟಿಸುತ್ತ " ಸಣ್ಣ ದೇಸಾಯರs, ಸಣ್ಣ ದೇಸಾಯರs " ಎಂದು ಮೂರು ನಾಲ್ಕು ಬಾರಿ ಕೂಗಿದ. ಯಾವ ಉತ್ತರವೂ ಬರಲಿಲ್ಲ.

" ಎಲ್ಲಿ ಕೂತಿದ್ದನಪ್ಪಾ ಅವ ?" ಎಂದು ಕಳವಳದಿಂದ ಕೇಳಿದರು ದೇಸಾಯರು.

" ಇಲ್ಲೇ ಇದ್ರು ಕಟ್ಟೇ ಮ್ಯಾಲ. ಎಲ್ಲಿಗೆ ಹೋದರೋ ಏನೊ ಇಷ್ಟರಾಗs. ಮತ್ತೆ ಮನಸುಗಿನಸು ಬದಲಾಯಿಸಿದರೋ ಏನೊ. ನಿಮ್ಮನ್ನ ಭೆಟ್ಟಿಯಾಗ ಬೇಕಂತs ಬಂದವರು. ಆದರs, ನೀವು ಬಹಳ ಸಿಟ್ಟಿನವರು ಅಂತ ಗೊತ್ತೇ ಐತೆಲ್ಲ ಅವರಿಗೆ ? ಅದಕ್ಕs ಮತ್ತೆ ಏನಾದರೂ ವಿಚಾರ ಮಾಡಿ ಈಗ ನಿಮ್ಮನ್ನ ಭೆಟ್ಟಿಯಾಗೂದು ನೆಟ್ಟಗಲ್ಲ ಅಂತ ಹೊರಟುಹೋಗಿಬಿಟ್ಟರೋ ಏನೊ...."

ಬಾಬಾಸಾಹೇಬರ ಹೃದಯ ಡವಡವನೆ ಹೊಡೆದುಕೊಳ್ಳತೊಡಗಿತು. ತಾನು ಕೋಪಿಸಿಕೊಳ್ಳಬಹುದೆಂಬ ಆಶಂಕೆಯಿಂದ ಹಾಗೇ ಹೊರಟುಹೋಗಿದ್ದರೂ ಇರಬಹುದು ಆತ. ತನ್ನ ಒಬ್ಬನೇ ಒಬ್ಬ ಪ್ರೀತಿಯ ಮಗ! ಅವರ ಹೃದಯದಲ್ಲಿ ಕೋಲಾಹಲವೆದ್ದಂತಾಯಿತು. ರಾಜಕುಮಾರನಂತೆ ಸುಖದಲ್ಲಿ ಬೆಳೆದ ತನ್ನ ಪ್ರಿಯಪುತ್ರ ಇಂಥ ರಾತ್ರಿಯಲ್ಲಿ, ಚಳಿಗಾಳಿಗಳಲ್ಲಿ ಏಕಾಕಿಯಾಗಿ ಗುಡ್ಡ ಬೆಟ್ಟ ಅಲೆಯುವುದನ್ನು ಯೋಚಿಸುತ್ತಲೂ ಅವರಿಗೆ ಅತೀವ ವ್ಯಥೆಯಾಯಿತು. ಎಲ್ಲಿಗೆ ಹೋಗುವನೊ, ಏನು ಮಾಡುವನೊ! ಪತ್ರಿಕೆಗಳಲ್ಲಿ ದಿನವೂ ಬರುವ ಹಲವಾರು ಭಯಂಕರ ವೃತ್ತಾಂತಗಳು ಅವರ ನೆನಪಿಗೆ ಬಂದುವು. ಕೈಬಾಂಬು, ಪಿಸ್ತೂಲು, ಗುಂಡು....ರೈಲ್ವೆ ಸ್ಟೇಶನ್ನುಗಳ ಮೇಲೆ ದಾಳಿ....ಅಲ್ಲಿ ಪೋಲೀಸರ ಗೋಳೀ ಬಾರು....ಛೆ! ಛೆ! ಎಂಥ ಪ್ರಮಾದವಾಗುವುದೊ! ತಮ್ಮ ಮಗ....ತಮ್ಮ ಒಬ್ಬನೇ ಒಬ್ಬ ಮಗ....!

" ಯಾವ ಕಡೆಗೆ ಹೋಗಿರಬಹುದೋ ಸಂಗಣ್ಣಾ ?"

" ಹ್ಯಾಂಗ ಹೇಳಾಕ ಬರತೈತ್ರಿ ಧಣೇರs. ಬಹಾಳ ಮಾಡಿ ಬೆಳಗಾವಿಗೆ ತಿರುಗಿ ಹೋಗಿದ್ದಾರು. ಇಲ್ಲಾ–ಇಲ್ಲಿ ಬಹಳ ಹೊತ್ತು ಹಾದೀ ನೋಡಿ ನೀವು ಬರಲಿಲ್ಲ ಅಂತ ತಾವೇ ಏನಾದರೂ ಮನೆಗೆ ಹೋದರೋ ಏನೊ...."

" ಹಾದಿಯೊಳಗಂತೂ ಕಾಣಿಸಲಿಲ್ಲ ?"

" ಆ ಕಡೆಯಿಂದ ಹೋಗಿದ್ದಾರು...."

ಇದ್ದರೂ ಇರಬಹುದು, ಧೈರ್ಯ ತಂದುಕೊಂಡು ಆತ ಮನೆಗೆ ಬಂದಿದ್ದರೂ ಬಂದಿರಬಹುದು ಎಂದುಕೊಂಡು ದೇಸಾಯರು ಮನೆಗೆ ಹೊರಳಿ, " ನೀ ಸ್ವಲ್ಪ ಬೆಳಗಾವಿ ರಸ್ತೆ ಕಡೆ ಓಡಿ ಅಲ್ಲಿ ಎಲ್ಲಾದರೂ ಇದ್ದಾನೇನು ನೋಡಪಾ. ಅಷ್ಟರಾಗ ನಾ ಮನೆಗೆ ಹೋಗಿ ಅವ ಬಂದಾನೇನು ಅಂತ ನೋಡಿ, ಬಂದಿರದಿದ್ದರ ಕುದುರೀ ತಗೊಂಡು ಹುಡಕಲಿಕ್ಕೆ ಬರ್ತೀನಿ" ಎಂದು ಹೇಳಿ ರಭಸದಿಂದ ಅಡಿಯಿಡುತ್ತ ಹೊರಟುಬಿಟ್ಟರು. ಸಂಗಣ್ಣ ಮನಸ್ಸಿನಲ್ಲಿಯೇ ನಗುತ್ತಾ ಕತ್ತಲೆಯಲ್ಲಿ ಮಾಯವಾದ.

ದೇಸಾಯರು ಮನೆಗೆ ಬಂದು ಆಳುಮನುಷ್ಯನನ್ನು ಕೂಗಿದರು. ಆತ ಉತ್ತರವೀಯಲಿಲ್ಲ. ಹೊರಬಾಗಿಲು ಹಾಗೇ ತೆರೆದಿತ್ತು. ಆತುರದಿಂದ ಒಳಸೇರಿ ಮೆಟ್ಟಲು ಏರಿ ಮೇಲೆ ಬಂದರು. ಕೊಟಡಿಯಲ್ಲಿ ದೀಪ ಹಾಗೇ ಉರಿಯುತ್ತಿತ್ತು ; ಒಳಗಡೆ ಯಾರ ಸುಳಿವೂ ಇರಲಿಲ್ಲ.

ಅಂತೂ ಇಲ್ಲಿಗೂ ಬಂದಿಲ್ಲ ವಿಶ್ವನಾಥ! ಮುಖವನ್ನು ತೋರಿಸದೆ ಹಾಗೇ ಹೊರಟುಹೋದನಲ್ಲವೆ-ಎಂದು ಕಳವಳದಿಂದ ಕುದಿಯುತ್ತ ಅವರು ಹೊರಕ್ಕೆ ಹೊರಡಲು ಅಣಿಯಾದರು. ರಾತ್ರಿ ಕಾಲದಲ್ಲಿ ಎಲ್ಲಿಗಾದರೂ ಹೊರಡಬೇಕಾದರೆ ಕೈಯಲ್ಲಿ ಬಂದೂಕು ಹಿಡಿದುಕೊಂಡು ಹೋಗುವುದು ಅವರ ಪದ್ಧತಿ. ಎಂದಿನಂತೆಯೇ ಆಗಲೂ ಬಂದೂಕಿಗಾಗಿ ಕೈ ಎತ್ತಿದರು. ಆದರೆ-ಗೋಡೆಯ ಮೇಲೆ ನೇತಾಡುತ್ತಿದ್ದ ಮೂರು ಬಂದೂಕುಗಳೂ ಮಾಯವಾಗಿದ್ದುವು.

ಗಾಬರಿಗೊಂಡು ದೇಸಾಯರು ಅತ್ತ ಇತ್ತ ದೃಷ್ಟಿ ಹೊರಳಿಸಿದಾಗ ಮೇಜಿನ ಮೇಲೆ ಪುಟ್ಟದೊಂದು ಕಾಗದವಿದ್ದುದು ಕಾಣಿಸಿತು. ಆತುರತೆಯಿಂದ ಅದನ್ನೆತ್ತಿಕೊಂಡು ಅದರ ಮೇಲೆ ಸರಸರನೆ ದೃಷ್ಟಿಯನ್ನೋಡಿಸಿದರು.

" ತಂದೆಯವರ ಚರಣಗಳಲ್ಲಿ—

ವಿಶ್ವನಾಥನ ನಮಸ್ಕಾರಗಳು.

ತಮ್ಮನ್ನು ಭೆಟ್ಟಿಯಾಗಲೆಂದೇ ಬಂದಿದ್ದೆ. ದೂರದಿಂದ ತಮ್ಮ ದರ್ಶನವನ್ನು ಪಡೆದು ಸಮಾಧಾನಗೊಂಡೆ. ತಮ್ಮ ಅಪೇಕ್ಷೆಗೆ ವಿರುದ್ಧವಾಗಿ ನಾನು ಚಳವಳಿಗೆ ಸೇರಿರುವುದಕ್ಕಾಗಿ ದಯವಿಟ್ಟು ಮನ್ನಿಸಬೇಕು. ಆದರೆ ನನ್ನ

ಇಚ್ಛೆಯ ವಿರುದ್ಧವಾಗಿ ನಾನು ವರ್ತಿಸುವಂತಿಲ್ಲ. ಅಂತೆಯೆ, ಕಾಳಗದ ಕಣಕ್ಕೆ ಧುಮುಕಿದ್ದೇನೆ.

ಈ ಚಳವಳಿಯಲ್ಲಿ ನಮಗೆ ಉಪಯೋಗವಾಗಬಹುದೆಂದು ಇಲ್ಲಿದ್ದ ಮೂರು ಬಂದೂಕುಗಳನ್ನೂ ಪೆಟ್ಟಗೆಯಲ್ಲಿದ್ದ ಗುಂಡುಗಳನ್ನೂ ಒಯ್ದಿದ್ದೇನೆ. ನಿಮಗೂ ಈಗ ಅವುಗಳಿಂದ ಏನೂ ಉಪಯೋಗವಿಲ್ಲ. ಬೇಟೆಯಾಡುವುದನ್ನಂತೂ ಎಂದೋ ಬಿಟ್ಟದ್ದೀರಿ. ನಾನಾದರೂ ಅವುಗಳ ಉಪಯೋಗ ಮಾಡುತ್ತೇನೆ. ಇಲ್ಲವಾದರೆ, ಅವು ಹೀಗೇ ಜಂಗು ತಿಂದು ಹಾಳಾದಾವು.

ಈ ಕಾಳಗದಲ್ಲಿ ಬದುಕಿ ಉಳಿದರೆ ಮತ್ತೆ ತಮ್ಮ ದರ್ಶನವಾದೀತು. ತಾವೇನೂ ಚಿಂತೆ ಮಾಡಬಾರದು. ತಮ್ಮ ಆಶೀರ್ವಾದ ನನ್ನ ತಲೆಯ ಮೇಲಿದ್ದರೆ ಎಲ್ಲಿದ್ದರೂ ನಾನು ಸುರಕ್ಷಿತವಾಗಿದ್ದೇನು!

ಇಂತು ನಮಸ್ಕಾರಗಳು.

ತಮ್ಮ ಬಂಡುಗಾರ ಮಗ,
ವಿಶ್ವನಾಥ."

## ೧೨

ಮಾರನೆಯ ದಿನ ಬೆಳಗ್ಗೆ ಶೇಖರನ ಮನೆಯಲ್ಲಿ ಗುಂಪಿನವರೆಲ್ಲ ಒಟ್ಟು ಗೂಡಿದ್ದರು. ರಾತ್ರಿ ಕೈಗೊಂಡ ಕಾರ್ಯಕ್ರಮಗಳಲ್ಲೆಲ್ಲ ಯಶಸ್ಸು ದೊರೆತಿದ್ದುದ ರಿಂದ ಎಲ್ಲರೂ ಹರ್ಷಚಿತ್ತರಾಗಿ ಉತ್ಸಾಹದಿಂದ ಮಾತನಾಡುತ್ತಿದ್ದರು.

"ಅಂತೂ ಮೊದಲನೇ ಕೆಲಸಾನs ಗೆದ್ದು ಕೊಂಡು ಬಂದಿರಿ, ದೇಸಾಯರೆ!" ಎಂದ ಶೇಖರ.

"ಸಂಗಣ್ಣ ಇರದಿದ್ದರ ನಾನು ಏನು ಮಾಡಲಿಕ್ಕೂ ಆಗ್ತಿರಲಿಲ್ಲಪ್ಪ" ಎಂದ ವಿಶ್ವನಾಥ.

"ನನಗೂ ದೇಸಾಯರಿಗೂ ಮೊದಲಿಂದಲೂ ಗುರುತು ಅಂತ ಕೆಲಸ ಆಯ್ತು. ಇಲ್ಲದಿದ್ದರ, ಅವರಿಗೆ ನಂಬಿಕೆ ಹುಟ್ಟಸೂದಕ್ಕಾಗ್ತಿರಲಿಲ್ಲ" ಎಂದ ಸಂಗಣ್ಣ.

"ಈಗ ಎಷ್ಟು ಸಿಟ್ಟಾಗಿದ್ದಾರೋ ಏನೋ ಅವರು. ನೀವು ಹಾಂಗ ಚೀಟಿ ಬರೆದಿಟ್ಟು ಬರಬಾರದಾಗಿತ್ತು" ಎಂದರು ಮಾಸ್ತರರು.

"ಬರದಿಟ್ಟದ್ದೇ ಚಲೋ ಆತೇಳ್ರಿ. ನಾನೇ ಬಂದೂಕು ಒಯ್ದಿದ್ದೀನಿ ಅಂತ ಅವರಿಗೆ ಗೊತ್ತಾಗದ್ದೇ ನೆಟ್ಟಗಾಯ್ತು. ಇಲ್ಲದಿದ್ದರ ಯಾರೋ ಕಳವು ಮಾಡಿದ್ದಾರಂತ ಪೋಲೀಸರಿಗೆ ತಿಳಿಸುತ್ತಿದ್ದರು. ನಿಮ್ಮ ಮ್ಯಾಲೂ ಸಂಶಯ ಬರ್ತಿತ್ತು. ಈಗ ಅವರು ಪೋಲೀಸರಿಗೆ ತಿಳಿಸೂದೂ ಸಾಧ್ಯ ಇಲ್ಲ," ಎಂದ ವಿಶ್ವನಾಥ.

"ಅದ್ಯಾಕ ತಿಳಿಸಲಿಕ್ಕಿಲ್ಲ?" ಎಂದ ಬಾಳಪ್ಪ.

"ತಮ್ಮ ಮಾನ ತಾವೇ ಕಳಕೊಳ್ಳತಾರೇನು ಅಜ್ಜ? ಇಂಥಾ ರಾಜನಿಷ್ಠರ ಮಗ ಹಿಂಗಾದ ಅಂತ ಗೊತ್ತಾದರೆ ಅಧಿಕಾರಿಗಳು ಏನನ್ನಲಿಕ್ಕಿಲ್ಲ? ನಮ್ಮ ತಂದೆ ಯಾರಿಗೂ ಏನೂ ತಿಳಿಸುವದಿಲ್ಲ. ನೋಡ್ರಿ ಬೇಕಾದರೆ...." ಎಂದು ಆತ ಹೇಳುತ್ತಿರುವಾಗಲೆ ನೀರಿಗೆ ಹೋಗಿ ಬಂದ ಪಾರ್ವತಮ್ಮ ಕೊಡವನ್ನು ಕೆಳಕ್ಕಿರಿಸುತ್ತ ಗಾಬರಿಗೊಂಡ ಸ್ವರದಲ್ಲಿ—"ಕುಲಕರ್ಣಿ ಏನೋ ಘಾತ ಮಾಡೂಹಾಂಗ ಕಾಣಿಸತೈತಿ ಶೇಕ್ರಣ್ಣ. ನೀವೆಲ್ಲಾ ಹೀಂಗ ಇಲ್ಲಿ ಕೂತರ ಹ್ಯಾಂಗಾದೀತು?" ಎಂದಳು.

"ಅವ ಏನೂ ಘಾತ ಮಾಡದಾಂಗ ವ್ಯವಸ್ಥಾ ಮಾಡಿ ಬಂದೀವಿ. ಇನ್ನೇನ ಮಾಡ್ತಾನ ಅವ?" ಎಂದ ಸಂಗಣ್ಣ.

"ಹಾಂಗ ನಂಬಿ ಮೋಸ ಹೋಗಬ್ಯಾಡೋ, ಮಳ್ಳಾ! ಆ ರಂಗಣ್ಣ ಪಾತಾಳಯಂತ್ರಿ ಇದಾನ ಅನ್ನೂದು ನಿಮಗೇನು ಗೊತ್ತಾಗುತೈತಿ, ನುಚ್ಚು ಉಣ್ಣೂ ಹುಂಬರಿಗೆ! ಇದೇ ಈಗ ಗೋದವ್ವ ಭೆಟ್ಟಿಯಾಗಿದ್ದಳು ಬಾವೀಮ್ಯಾಲ. ಕಣ್ಣಾಗ ನೀರು ಹಾಕಿಕೊಂಡು ಹೇಳಿದಳು. ಮತ್ತೇನೋ ಬರದು ಕಳಿಸ್ಯಾನಂತ ರಂಗಣ್ಣ—ನಿನ್ನೆ ರಾತ್ರೀನಾ. ತಳವಾರ ಲಕ್ಕ್ಯ ಹೋಗಿದಾನಂತ ಹೊಂಗಲಕ್ಕ. 'ಮೊದಲಾ ತಿಳಿಸಿದ್ದೇನವ್ವಾ, ನಮ್ಮವರಿಂದ ನಿಮ್ಮ ಹುಡುಗರಿಗೆ ಘಾತ ಆಗ ಬಾರದೂ ಅಂತ. ನಮ್ಮವರಿಗೆ ಮಾತ್ರ ಏನೂ ಮಾಡಬ್ಯಾಡ್ರಿ ಅಂತ ಹೇಳು, ನನ್ನ ಗುಳದಾಳೀ ಉಳಿಸು ನಮ್ಮವ್ವಾ' ಅಂತ ಗೋದವ್ವ ಗೋಗರೆದಳು, ಪಾಪ. ಆಕೆ ಚಲೋ ಹೆಣ್ಮಗಳು. ಅವಳ ಮಾತು ಎಲ್ಲಿ ಕೇಳತಾನವ ಕುಲಕರ್ಣಿ? ಹೂಂ. ನೀವು ಏಳ್ರಿ ಊಟಕ್ಕ. ಉಂಡು ಇಲ್ಲಿಂದ ಹೊರಟುಬಿಡ್ರಿ. ಯಾವಾಗ ಏನಾದೀತು ಅನ್ನುವ ಭರವಸೆ ಇಲ್ಲ," ಎಂದು ನುಡಿದು ಪಾರ್ವತಮ್ಮ ಅಡಿಗೆ ಮನೆಗೆ ತೆರಳಿದಳು.

" ರಂಗಣ್ಣ ಇಂಥಾ ಕೆಲಸ ಮಾಡಬಹುದಂತ ನನಗನಿಸಿರಲಿಲ್ಲ " ಎಂದ ಶೇಖರ.

ಮುದುಕ ಬಾಳಪ್ಪ ತಂಬಾಕು ಸೇದುತ್ತಿದ್ದವನು ಚಿಲುಮೆಯನ್ನು ಕೆಳಗಿಟ್ಟು ಹೇಳಿದ: " ಮಾಡುವವನs ಅವ. ಅವನ ಒಳಗಿಂದು ಹೊರಗಿಂದು ಎಲ್ಲಾ ನನಗೊತ್ತು ಶೇಕ್ರಣ್ಣ. ಮನಿಸ್ಯಾ ಬಹಳ ಆಶೆಬುರುಕ. ಸರಕಾರದಿಂದ ಇನಾಮು ಸಿಕ್ಕತೈತಿ ಅನ್ನಿಸಿದರ ಏನು ಬೇಕಾದ್ರೂ ಮಾಡಿಯಾನು. ಇನ್ನು ಪೋಲೀಸರಿಗೆ ಸುದ್ದೀ ತಿಳಿಸೂದೇನು ದೊಡ್ಡ ಮಾತು !"

" ಇದೊಂದು ನಾಗರಹಾವೇ ಉಳಿದ ಹಾಂಗಾತಲ್ಲ ನಮ್ಮ ಊರಾಗ? ನಿನ್ನೆ ಮಾಡಿದ ಕೆಲಸದಿಂದ ಅದರ ಹಲ್ಲು ಮುರಿದುಹೋತು ಅಂತ ತಿಳಿದಿದ್ದೆವು ನಾವು....ಇವನೊಬ್ಬನ್ನ ಬಿಟ್ಟರ ನಮ್ಮ ವಿರುದ್ಧ ಹೋಗುವವರ್‍ಯಾರೂ ಇಲ್ಲ ಇಲ್ಲಿ. ಗೌಡರನ್ನ ಹ್ಯಾಂಗೂ ಒಪ್ಪಿಸಬುಹದು. ಆದರs ಇವನ್ನ......ಇನ್ನೇನಾದ್ರೂ ಉಪಾಯ ಹೂಡಬೇಕು, ಅಜ್ಜಾ. ಹಾಂಗs ಬಿಡಬಾರದು " ಎಂದ ಸಂಗಣ್ಣ.

ಅಡಿಗೆ ಮನೆಯಲ್ಲಿದ್ದ ಪಾರ್ವತಮ್ಮನಿಗೆ ಈ ಮಾತು ಕೇಳಿಸಿತೇನೊ. ಆಕೆ ಅಲ್ಲಿಂದಲೇ ಕೂಗಿ ಹೇಳಿದಳು: " ಅವ ಏನಾರ ಮಾಡಿಕೊಳ್ಳಲಿ. ಅವನ ಮ್ಯೆಗೆ ಕೈಹಚ್ಚುವ ವಿಚಾರ ಮಾತ್ರ ಮಾಡಬ್ಯಾಡಿರಪ್ಪ. ಪಾಪ, ಆ ಗೋದವ್ವ ಗೋಗರೆಯೂದನ್ನ ನೋಡಿ ನನಗ ತಳಮಳ ಆಯ್ತು. ಮಕ್ಕಳು ಮರಿ ಇದಾವೆ. ಏನೂ ಮಾಡಬ್ಯಾಡ್ರಿ ಅವಗ !"

" ಇಲ್ಲವ್ವಾ. ಅವನ್ಯಾಕ ಮುಟ್ಟಾಕ ಹೋದೇವು ನಾವು. ನೀ ಏನೂ ಚಿಂತೀ ಮಾಡಬ್ಯಾಡ ಅದರ ಸಲುವಾಗಿ. ಏನು ಮಾಡಿದರೂ ನಾವು ಹಿಂಸಾ ಮಾತ್ರ ಮಾಡುವದಿಲ್ಲ. ಗಾಂಧೀಜಿಯವರ ತತ್ವಕ್ಕ ಪೂರಾ ವಿರುದ್ಧ ಅದು " ಎಂದ ಶೇಖರ.

" ಅವಗಂತೂ ಏನೂ ಮಾಡೂಹಾಂಗಿಲ್ಲ. ಇನ್ನು ಮುಂದ ಹ್ಯಾಂಗ ಮಾಡೂದು ಹಾಗಾದರ? ಅವನ ದಸಿಂದ ಈ ಊರs ಬಿಡಬೇಕಾದೀತಲ್ಲ ನಾವು?" ಎಂದು ಕೇಳಿದ ಹಸನ್‌ಸಾಬಿ.

" ಬಿಡೂ ಪ್ರಸಂಗ ಬಂದರ ಬಿಟ್ಟರಾಯ್ತೇಳು. ಈಗ ನಾವಂತೂ— ಗುಂಪಿನ ಮಂದಿ ಇಲ್ಲಿದ್ದು ಕೆಲಸಾ ಮಾಡೋದು ಚಲೋ ಅಲ್ಲ. ಮೊದಲೇ

ಎಲ್ಲಾ ವಿಚಾರ ಮಾಡಿದ್ದೆ ನಾನು. ಒಂದು ಗುಪ್ತ ಜಾಗಾ ಕೂಡ ನೋಡಿ ಇಟ್ಟಿದ್ದೀನಿ" ಎಂದ ಶೇಖರ.

"ಎಲ್ಲಿಯಪ್ಪಾ?" ಎಂದ ಬಾಳಪ್ಪ.

"ಇಲ್ಲಿಂದ ಎರಡು ಮೈಲು ದೂರದಾಗ ಕಿರುಬನ ಕೊಳ್ಳದಾಗ ಒಂದು ಹಳೇಕಾಲದ ಗುಡಿ ಇರೂದು ನಿಮಗೆ ಗೊತ್ತೈತಲ್ಲ. ಸುತ್ತುಮುತ್ತು ನಾಲ್ಕು ಕಡೆಗೂ ದೊಡ್ಡ ಗುಡ್ಡ ಇರೂದರಿಂದ ಪೋಲೀಸರು ಅಲ್ಲಿ ಹಾಯೂಹಾಂಗಿಲ್ಲ. ಜನರೂ ಆ ಕಡೆ ಹೋಗೂದು ಕಡಿಮೆ. ಆ ಗುಡಿಯೊಳಗ ನಲವತ್ತು ಐವತ್ತು ಮಂದಿ ಸಹಜವಾಗಿ ಇರಬಹುದು. ಹತ್ತಿರ ಝುರಿಗಳೂ ಇದಾವೆ. ಕುಡಿಯುವ ನೀರಿಗೂ ತ್ರಾಸ ಇಲ್ಲ. ಅಲ್ಲಿ ನಮ್ಮ ಕೇಂದ್ರ ಕಚೇರಿ ಹೂಡಬೇಕು ಅಂತ ನಿರ್ಧಾರ ಮಾಡಿದ್ದೀನಿ."

"ಬಹಳ ಚಲೋ ಜಾಗ ಆರಿಸಿದ್ದೀಯಪ್ಪ ಶೇಕ್ರಣ್ಣ. ಅಲ್ಲಿ ಹೋಗಿ ಕೂತರ ಎಂಥ ಪೋಲೀಸನಿಗೂ ಪತ್ತೆ ಆಗಲಿಕ್ಕಿಲ್ಲ. ಕೊಳ್ಳದ ವ್ಯಾಲ ಗವಿಗಳಿದಾವೆ, ಒಬ್ಬಿಬ್ಬರು ಬೈರಾಗಿಗಳೂ ಇದಾರೆ ಅಂತ ಹೇಳತಾರ. ಹೌದೇನು?" ಎಂದು ಕೇಳಿದ ವಿಶ್ವನಾಥ.

"ಹೌದು. ಇಬ್ಬರು ಸಾಧುಗಳಿದ್ದಾರೆ. ಹಳೇಕಾಲದ ಗವಿಗಳೂ ಇದಾವೆ. ಆ ಗವಿಗಳೂ ನಮಗೆ ಉಪಯೋಗ ಬೀಳಬಹುದು. ಅಂತೂ ನಾವು ಅಲ್ಲಿಗೆ ಹೋಗುವ ಸುದ್ದಿ ಬಹಳ ಗುಟ್ಟಾಗಿರಬೇಕು. ಯಾರಿಗೂ ಹೇಳಬಾರದು" ಎಂದು ಎಚ್ಚರಿಸಿದ ಶೇಖರ.

"ಊಟಾಗೀಟಾ ಹ್ಯಾಂಗ?" ಎಂದ ಸಂಗಣ್ಣ.

"ಅದೇನು ದೊಡ್ಡದು ಬಿಡೋ. ಈ ಪೈಲ್ವಾನ ಮಂದೀಗೆ ಹೊಟ್ಟೇದೇ ಮೊದಲು ಚಿಂತಿ? ಯಾರಾದ್ರೂ ತಂದುಕೊಡತ್ತಾರ–ನಂಬಿಕೆಯವರು. ಇಲ್ಲದಿದ್ದರ ನೀನು ದಿನಾಲು ಬಂದು ಉಂಡು ಹೋಗಬಹುದು" ಎಂದ ಬಾಳಪ್ಪ.

"ನಿನ್ನ ಹೆಂಡ್ತಿ ತಂದುಕೊಡ್ತಾಳೇಳೋ, ದಿನಾಲೂ ದನಾ ಕಾಯೋಕ ಬಂದಾಗ. ಅವಳ ಮಾರೀ ನೋಡದಿದ್ರ ನಿನಗ ಊಟ ಆದರೂ ಹೋದೀತೇನು!" ಎಂದು ಪಾರ್ವತಮ್ಮ ನಗೆಯಾಡಿದಳು. ಅದರೊಂದಿಗೆ ಗುಂಪಿನಲ್ಲೆಲ್ಲ ನವಿರಾದ ಹಾಸ್ಯ ಉಕ್ಕಿ ಹರಿದಂತಾಯಿತು.

ಊಟ ಮುಗಿಸಿಕೊಂಡು ಅವರೆಲ್ಲರೂ ಕಿರುಬನ ಕೊಳ್ಳಕ್ಕೆ ಹೊರಟರು. ಅರ್ಧ ಗಂಟೆಯೊಳಗಾಗಿ ಗುಡಿಗೆ ತಲುಪಿದ್ದೂ ಆಯಿತು. ಸುತ್ತುಮುತ್ತಲಿನ ವನಶ್ರೀಯನ್ನೂ ಶಾಂತತೆಯನ್ನೂ ಕಂಡು ದೇಸಾಯಿಗೆ ಹಿಡಿಯಲಾರದಷ್ಟು ಹರ್ಷವಾಯಿತು.

ಗುಡಿ ವಿಶಾಲವಾದುದಾಗಿತ್ತು. ಅನೇಕ ವರ್ಷಗಳಿಂದ ಜನವಸತಿ ಇಲ್ಲದೆ ಎಲ್ಲೆಡೆಯಲ್ಲೂ ಧೂಳು ತುಂಬಿಕೊಂಡಿದ್ದಿತು. ಸಾಯಂಕಾಲದವರೆಗೆ ಆ ಸ್ಥಳ ವನ್ನೆಲ್ಲ ಗುಡಿಸಿ ಶುಚಿಗೊಳಿಸಿದ್ದೇ ಆಯಿತು. ರಾತ್ರಿಯಾಗುವುದರೊಳಗಾಗಿ ಗುಡಿ ಮಲಗುವುದಕ್ಕೆ ಯೋಗ್ಯವಾದ ಸ್ಥಳವಾಗಿ ಪರಿವರ್ತಿತವಾಯಿತು. ಕತ್ತ ಲಾಗುವುದಕ್ಕೆ ಮುನ್ನ ಸಂಗಣ್ಣ ಹಳ್ಳಿಗೆ ಹೋಗಿ ರೊಟ್ಟಿಗಳನ್ನೂ ಹಾಸಲು ಹೊದೆಯಲು ಬಟ್ಟೆಗಳನ್ನೂ ತೆಗೆದುಕೊಂಡು ಬಂದ.

ಝರಿಯ ಬಳಿ ಹುಲ್ಲಿನ ಮೇಲೆ ಕುಳಿತುಕೊಂಡು ಅವರೆಲ್ಲರೂ ಊಟ ಮಾಡಿದರು. ಅದರೊಂದಿಗೆ ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸುವ ಬಗ್ಗೆ ಚರ್ಚೆಯೂ ನಡೆಯುತ್ತಿದ್ದಿತು.

೧೩

ಮರುದಿನ ಇನ್ನೂ ಬೆಳಕು ಬಿದ್ದಿರಲಿಲ್ಲ. ಬೆಳಗಿನ ಜಾವದಲ್ಲಿ ಕೂಗುವ ಕೋಳಿ ಇನ್ನೂ ಎಚ್ಚತ್ತುಕೊಂಡಿರಲಿಲ್ಲ. ಪಾರ್ವತಮ್ಮನಿಗೆ ಮಾತ್ರ ಹಠಾತ್ತಾಗಿ ಎಚ್ಚರವಾಯಿತು. ಹೊದೆದುಕೊಂಡಿದ್ದ ಕೌದಿಯನ್ನು ಬದಿಗೆ ಸರಿಸಿ ಎದ್ದು ಕುಳಿತಳು. ತಲೆದಿಂಬಿನ ಕೆಳಗಿದ್ದ ಕಡ್ಡಿಯ ಪೆಟ್ಟಿಗೆಯನ್ನು ಎತ್ತಿಕೊಂಡು, ಕಡ್ಡಿ ಕೊರೆದು ಚಿಮಣಿಯನ್ನು ಹೊತ್ತಿಸಿದಳು.

ಹೊರಗಡೆ ನಾಯಿಗಳು ಭೀಕರವಾಗಿ ಬಗುಳುವುದು ಕೇಳಿಬರುತ್ತಿತ್ತು.

ಸಾಮಾನ್ಯವಾಗಿ ಬೆಳಗಿನ ಜಾವದಲ್ಲಿ ಹಳ್ಳಿಯ ವಾತಾವರಣ ಅತ್ಯಂತ ಶಾಂತವಾದುದಾಗಿರುತ್ತದೆ. ಮನೆಮನೆಗಳಲ್ಲಿ ತಿರುಗುವ ಬೀಸುವ ಕಲ್ಲುಗಳ ಸದ್ದು, ಹೆಣ್ಣುಮಕ್ಕಳು ಮೆಲ್ಲಗೆ ಹೇಳಿಕೊಳ್ಳುವ ಬೀಸುವ ಕಲ್ಲಿನ ಪದಗಳ ರಾಗ ಇವನ್ನುಳಿದರೆ ಬೇರಾವ ಗಲಭೆಯೂ ಇರುವುದಿಲ್ಲ. ಹೆಣ್ಣುಮಕ್ಕಳ ಉದಯ ರಾಗದಿಂದಾಗಿ ಉಷಃಕಾಲದ ಆ ಸುಂದರ ಶಾಂತಿಗೆ ಭಂಗವುಂಟಾದ ಹಾಗೆ ಭಾಸ

ವಾಗುವುದೂ ಇಲ್ಲ. ನಾಯಿ ಬಗುಳಿದರೆ, ಜನ ಬೊಬ್ಬೆಯಿಟ್ಟರೆ ಕದಡಿ ಹೋದೀತು ಶಾಂತತೆ. ಹಳ್ಳಿಯಲ್ಲಿ ಬೆಳಗಿನ ಜಾವ ಸಾಮಾನ್ಯವಾಗಿ ಅಂಥ ಪ್ರಸಂಗಗಳೂ ಉದ್ಭವಿಸುವುದಿಲ್ಲ.

ನಾಯಿ ಬಗುಳುವುದನ್ನು ಕೇಳಿ ಪಾರ್ವತಮ್ಮನಿಗೆ ಏನೋ ಸಂದೇಹ ಬಂದಂತಾಯಿತು. ಲಗುಬಗೆಯಿಂದ ಎದ್ದು, ದೊಡ್ಡ ಮಗ ನಿದ್ರಿಸುವ ಕೊಟಡಿಗೆ ಹೋಗಿ ಮೆಲ್ಲಗಿನ ಧ್ವನಿಯಲ್ಲಿ ಅವನನ್ನು ಕೂಗಿ ಎಬ್ಬಿಸಿದಳು. ಲಿಂಗಣ್ಣ ಕಣ್ಣುಜ್ಜಿ ಕೊಳ್ಳುತ್ತಲೇ ಹೊರಕ್ಕೆ ಬಂದ. ಅವನ ಪತ್ನಿ ಗೌರವ್ವನೂ ಎದ್ದು ಅಡಿಗೆಮನೆ ಯನ್ನು ಸೇರಿದಳು.

"ಪೋಲೀಸರು ಬಂದಹಾಂಗ ಕಾಣುತ್ತೈತಿ. ನಿನ್ನೇನಽ ನನಗ ಅನಿಸುತಿತ್ತು —ಬರಬಹುದು ಅಂತ. ಆ ಕುಲಕರ್ಣಿ ಹೇಳಿಕಳಿಸ್ಯಾನ, ಬೇಕಂತಽ. ಬರದಽ ಬಿಟ್ಟಾರೇನು? ಈಗ ಏನಾಗತೈತ್ಯೋ ನೋಡಬೇಕು. ನೀ ತಯಾರೀಮಾಡು ಹೊಲಕ್ಕ ಹೋಗೂದಕ್ಕ," ಎಂದಳು ಪಾರ್ವತಮ್ಮ.

ಲಿಂಗಣ್ಣ ಮುಖ ತೊಳೆದುಕೊಂಡು ಎತ್ತುಗಳನ್ನು ಬಿಚ್ಚಲು ಹೋಗು ತ್ತಿದ್ದ ಹಾಗೆ ಬಾಗಿಲಿನ ಮೇಲೆ ಸದ್ದು ಕೇಳಬಂದಿತು. ಅದರೊಂದಿಗೆ— "ಯಾರಿದೀರಿ ಒಳಗ? ಬಾಗಿಲಾ ತಗೀರಿ" ಎಂಬ ಕರ್ಕಶ ಸ್ವರವೂ ಕೇಳಿಸಿತು.

ಅಡಿಗೆಯ ಮನೆಯಲ್ಲಿ ಒಲೆ ಹೊತ್ತಿಸುತ್ತಿದ್ದ ಗೌರವ್ವ ಕೊಂಚ ಹೆದರಿಕೆ ಯಿಂದಲೆ—"ಇನ್ನ್ಯಾಂಗ ಮಾಡೂದು ಅತ್ತೀ? ಬಂದಽ ಬಿಟ್ಟಂಗ ಕಾಣತೈತಿ" ಎಂದಳು.

"ಬರಲೇಳು. ನಮ್ಮನ್ನೇನ ಮಾಡತಾರ? ನೀ ಹೆದರಬ್ಯಾಡ. ಸುಮ್ಮ ಗಿರು" ಎಂದು ಆಕೆಯನ್ನು ಸಮಾಧಾನಗೊಳಿಸಿ ಪಾರ್ವತಮ್ಮ ಅಂಬಲಿಯ ಗಡಿಗೆಯನ್ನು ಒಲೆಯ ಮೇಲಿಟ್ಟಳು.

ಮತ್ತೆ ಬಾಗಿಲಿನ ಮೇಲೆ ಧಡಧಡನೆ ಸದ್ದಾಯಿತು. "ತಗೀರಿ, ಬಾಗಲಾ ತಗೀರಿ" ಎಂಬ ಕೂಗೂ ಕೇಳಬಂದಿತು. ಎತ್ತುಗಳನ್ನು ಬಿಚ್ಚುವ ಕಾಯಕ ನಿಲ್ಲಿಸಿ ಲಿಂಗಣ್ಣ ಹೋಗಿ ಬಾಗಿಲಿನ ಅಗಳಿಯನ್ನು ತೆಗೆದ. ಒಡನೆಯೆ ಮೂರು ನಾಲ್ಕು ಜನ ಪೋಲೀಸರೂ ಒಬ್ಬ ಫೌಜದಾರರೂ ಪ್ರವೇಶಿಸಿದರು.

"ಯಾರೋ ನೀನು? ಶೇಖರಪ್ಪ ಎಲ್ಲಿದಾನ?" ಎಂದು ಗದರಿಸಿದರು ಫೌಜದಾರರು.

“ನನಗ್ಗೊತ್ತಿಲ್ಲರಿ. ಮೊನ್ನೆಯಿಂದ ಅವ ಮನಿಗೇ ಬಂದಿಲ್ಲ” ಎಂದ ಲಿಂಗಣ್ಣ.

“ನಿನ್ನ ಹೆಸರೇನು ?”

“ಲಿಂಗಣ್ಣ.”

“ಶೇಖರನಿಗೇನಾಗಬೇಕು ?”

“ದೊಡ್ಡಣ್ಣ.”

“ಹಾಂಗಾದ್ರ ಅವ ಎಲ್ಲಿದಾನ ಅನ್ನೂದು ನಿನಗ ಗೊತ್ತಿರಾಕs ಬೇಕು. ಒಳ್ಳೇ ಮಾತಿನಿಂದ ಹೇಳತೀಯೋ, ಇಲ್ಲಾ ಹಿಡಿದುಕೊಂಡು ಹೋಗೋಣವೊ ?”

ಫೌಜದಾರನ ಒರಟು ಮಾತಿನಿಂದ ಲಿಂಗಣ್ಣನಿಗೆ ಕೋಪ ಬಂದಿತ್ತು. ಆದರೂ ಅದನ್ನು ತಡೆಹಿಡಿದು ಆತ ಶಾಂತಸ್ವರದಲ್ಲಿಯೆ ನುಡಿದ: “ಶೇಕ್ರಪ್ಪ ನಮ್ಮ ತಮ್ಮ ಆದ್ರೂ ಅವ ಊರೊಳಗs ಇರೂದಿಲ್ಲ ಸಾಹೇಬರೇ. ನಾನಂತೂ ಬೆಳಗಿನಾಗ ಹೊಲಕ್ಕ ಹೋದಾವ ರಾತ್ರಿ ಬರ್ತೀನಿ. ಅವ ಎಲ್ಲಿರತಾನ, ಏನ ಮಾಡುತಾನ ಯಾವದೂ ಗೊತ್ತಿಲ್ಲ ನನಗ.”

ಬೆದರಿಕೆಯಿಂದ ಆ ರೈತನ ಮೇಲೆ ಯಾವ ಪರಿಣಾಮವೂ ಆಗಲಾರ ದೆಂಬುದು ಮನವರಿಕೆಯಾಗುತ್ತಲೂ ಫೌಜದಾರರು ಮನೆಯನ್ನೆಲ್ಲ ಶೋಧಿಸಿ ನೋಡಲು ಪೋಲೀಸರಿಗೆ ಅಪ್ಪಣೆಮಾಡಿದರು. ಎಲ್ಲ ಕೊಟಡಿಗಳನ್ನೂ ಹಿತ್ತಿಲ ವನ್ನೂ ಶೋಧಿಸಿ ನೋಡಿದ್ದಾಯಿತು. ತಮ್ಮ ಪ್ರಯತ್ನಕ್ಕೆ ಯಶ ದೊರೆಯಲಿಲ್ಲ ವಾದುದರಿಂದ ಫೌಜದಾರರಿಗೆ ಕೋಪ ಬರದಿರಲಿಲ್ಲ. ಈ ಊರಿನ ಚಳವಳಿ ಗಾರರಿಗೆಲ್ಲ ಮುಖಂಡನಾದವನೇ ಸಿಕ್ಕದೆ ಹೋದರೆ ಇಷ್ಟು ದೂರ ತಾವೆಲ್ಲ ಬಂದು ಊರಿಗೆ ಮುತ್ತಿಗೆ ಹಾಕಿದ್ದೆಲ್ಲ ವ್ಯರ್ಥವೇ ಸರಿ ಎಂದುಕೊಂಡು “ಏ, ತಕೊಂಡು ನಡೀರೋ ಇವನ್ನ—ಚಾವಡಿಗೆ” ಎಂದು ಪೋಲೀಸರಿಗೆ ಆಜ್ಞಾಪಿಸಿದರು.

ಪತಿಯನ್ನು ಪೋಲೀಸರು ಬಂಧಿಸಿಕೊಂಡು ಹೊರಟದ್ದನ್ನು ಕಂಡು ಸಹಜ ವಾಗಿಯೇ ಗೌರವ್ವನಿಗೆ ಅಳು ಉಕ್ಕಿ ಬಂದಿತು. “ಅವರನ್ಯಾಕ ಒಯ್ಯಾ ತೀರಪ್ಪಾ. ಅವರೇನು ಮಾಡಿದ್ದಾರ ?” ಎಂದು ಆಕೆ ಹಲುಬತೊಡಗಿದಳು. ಆ ಗೊಂದಲದಿಂದಾಗಿ ಕೊಟಡಿಯಲ್ಲಿ ಮಲಗಿದ್ದ ಆಕೆಯ ಚಿಕ್ಕಮಕ್ಕಳೂ ಎಚ್ಚತ್ತುಕೊಂಡು ಅಳತೊಡಗಿದವು.

ಲಿಂಗಣ್ಣನನ್ನು ಪೋಲೀಸರು ಕರೆದೊಯ್ಯುವುದನ್ನು ಕಂಡು ತಾಯಿಗೂ ಗಾಬರಿಯಾಗದಿರಲಿಲ್ಲ. ಅಡಿಗೆಮನೆಯಿಂದ ಹೊರಗೆ ಬಂದು ಫೌಜದಾರ ರನ್ನುದ್ದೇಶಿಸಿ ನುಡಿದಳು: "ಅವನ್ನ್ಯಾಕ ಹಿಡಕೊಂಡು ಹೋಗ್ತೀರಿ ಸಾಹೇಬರಽ? ಅವ ಏನ ಮಾಡಿದಾನ ?"

ಫೌಜದಾರರು ತಿರುಗಿ ನಿಂತು ಆ ಮುದುಕಿಯನ್ನು ನಿರ್ಲಕ್ಷ್ಯದಿಂದ ನಿಟ್ಟಿಸುತ್ತ : "ತಮ್ಮ ಮಾಡಿದ ತಪ್ಪಿಗೆ ಅಣ್ಣನಾದ್ರೂ ಅನುಭೋಗಿಸಬೇಕಲ್ಲವಾ ಮುದುಕಿ ! ಶೇಖರ ಎಲ್ಲಿದ್ದಾನೆ ಅನ್ನೂದನ್ನ ಹೇಳಿಬಿಟ್ಟರೆ ಇವನ್ನ ಬಿಟ್ಟುಬಿಡ್ತೀವಿ. ಇಲ್ಲದಿದ್ದರ ಇಲ್ಲ" ಎಂದರು.

"ಸುಳ್ಳು ಯಾಕ ಹೇಳೂನ್ರಪಾ ನಿಮ್ಮ ಕೂಡ? ನಮಗ ಗೊತ್ತಿದ್ದರ ಹೇಳಿಬಿಡತಿದ್ದೆವು. ಅವ ಮೂರು ದಿನದಿಂದಲೂ ಮನೀಗೆ ಬಂದಿಲ್ಲ. ಮುದುಕೀ ಮಾತು ನಂಬಿದರ ನಂಬಿರಿ, ಇಲ್ಲದಿದ್ದರ ಬಿಡಿರಿ."

"ಸುಳ್ಳು ಹೇಳಬ್ಯಾಡ ಮುದುಕೀ. ನಿನ್ನೆ ರಾತ್ರೀನಽ ಇಲ್ಲಿದ್ದನಂತಲ್ಲ? ಕುಲಕರ್ಣೇರ ಮನಿಗೆ ಹೋಗಿ ಪುಂಡಾಟಿಕೀ ಮಾಡಿ, ದಪ್ತರ್ ಸುಟ್ಟು ಬಿಟ್ಟಾರಲ್ಲ!" ಎಂದು ಗದರಿಸಿದ ಫೌಜದಾರ.

ಪಾರ್ವತಮ್ಮ ಮೂಗಿನ ಮೇಲೆ ಬೆರಳಿಟ್ಟುಕೊಂಡು, ದಿಗಿಲುಗೊಂಡ ದನಿಯಲ್ಲಿ—"ಅಯ್ಯಽ ನನ ಶಿವನಽ! ಎಂಥಾ ಮಾತು ಹೇಳ್ತೀರಿ ಸಾಹೇಬರಽ! ಊರಿಗೆ ಬಂದಾವ ಮನೀಗೆ ಬರದಽ ಹೋಗ್ತಾನೇನ್ರಿ? ಹೆತ್ತ ತಾಯಿ ನಾನು—ನನ್ನ ನೋಡದಽ ಹೋಗ್ತಾನೇನ್ರಿ ? ಬ್ಯಾರೆ ಯಾರಾದ್ರೂ ಬಂದು ಸುಟ್ಟಿದ್ದಾರು. ಕುಲಕರ್ಣಿಗೂ ನಮ್ಮ ಶೇಕರಣ್ಣಗೂ ನೆಟ್ಟಗಿಲ್ಲ. ಅದಕ್ಕ ಅವನ ಮ್ಯಾಲ ಸುಳ್ಳೊಂದು ಸೊಟ್ಟೊಂದು ಹೇಳಿದ್ದಾನು," ಎಂದಳು.

"ಯಾಕ ? ಯಾಕ ನೆಟ್ಟಗಿಲ್ಲ ?"

"ಹಿಂದೆ ಕಾಂಗ್ರೆಸ್ ಸರಕಾರ ಇದ್ದಾಗ ಈ ರಂಗಪ್ಪ ಒಮ್ಮೆ ನಮ್ಮೂರ ರೈತನೊಬ್ಬನಿಂದ ಲಂಚಾ ತಿಂದಿದ್ದನ್ನ ನಮ್ಮ ಹುಡುಗ ಮಾಮಲೇದಾರ್ರಿಗೆ ತಿಳಿಸಿದ್ದನಂತ. ಅದಕ್ಕ ರಂಗಪ್ಪ ಇನ್ನೂ ಕೞನಸು ಇಟ್ಟಾನ ಅವನ ಮ್ಯಾಲ...."

"ಇಲ್ಲದ ಕಥೀ ಹೇಳ್ತಾ ಕೂಡ್ರಬ್ಯಾಡ ಮುದುಕೀ. ನಿನ್ನ ಮಗನೇ ಈ ಕೆಲಸಾ ಮಾಡಿದಾನಂತ ನಮಗೆ ಖಾತ್ರಿ ಆಗ್ಯೆತಿ. ಈಗೇನು ನೀವು ಹೇಳ್ತೀರೋ ಇಲ್ಲೋ, ಅವ ಎಲ್ಲಿದಾನ ಅನ್ನೂದನ್ನ ?"

"ಗೊತ್ತಿದ್ದಿದ್ದರ ಹೇಳತಿದ್ದೆವು. ಇಲ್ಲದ ಮಾತು ಏನಂತ ಹೇಳೋಣ್ರಿ?"

"ಇವನ್ನ ಒಯ್ದು ಜೇಲಿನಾಗ ಕೂಡ್ರಿಸಿದರ ಹೊರಬೀಳುತೈತಿ ಗೊತ್ತಿರೂ ಮಾತು. ತಕೊಂಡು ನಡೀರ್ಯೋ ಅವನ್ನ" ಎಂದ ಫೌಜದಾರ.

"ಅಪಾ, ಹೊಲದಾಗ ದುಡಿಯೂ ಗಂಡಸುಮಗನ್ನ ಯಾಕಪಾ ಹಿಡಕೊಂಡು ಹೋಗತೀರಿ? ಅವ ಒಬ್ಬನs ದುಡಿಯಾಂವ ನಮ್ಮ ಮನಿಯಾಗ. ಮಕ್ಕಳು ಮರೀನ್ನ ಸಾಯಿಸಬ್ಯಾಡ್ರಿ ಅಪಾ...." ಎಂದು ಹೇಳಿದಳು ಪಾರ್ವತಮ್ಮ.

"ಚಳವಳೀ ಮಾಡಾಕ ಮಾತ್ರ ಬೇಕು. ಸಾಯಾಕ ಮಾತ್ರ ಬ್ಯಾಡಂದರ ಹ್ಯಾಂಗಾದೀತು? ಸಾಯಿರಿ, ಸಾಯಿರಿ" ಎಂದು ತಿರಸ್ಕಾರದಿಂದ ನುಡಿಯುತ್ತ ಫೌಜದಾರ ಹೊರಟುಹೋದ. ಲಿಂಗಣ್ಣನನ್ನು ಹಿಡಿದುಕೊಂಡು ಪೋಲೀಸರೂ ಹೊರಟು ನಡೆದರು.

ಅವರು ಚಾವಡಿಯ ಹತ್ತಿರ ಬರುವುದರೊಳಗಾಗಿ ಹಳ್ಳಿಯಲ್ಲಿನ ಇತರ ಮನೆಗಳನ್ನು ಶೋಧಿಸಲು ಹೋಗಿದ್ದ ಪೋಲೀಸರೂ ಮರಳಿ ಬಂದಿದ್ದರು. ಬೆಳಗಿನ ಚಳಿಯಲ್ಲಿ ನಡುಗುತ್ತ ನಿಂತಿದ್ದ ಕುಲಕರ್ಣಿಯನ್ನು ಕ್ರೋಧದಿಂದ ದೃಷ್ಟಿಸುತ್ತ ಫೌಜದಾರ ಕೇಳಿದ: "ಏನು ರಂಗಪ್ಪಾ, ಎಲ್ಲಿದಾರೆ ಗುಂಪಿನ ಮಂದಿ ಎಲ್ಲಾ? ಹೀಂಗs ಏನು ನೀವು ಊರಿನ ಕಾರಭಾರಾ ನೋಡಿಕೊಳ್ಳೂದು? ಎಲ್ಲರೂ ಫರಾರಿ ಆಗಿಬಿಟ್ಟದ್ದಾರಲ್ಲ? ನಿಮ್ಮ ಕಣ್ಣು ತಪ್ಪಿಸಿ ಹ್ಯಾಂಗ ಹೋದರು ಅವರು? ಎಲ್ಲಿಗೆ ಹೋದರು?"

ರಂಗಣ್ಣನ ನಡುಕವಿನ್ನೂ ಹೆಚ್ಚಿದಂತಾಯಿತು. ಈ ರೀತಿ ಗುಂಪಿನವರೆಲ್ಲ ತಪ್ಪಿಸಿಕೊಳ್ಳಬಹುದೆಂದು ಆತ ಕನಸುಮನಸಿನಲ್ಲೂ ಭಾವಿಸಿರಲಿಲ್ಲ. ಎಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ಮಲಗಿರುತ್ತಾರೆ, ಬೆಳಕು ಹರಿಯುವುದರೊಳಗಾಗಿ ಪೋಲೀಸರು ಊರಿನ ಸುತ್ತಲೂ ಮುತ್ತಿಗೆ ಹಾಕಿದರೆ ಎಲ್ಲರೂ ಒಂದೇ ಕಾಲಕ್ಕೆ ಸಿಕ್ಕುಬಿಡುತ್ತಾರೆ, ಅನಂತರ ಈ ಭಾಗದ ಚಳವಳಿ ತನ್ನಷ್ಟಕ್ಕೆ ತಾನೇ ನಿಂತು ಹೋಗುತ್ತದೆ, ತನಗೆ ನಾಲ್ಕು ಎಕರೆಗಳಷ್ಟಾದರೂ ಭೂಮಿ ಬಹುಮಾನವಾಗಿ ದೊರಕುತ್ತದೆ ಎಂದು ಮುಂತಾಗಿ ಯೋಚಿಸುತ್ತಿದ್ದ ರಂಗಣ್ಣನಿಗೆ ಅತೀವ ನಿರಾಶೆಯಾಗಿದ್ದಿತು. ಶೇಖನನೂ ಸಿಕ್ಕಲಿಲ್ಲ; ಅವನ ಗುಂಪಿಗೆ ಸೇರಿದ್ದವರಲ್ಲಿ ಒಬ್ಬನೂ ಸಿಕ್ಕಲಿಲ್ಲ. ತಾನು ಪೋಲೀಸರಿಗೆ ಹೇಳಿಕಳುಹಿಸಿದ ವಿಷಯವೇನಾದರೂ ಅವರಿಗೆ

ಗೊತ್ತಾಯಿತೋ ಎಂದು ಆತನಿಗೆ ಸಂದೇಹ ಬಂದಿತು. ಆ ಸುದ್ದಿ ಹೇಗೆ ಒಡೆಯಿತೆಂಬುದೇ ಅವನಿಗೆ ನಿಲುಕದ ಸಮಸ್ಯೆಯಾಯಿತು.

"ಇನ್ನುಮ್ಯಾಲೆ ಹೀಂಗ ನಿರ್ಲಕ್ಷ್ಯದಿಂದ ಇರಬ್ಯಾಡ್ರಿ. ಹಾಗಲೂ ರಾತ್ರಿ ಕಣ್ಣಾಗ ಎಣ್ಣೀ ಹಾಕ್ಕೊಂಡು ಈ ಪುಂಡರನ್ನ ಕಾಯ್ತಾ ಇರ್ರಿ. ನಿಮ್ಮ ಹಳಬರೂ ತಳವಾರರೂ ಎಲ್ಲಾ ಏನ್ಮಾಡ್ತಾರ? ಸತ್ತಾರೇನು? ಗೌಡರೆಲ್ಲಿದ್ದಾರ?"

"ಬೆಳಗಾವಿಗೆ ಹೋಗ್ಯಾರ."

"ಯಾತಕ್ಕ?"

"ಅವರ ಮಗಳ ಮೈಯಾಗ ನೆಟ್ಟಗಿಲ್ಲ. ದವಾಖಾನೆಗೆ ಹಾಕಿ ಬರಲಿಕ್ಕೆ ಹೋಗಿದಾರ."

"ಇಂಥಾ ಪ್ರಸಂಗದಾಗs ಬರೂವು ಈ ಜಡ್ಡುಗಿಡ್ಡು ಎಲ್ಲಾ..." ಎಂದು ಫೌಜದಾರ ಗೊಣಗಿಕೊಳ್ಳುತ್ತಿದ್ದ ಹಾಗೇ ಎದುರಿನಿಂದ ಪೋಲೀಸನೊಬ್ಬ ತೇಕುತ್ತ ತೇಕುತ್ತ ಓಡಿಬಂದ. ಗುಂಪಿನವರ ಸುದ್ದಿ ತಂದನೇನೊ ಎಂದು ಫೌಜದಾರ ಅವನನ್ನ ಆತುರದಿಂದ ನಿರೀಕ್ಷಿಸುತ್ತಿದ್ದ ಹಾಗೆ ಆತ ನೆಟೆದು ನಿಂತು ಸಲಾಮು ಹೊಡೆದು—"ಪಾಟೀಲ ಫೌಜದಾರರು ಕಳಿಸ್ಯಾರ ರಾವ ಸಾಹೇಬರs. ನೀವು ಪೋಲೀಸಪಾರ್ಟಿ ತಕ್ಕೊಂಡು ಈಗಿಂದೀಗ ಬೆಳಗಾವಿ ರಸ್ತೇಕ್ಕ ಹೊರಡಬೇಕಂತ ಹೇಳಿದಾರ" ಎಂದ.

"ಯಾಕೋ? ಏನು ಸುದ್ದಿ? ಪುಂಡರುಗಿಂಡರು ಅಡಗಿಕೊಂಡಾರೇನು ಅಲ್ಲಿ ಎಲ್ಲಾದರೂ?"

"ಇನ್ನದರೂ ಇದ್ದಾರು ರಾವಸಾಹೇಬರs. ಅಂತೂ ತಾರ ತಂತೀ, ಕಂಭಾ ಎಲ್ಲಾ ಕಡಿದುಬಿಟ್ಟಾರ...."

ಫೌಜದಾರ ದಿಗಿಲುಗೊಂಡು ಕೇಳಿದ "ಆಂ? ಏನಂದಿ? ತಾರ ಕಂಭಾ ಕಡಿದಾರ?"

"ಹೌದ್ರಿ ರಾವಸಾಬರs. ಬಾಗೇವಾಡಿ–ಬೆಳಗಾವಿ ರಸ್ತೇದ ಮ್ಯಾಲ ಹನ್ನೊಂದು ಮೈಲಿನ ತನಕಾ ಎಲ್ಲಾ ಕಂಭಾ ಕಡಿದು ಒಗದಾರ. ತಾರೂ ಕತ್ತರಿಸಿದಾರ."

ಫೌಜದಾರ ಕೈ ಕೈ ಹಿಸುಕಿಕೊಳ್ಳುತ್ತಾ ಚಾವಡಿಯಿಂದ ಕೆಳಕ್ಕಿಳಿದು—ಎಲ್ಲರೂ ನಡೀರಿ ಬೆಳಗಾವಿ ರಸ್ತೇಕ್ಕ. ಸೀಟಿ ಹೊಡೆಯೋ, ಮಗದುಂ!" ಎಂದು ಆಜ್ಞಾಪಿಸಿದ.

ಲಿಂಗಣ್ಣನನ್ನು ಹಿಡಿದುಕೊಂಡು ನಿಂತಿದ್ದ ಪೋಲೀಸ "ಇವನ್ನೇನು ಮಾಡೋಣ್ರೀ ರಾವಸಾಹೇಬರಃ?" ಎಂದು ಕೇಳಿದ.

"ಅವನನ್ನಿಟ್ಟುಕೊಂಡೇನ ಮಾಡ್ತೀರಿ, ತಿಂತೀರೇನು? ಹಾಳಾಗಿ ಹೋಗ್ಲಿ. ಬಿಡ್ರಿ ಅವನ್ನ. ಮುಂದೆ ಮತ್ತೆ ನೋಡಿಕೊಳ್ಳೋಣವಂತೆ! ಮೊದಲು ಆ ಪುಂಡರನ್ನ ತಪಾಸು ಮಾಡೋಣ...." ಎಂದು ನುಡಿದು ಫೌಜದಾರ ಹೊರಟುಬಿಟ್ಟ.

ಲಿಂಗಣ್ಣ ಮನಸ್ಸಿನಲ್ಲಿಯೆ ನಗುತ್ತಾ ಮನೆಯ ಕಡೆಗೆ ಹೊರಟ. ಒಂದು ರಾತ್ರಿಯಲ್ಲಿ ಹನ್ನೊಂದು ಮೈಲಿನವರೆಗೆ ಎಲ್ಲ ತಂತೀ ಕಂಭಗಳನ್ನು ಕತ್ತರಿಸಿಬಿಟ್ಟ ಆ ಸಮಾಚಾರ ಆವನಲ್ಲಿ ಆನಂದ, ಅಭಿಮಾನಗಳೆರಡನ್ನೂ ಹುಟ್ಟಿಸಿದ್ದಿತು. ಅದು ತನ್ನ ತಮ್ಮನ ಗುಂಪಿನ ಕೆಲಸವೆನ್ನುವುದರಲ್ಲಿ ಯಾವ ಅನುಮಾನವೂ ಇರಲಿಲ್ಲ.

೧೪

ಒಂದೂವರೆ ತಿಂಗಳುಗಳವರೆಗೆ ದಾರಿ ಕಾಯ್ದರೂ ಹೇಮಾವತಿಗೆ ಶೇಖರನಿಂದ ಕರೆ ಬಂದಿರಲಿಲ್ಲ. ಬೆಳಗಾವಿಯ ಜೀವನ ಅವಳನ್ನು ಬೇಸರಕ್ಕೀಡು ಮಾಡಿದ್ದಿತು. ಅಲ್ಲಿ ವಿಶೇಷ ಕೆಲಸವೂ ಇರಲಿಲ್ಲವಾದುದರಿಂದ ಆ ಚಟುವಟಿಕೆಯ ಜೀವಕ್ಕೆ ಹೊತ್ತು ಹೇಗೆ ಕಳೆಯಬೇಕೆಂಬುದೇ ಸಮಸ್ಯೆಯಾಗಿಬಿಟ್ಟದ್ದಿತು.

ಆದ್ದರಿಂದ, ಅಕ್ಟೋಬರ್ ಮೊದಲನೆಯ ತಾರೀಖಿನ ದಿನ ಕತ್ತಲಾಗುವ ಸಮಯಕ್ಕೆ ಅಕಸ್ಮಾತ್ತಾಗಿ ವಿಶ್ವನಾಥ ದೇಸಾಯಿಯ ಆಗಮನವಾದುದರಿಂದ ಆಕೆಗೆ ಅತ್ಯಾನಂದವಾಗಿದ್ದಿತು. ಊಟವಾದನಂತರ ಅವರಿಬ್ಬರೂ ಮಹಡಿಯ ಮೇಲಿನ ಕೋಟಡಿಯಲ್ಲಿ ಕುಳಿತುಕೊಂಡು ಮಾತಿಗಾರಂಭಿಸಿದಾಗ ಹೇಮಾವತಿಯ ಮೈಯಲ್ಲಿ ಹೊಸ ರಕ್ತ ಸಂಚರಿಸಿದಂತಾಯಿತು.

"ಇಷ್ಟು ದಿನ ಯಾಕೆ ಸುಮ್ಮನೆ ಇದ್ದಿರಿ? ಒಬ್ಬರಾದರೂ ಬರಬಾರದೇ?" ಎಂದು ನಸು ಮುನಿಸಿನಿಂದಲೇ ಕೇಳಿದಳಾಕೆ.

"ಬರೋದು ಶಕ್ಯ ಇದ್ದಿದ್ದರೆ ಬರದಿರುತ್ತಿದ್ದೆನೇ? ಅಲ್ಲಿಗೆ ಹೋದಾಗಿಂದ ಒಂದು ರಾತ್ರಿಯೂ ನೆಟ್ಟಗೆ ನಿದ್ರೆ ಇಲ್ಲ" ಎಂದ ವಿಶ್ವನಾಥ.

"ನನಗ್ಯಾಕೆ ಹೇಳಿಕಳಿಸಲಿಲ್ಲ? ನಾನು ಏನೂ ಕೆಲಸ ಮಾಡಲಾರೆನೇನು ನಿಮ್ಮ ಸಂಗಡ?"

"ಮಾಡಬಹುದು. ಆದರೆ, ಸ್ವಲ್ಪ ಪ್ರ್ಯಾಕ್ಟಿಕಲ್ ಆಗಿ ವಿಚಾರಮಾಡು ಹೇಮಾ....ನಾವು ವಸ್ತಿಮಾಡೂದು ಗುಡ್ಡಗಾಡಿನೊಳಗೆ ಒಂದು ಹಾಳು ಗುಡಿಯೊಳಗೆ. ನಾವೆಲ್ಲಾ ಗಂಡಸರು—ಹತ್ತು ಹನ್ನೆರಡು ಮಂದಿ. ನೀ ಒಬ್ಬಳೇ ಹೆಂಗಸು....ಇರೂದು ಶಕ್ಯ ಐತೇನು ನೀನು?"

"ಯಾಕ ಶಕ್ಯ ಇಲ್ಲ? ಎಲ್ಲರೂ ಒಳ್ಳೆಯವರಾಗಿದ್ದರ ಏನು ಹೆದರಿಕೆ? ಅಲ್ಲದೆ ನನ್ನ ದಿಟ್ಟತನ ಬ್ಯಾರೆ ಎಲ್ಲಿದ್ದರೂ ನನ್ನ ಕಾಯುತದ. ನನ್ನ ಮನಸ್ಸಿನಾಗಿರದಿದ್ದರ ಯಾವನೂ ಏನೂ ಮಾಡಲಿಕ್ಕಿಲ್ಲ ನನಗ..." ಎಂದು ಆತ್ಮವಿಶ್ವಾಸದಿಂದ ನುಡಿದಳು ಹೇಮಾ.

"ಅದು ಹಾಗಿರಲಿ. ಆದರೆ, ಈಗ ನಾವು ಇರುವ ಜಾಗಾನೂ ಅಷ್ಟು ಸುರಕ್ಷಿತ ಇಲ್ಲ. ಯಾವಾಗ ಪೋಲೀಸರಿಗೆ ಗೊತ್ತಾದೀತೋ ಹೇಳೂದು ಕಷ್ಟ. ಇಂಥಾದರಾಗ ಒಂದು ವೇಳೆ ಒಮ್ಮೆಲೆ ಪೋಲೀಸರು ಮುತ್ತಿಗೆ ಹಾಕಿದರು ಅಂತ ತಿಳಿ. ಆಗ ನಾವು ಗಂಡಸರಾದರೂ ಗುಡ್ಡಗಾಡು ಸೀಮೆಯೊಳಗ ಓಡಿಹ್ಯಾಗಾದರೂ ಪಾರಾಗಬಹುದು; ನಮ್ಮ ಹಾಂಗ ನೀ ಪಾರಾಗುವದಕ್ಕೆ ಶಕ್ಯ ಅದ ಏನು?"

"ಧೈರ್ಯ ಒಂದಿದ್ದರ, ಮನಸ್ಸೊಂದಿದ್ದರ ಎಲ್ಲಾ ಶಕ್ಯ ಆದೀತು, ವಿಶ್ವನಾಥ. ಅಂತೂ ನಿಮ್ಮ ಗುಂಪಿನೊಳಗ ನಾ ಬರೂದು ಸಾಧ್ಯವಿಲ್ಲ ಅನ್ನು."

"ಹಾಗಲ್ಲ. ಸಾಧ್ಯ ಅದ. ಆದರೂ ಮೊದಲು ನಿನಗ ಇರೂದಕ್ಕ ಒಂದು ಸರಿಯಾದ ಜಾಗಾ ಬೇಕು. ಅದನ್ನ ಹುಡುಕ್ತಾ ಇದ್ದೇವೆ. ಇನ್ನು ಸ್ವಲ್ಪ ದಿನದೊಳಗ ಸಿಕ್ಕೀತು. ಅಲ್ಲೀ ತನಕ ಇಲ್ಲೇ ಕೆಲಸ ಮಾಡ್ತಾ ಇರೂದಕ್ಕಾಗುವದಿಲ್ಲೇನು?"

"ಮಾಡೂದಕ್ಕ ಕೆಲಸ ಆದ್ರೂ ಏನದ ಇಲ್ಲಿ?" ಎಂದು ಬೇಸರದಿಂದ ಕೇಳಿದಳಾಕೆ.

"ಕರಪತ್ರ ಹೊರಡಿಸ್ತಾ ಇರಬಹುದಲ್ಲ?"

"ಅದರಿಂದಲೂ ಏನೂ ಉಪಯೋಗ ಆಗುವ ಹಾಗಿಲ್ಲ. ಸಭೆ,ಮೆರವಣಿಗೆ ಎಲ್ಲಾ ಎಂದೋ ನಿಂತುಹೋದವು. ಮೊದಮೊದಲು ಪಟ್ಟಣ ಎಲ್ಲಾ ಉತ್ಸಾಹ ದಿಂದ ಹಾರಾಡಿತು. ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಹುರುಪಿನಿಂದ ಕಾರ್ಯ ಕ್ರಮಗಳಿಗೆ ಬರ್‍ತಿದ್ದರು. ನೂರಾರು ಮಂದೀನ್ನ ಹಿಡಿದು ಜೇಲಿಗೆ ಹಾಕಿದ ಮ್ಯಾಲ ಎಲ್ಲಾ ಉತ್ಸಾಹ ಹೋಗಿಬಿಟ್ಟಿತು. ಈಗ ಯಾರು ಬರ್‍ತಾರ ಮೆರವಣಿಗೆ ಗಳಿಗೆ....?"

"ಅಂದರೆ ?"

"ಪಟ್ಟಣಗಳ ಜನರೇ ಹೀಗೆ, ವಿಶ್ವನಾಥ. ಎಲ್ಲಾ ಆರಂಭಶೂರರು. ಮೊದಲು ಹುಯ್ ಅಂತ ಮುಗಿಲು ಮುಟ್ಟುವ ತನಕ ಹಾರ್‍ಯಾಡ್ತಾರ. ಹಾರ್‍ಯಾಡಿ ಹಾರ್‍ಯಾಡಿ ಕಾಲು ಸೋತೂ ಅಂದರ ಬಿಡ್ತಾರ. ಆಮ್ಯಾಲ ಅವರನ್ನೆಬ್ಬಿಸೂದು ಬ್ರಹ್ಮಸಿಂದಲೂ ಸಾಧ್ಯವಿಲ್ಲ."

"ನೀನನ್ನೂದು ನಿಜ, ಹೇಮಾ. ಅಂತೇ ಈಚೆಗೆ ಪಟ್ಟಣಗಳಿಂದ ಚಳವಳಿಯ ಸುದ್ದಿ ಸ್ವಲ್ಪವೂ ಇಲ್ಲ. ಧಾರವಾಡವೂ ಅಷ್ಟೆ, ಬೆಳಗಾವಿಯೂ ಅಷ್ಟೆ. ಎಲ್ಲಾ ನಗರಗಳೂ ಹೀಗೇ."

"ಕಲಿತವರು, ಸುಶಿಕ್ಷಿತರು, ಉತ್ಸಾಹಿ ತರುಣ ತರುಣಿಯರು ಇರುವ ಪಟ್ಟಣಗಳೇ ಹೀಗೆ ಮಾಡಿದರ, ದೇಶದ ಸ್ವಾತಂತ್ರ್ಯದ ಗತಿ ಏನು ವಿಶ್ವನಾಥ ? ಯಾರನ್ನು ನಂಬಿಕೊಂಡು ಹೋರಾಟ ಪ್ರಾರಂಭಿಸಿದರು ಬಾಪೂ ? ಅವರ ಲೇಖನ, ಅವರ ಭಾಷಣ ದಿನಾಲೂ ಪತ್ರಿಕೆಗಳೊಳಗ ಓದಿ ತಿಳಿದುಕೋತಿದ್ದ ಈ ಪಟ್ಟಣದ ಜನರೇ ಅವರ ಆಜ್ಞಾಲಾಪನೆ ಮಾಡದಿದ್ದರೆ ಹ್ಯಾಗೆ ? 'ಇದೇ ನಮ್ಮ ಕಡೆಯ ಹೋರಾಟ. ನಾವು ಮಾಡಬೇಕು—ಇಲ್ಲಾ—ಮಡಿಯಬೇಕು' ಅಂದರು ಗಾಂಧೀಜೀ. ಇವರು ಮಡಿಯುವುದು ದೂರ ಇರಲಪ್ಪ—ಆರು ತಿಂಗಳ ವರೆಗೆ ಚಳವಳಿ ಕೂಡ ಮಾಡುವ ಶಕ್ತಿ ಇಲ್ಲವಲ್ಲ ಈ ಕಲಿತವರಲ್ಲಿ ? ನಮ್ಮೆಲ್ಲ ಚಳವಳಿಗಳೂ ಅಯಶಸ್ವಿಯಾದದ್ದು ಇಂಥವರ ನಿರ್ಲಕ್ಷ್ಯದಿಂದ. ಇದೂ ಒಂದು ರೀತಿಯ ದ್ರೋಹವೇ ಅಲ್ಲೇನು ?"

"ನಾವು ಏನು ಅಂದು ಏನು ಉಪಯೋಗ ಹೇಮಾ ? ನಮ್ಮ ಕರ್ತವ್ಯ ನಾವು ಮಾಡೋಣ. ಇಲ್ಲಿಯ ವಿದ್ಯಾರ್ಥಿಗಳೂ ಸುಮ್ಮನಾದರೇ ? ಅದು ಮಾತ್ರ ಆಶ್ಚರ್ಯ !"

“ ಆಶ್ಚರ್ಯ ಏನು ಇದರೊಳಗ ? ಮಾಡಬೇಕು ಅಂತ ಮುಂದೆ ಬರುವವರನ್ನೆಲ್ಲ ಜೇಲಿಗೆ ಸಾಗಿಸಿತು ಸರಕಾರ. ಇದನ್ನು ಕಂಡು ಉಳಿದವರು ಹೆದರಿ ಸುಮ್ಮಗಿದ್ದಾರ. ಇಲ್ಲವೆ ತಮ್ಮ ತಮ್ಮ ಸ್ವಾರ್ಥ ನೋಡಿಕೊಂಡು ದೂರ ಇದ್ದಾರ.”

“ ಶಾಲೆ ಕಾಲೇಜಂತೂ ಸುರು ಆಗಿಲ್ಲವಲ್ಲ ?”

“ ಆಗಬಹುದು ಇನ್ನೊಂದು ತಿಂಗಳೊಪ್ಪತ್ತಿನಲ್ಲಿ. ಅದುವರೆಗೆ ರಜಾ ಸಿಕ್ಕ್ಯಾಂಗ ಆಯ್ತಲ್ಲ, ಈ ಪೋಕೀಲಾಲರಿಗೆ! ದಿನಾಲೂ ಸಿನಿಮಾ ನೋಡಬಹುದು, ಮಜಾ ಮಾಡ್ತಾ ತಿರುಗಬಹುದು—”

“ ಮಾಡುವವರು ಮಾಡಲೇಳು ಮಜಾ. ಕರ್ತವ್ಯದ ಅರಿವಿರುವವರಾದರೂ ಕೆಲಸ ಮಾಡ್ತಾರ. ನಿಜ ಹೇಳಬೇಕಾದರೆ ಹಳ್ಳೀ ಮಂದೀನೇ ಬಹದ್ದರರು ನೋಡು ಹೇಮಾ, ಇಂಥಾ ಕೆಲಸದೊಳಗ. ಒಮ್ಮೆ ಒಂದು ಕೆಲಸಕ್ಕ ನಿಂತರಂದರ ಮುಗೀತು—ಅದನ್ನು ಮುಗಿಸೂತನಕ ಬಿಡುವ ಮಾತೇ ಇಲ್ಲ. ಒಂದು ಕಡಿತ, ಎರಡು ತುಂಡು....ಒಂದೂವರೆ ತಿಂಗಳಿಗೇ ಚಳವಳಿಯ ಬೇಸರು ಬಂತು ಪಟ್ಟಣದವರಿಗೆ. ಹಳ್ಳಿಗಾಡಿಗೆ ಬಂದು ನೋಡಿದರ ಜನರ ಉತ್ಸಾಹ ಕಂಡು ಬೆರಗಾಗಬಹುದು ನೀನು. ಆಗಸ್ಟ ಹತ್ತು ಹನ್ನೊಂದರಲ್ಲಿ ಎಷ್ಟು ಹುರುಪಿತ್ತೋ ಅದಕ್ಕೂ ಮೂರು ನಾಲ್ಕು ಪಟ್ಟು ಹುರುಪದ ಈಗ. ಒಂದಕ್ಷರ ಕೂಡ ಬರೀಲಾರದ ಅಶಿಕ್ಷಿತ ಹಳ್ಳೀ ಮಂದಿ ಮಾಡ್ತಾ ಇರುವ ಕೆಲಸಗಳನ್ನ ನೋಡಿದರ ದಂಗಾಗಬಹುದು, ನೀನು....” ಎಂದು ಅಭಿಮಾನದಿಂದ ನುಡಿದ ವಿಶ್ವನಾಥ.

“ ಎಂಥೆಂಥ ಕೆಲಸ ನಡೆದಿದ್ದಾವೆ ವಿಶ್ವನಾಥ ಇದುವರೆಗೆ ?”

“ ತಾರ ತಂತೀ ಕಂಭ ಕಟ್ ಮಾಡೂದರಿಂದ ಹಿಡಿದುಕೊಂಡು, ರಸ್ತೇದ ಪೂಲು ಕೆಡವುವವರೆಗೆ, ದಫ್ತರು ಸುಡುವವರೆಗೆ ಇಪ್ಪತ್ತು ಮೂವತ್ತು ಕೆಲಸ ಆಗಿದಾವೆ. ಎಲ್ಲಾ ಭಾರಿ ಗಂಡಾಂತರದ ಕೆಲಸಗಳೇ. ಮತ್ತೆ ಪ್ರತಿಯೊಂದೂ ರಾತ್ರೀ ಕಾಲದಲ್ಲೇ ಆಗಬೇಕು. ಒಂದು ರಾತ್ರಿಯೊಳಗ ಹನ್ನೊಂದು ಮೈಲುದ್ದದ ರಸ್ತೆಯೊಳಗಿನ ತಾರ ತಂತೀ ಕಂಭ ಎಲ್ಲಾ ಉರುಳಿಸಿಬಿಟ್ಟಿದ್ದೆವು. ಮರುದಿವಸ ಪೋಲೀಸರ ಫಜೀತಿ ಏನು ಹೇಳುತ್ತೀ !”

“ ಒಂದು ರಾತ್ರಿಯೊಳಗ ಹನ್ನೊಂದು ಮೈಲು....! ಅದು ಹ್ಯಾಗೆ ಸಾಧ್ಯ ವಿಶ್ವನಾಥ ? ಎಷ್ಟು ಮಂದಿ ಕೂಡಿ ಮಾಡಿದ ಕೆಲಸ ಇದು ? ಎಷ್ಟು ತಾಸಿನೊಳಗ ?”

"ರಾತ್ರಿ ಹನ್ನೊಂದರಿಂದ ಮೂರರೊಳಗ ಎಲ್ಲಾ ಮುಗೀತು. ಒಟ್ಟು ಎಂಭತ್ತು ಮಂದಿ ಈ ಕೆಲಸಕ್ಕ ತಯಾರಾಗಿದ್ದರು."

"ಎಲ್ಲಾ ಒಂದೇ ಊರವರೋ ?"

"ಅಲ್ಲ, ಬೇರೆ ಬೇರೆ ಊರವರು. ಮೊದಲೇ ಎಲ್ಲರಿಗೂ ಸುದ್ದೀ ತಿಳಿಸಿದ್ದೆವು. ಝಟ್‌ಪಟ್ ಅಂತ ಕೆಲಸ ಆಗಿಹೋಯ್ತು...."

"ಇಷ್ಟು ಜನರನ್ನೆಲ್ಲಾ ಇಂಥ ಕೆಲಸಕ್ಕ ಹ್ಯಾಗೆ ತಯಾರು ಮಾಡ್ತೀರಿ ? ತಾರು ಯಾಕ ಕಡಿಯಬೇಕು ಅಂತ ಯಾರೂ ಕೇಳುವದಿಲ್ಲೇನು ?"

"ಸರಕಾರದ ಸಾಮಾನೆಲ್ಲಾ ನಾಶಮಾಡಬೇಕು ಅನ್ನೂದೂ ನಮ್ಮದೊಂದು ಕಾರ್ಯಕ್ರಮ ಅಲ್ಲವೇನು ? ಇಷ್ಟು ಹೇಳಿದರ ಸಾಕು. ಅವರು ತಿಳಿದುಕೋತಾರೆ. ಆಮ್ಯಾಲ ಇನ್ನೊಂದು ಮಾತು ಆಡಿದರ ಹೇಳು. ಕೆಲಸ ಮಾಡಿ ಮುಗಿಸುತಾರೆ. ಹಳ್ಳೀ ಮಂದಿ ಅಂದರೆ ಮಿಲಿಟರಿಯೊಳಗಿನ ಸೈನಿಕರಿದ್ದಾಂಗ, ಹೇಮಾ. ಹೇಳಿದಷ್ಟು ಮಾಡಿಬಿಡ್ತಾರ. ಒಣಾ ಕಾರಭಾರ ಮಾಡೂದಕ್ಕ ಬರೂದಿಲ್ಲ. ಅದೆಲ್ಲಾ ಪಟ್ಟಣದ ಮಂದಿಯ ಸ್ವಭಾವ."

"ಇವರು ತಾವೂ ಮಾಡೋದಿಲ್ಲ—ಬೇರೆಯವರಿಗೂ ಮಾಡಲು ಬಿಡೋದಿಲ್ಲ. ನಡುವೆ ವ್ಯರ್ಥ ಚರ್ಚೆಯೇ ಬಹಳ. ಅದಕ್ಕೇ ಇಲ್ಲಿ ಚಳವಳಿ ತಣ್ಣಗಾದದ್ದು...." ಎಂದು ವಿಷಾದದಿಂದ ನುಡಿದಳು ಹೇಮಾ.

"ನಾವು ನಿರಾಶರಾಗಬಾರದು, ಹೇಮಾ. ನಿಜವಾದ ಹಿಂದುಸ್ಥಾನ ಇರೋದು ಹಳ್ಳಿಗಳಲ್ಲಿ. ಪಟ್ಟಣಗಳಲ್ಲಿ ನೋಡೋದು ನಿಜ ಹಿಂದುಸ್ಥಾನ ಅಲ್ಲ. ವಿದೇಶೀಯರ ಕೆಟ್ಟ ಚಟಗಳನ್ನೆಲ್ಲಾ ಕಲಿತುಕೊಂಡು ಅವುಗಳನ್ನ ಪೂರಯಿಸಿಕೊಳ್ಳೋದಕ್ಕಾಗಿ ದೇಶವನ್ನೂ ಲಕ್ಷ್ಯಕ್ಕೆ ತಂದುಕೊಳ್ಳದ ಜನ ತುಂಬಿದ್ದಾರೆ ಇಲ್ಲಿ. ಹಳ್ಳಿಗಳಿಗೆ ಈ ರೋಗ ಇನ್ನೂ ಬಡಿದಿಲ್ಲ. ಅಂತೇ ಅಲ್ಲಿಯವರು ಹುಲಿಗಳ ಹಾಗೆ ಹೋರಾಡುತಾರೆ. ನಿಜವಾಗಿಯೂ ಮಾಡಿ ಮಡಿಯುವ ಜನ ಅಂದರೆ ಹಳ್ಳಿಯದೇ...."

"ಆದಕ್ಕೇ ಅಂಥವರ ಸಂಗಡ ಇದ್ದು ಕೆಲಸ ಮಾಡಬೇಕು ಅಂತ ನಾ ಹಂಬಲಿಸ್ತಾ ಇರೋದು ವಿಶ್ವನಾಥ. ನಾ ಹೆಂಗಸಾಗಿ ಹುಟ್ಟಿದ್ದೇ ದುರ್ದೈವದ ಸಂಗತಿ ಅಂದ ಹಾಗಾಯ್ತು" ಎಂದು ನೊಂದು ನುಡಿದಳು ಹೇಮಾ.

"ನೊಂದುಕೋ ಬೇಡ ಹೇಮಾ. ನೀನೂ ಅಲ್ಲಿಗೆ ಬರೋ ಕಾಲ ಸಮೀಪಿ

ಸುತಾ ಅದ. ಒಂದು ಜಾಗಾ ನೋಡೂದಷ್ಟs ಉಳಿದದ. ಅದಿರಲಿ. ನಿಮ್ಮ ತಂದೆಯವರು ಈಗ ಎಲ್ಲಿದಾರೆ?"

"ಇನ್ನೆಲ್ಲಿ ? ಅಲ್ಲೇ ಇದಾರೆ ಮುಂಬಯಿಯೊಳಗೇ."

"ಮುಂಬಯಿಯೊಳಗೆ? ಏನು ಮಾಡ್ತಾರೆ ಅಲ್ಲಿದ್ದುಕೊಂಡು!"

"ಇನ್ನೇನು ಮಾಡುತಾರೆ? ಊಟ ಮಾಡಿ ಆರಾಮಾಗಿ ಇದ್ದಾರೆ. ಆಯ್ತು" ಎಂದು ಬೇಸರದಿಂದ ನುಡಿದಳಾಕೆ.

"ಈ ಭಾಗಕ್ಕೆ ಬಂದೇ ಇಲ್ಲವೇನು?"

"ಇಲ್ಲ. ಬರೋದಕ್ಕೆ ಮನಸ್ಸಿರಬೇಕಲ್ಲ? ಬಂದರೆ ಏನಾದರೂ ಕೆಲಸ ಮಾಡಬೇಕಾಗುತದ. ನೀವು ಮಾಡುತಾ ಇರುವಂಥ ಕೆಲಸ ಅವರಿಂದಾಗುವದಿಲ್ಲ. ಅದಕ್ಕೇ ಅಲ್ಲಿ ಕುಳಿತಿರಬೇಕು."

"ಪೋಲೀಸರಿಗೆ ಗೊತ್ತಿರಬಹುದಲ್ಲ, ಅವರು ಅಲ್ಲಿರೋದು?"

"ಗೊತ್ತಿರಬಹುದೊ ಏನೊ. ಆ ಕೀರ್ತಿನಾಥನಿಗೇ ಗೊತ್ತದಲ್ಲ?"

"ಕೀರ್ತಿನಾಥ?"

"ಅದೇ ಆ ಸಿ. ಐ. ಡಿ. ಇನಸ್ಪೆಕ್ಟರ್ — ಅವತ್ತು ಮಿರಜ ಸ್ಟೇಶನ್ ಮ್ಯಾಲ ನೋಡಿರಲಿಲ್ಲೇನು ನೀನು?"

"ಓಹ್ಹೊ. ಗೊತ್ತಾಯ್ತು. ಆಗ ಚಹ ತರಲಿಕ್ಕೆ ಹೋಗಿದ್ದರಲ್ಲ-ಅವರು? ಈಗ ಎಲ್ಲಿದಾರ ಅವರು? ಭೆಟ್ಟಿಯಾಗಿದ್ದರೇನು?"

"ಎರಡು ಮೂರು ಸಾರೆ ಬಂದಿದ್ದರು ಮನೆಗೆ...."

"ಅಷ್ಟು ಸಲುಗೆ ಐತೇನು ಅವರಿಗೂ ನಿನಗೂ?"

"ಸಲುಗೆ ಅದ ಅಂತ ಅವ ತಿಳಿದುಕೊಂಡಿದಾನೆ. ಹೂಂ. ಅವನಿಗೇ ನನ್ನ ಕೊಡಬೇಕಂತ ನಮ್ಮ ತಂದೆಯವರ ಮನಸ್ಸು. ಮೂರು ನಾಲ್ಕು ವರ್ಷ ದಿಂದ ಮಾತುಕತೆ ನಡೆದಿದಾವೆ. ಅವನಿಗೂ ಬಹಳ ಇಚ್ಛೆ. ಅದಕ್ಕೇ ಆಗಾಗ ಬರತಿರತಾನೆ."

ವಿಶ್ವನಾಥನಿಗೆ ಇದು ಹೊಸ ಸುದ್ದಿಯಾಗಿದ್ದಿತು. ಇದುವರೆಗೆ ಹೇಮಾ ವತಿಯ ಮದುವೆಯ ಬಗ್ಗೆ ಮಾತು ನಡೆದಿರಬಹುದೆಂಬ ಕಲ್ಪನೆಯೂ ಅವನಿಗೆ ಬಂದಿರಲಿಲ್ಲ. ಹೇಮಾ ಮದುವೆ? ಅದೂ ಒಬ್ಬ ಸಿ. ಐ. ಡಿ. ಅಧಿಕಾರಿ ಯೊಂದಿಗೆ? ಆ ಯೋಚನೆಯೂ ಅವನಿಗೆ ಅಸಹನೀಯವೆನಿಸಿತು. "ನೀನೆಲ್ಲಿ?

ಅವನೆಲ್ಲಿ? ಇಬ್ಬರಿಗೂ ಎಂಥಾ ಜೊತೆ? ಕೇಳಿದವರು ನಕ್ಕಾರು ಬಿಡು ಎಲ್ಲಾದರೂ. ಇಂಥ ನೂರು ಸಿ. ಐ. ಡಿ. ಗಳನ್ನು ನಿವಾಳಿಸಿ ಒಗೆಯಬಹುದು ನಮ್ಮ ಹೇಮಾನ ಮೇಲಿನಿಂದ!" ಎಂದು ನಗುತ್ತ ನುಡಿದನಾತ.

ಒಂದೆರಡು ನಿಮಿಷ ಮೌನವಾಗಿದ್ದು ಹೇಮಾ ಮಾತನಾಡಿದಳು: "ಕೀರ್ತಿನಾಥನ ಯೋಗ್ಯತೆ ಕೀರ್ತಿನಾಥನದು, ನನ್ನ ಯೋಗ್ಯತೆ ನನ್ನದು. ಆದರೆ–ನಮ್ಮಿಬ್ಬರ ವಿಚಾರಸರಣಿಗಳಲ್ಲಿ ಆಕಾಶ ಪಾತಾಳಗಳ ಅಂತರ. ಅಲ್ಲದೆ, ನನಗೆ ಈಗಲೇ ಮದುವೆಯಾಗುವ ಮನಸ್ಸೂ ಇಲ್ಲ. ಸುಮ್ಮನೆ ಪೀಡಿಸುತ್ತಾರೆ ಆಯ್ತು, ನಮ್ಮ ತಂದೆಯವರು...."

ವಿಶ್ವನಾಥನಿಗೆ ಅದೂ ಹೊಸ ಸುದ್ದಿಯೇ ಆಗಿದ್ದಿತು. ಆಶ್ಚರ್ಯದಿಂದ ಕೇಳಿದ: "ನಿಮ್ಮ ತಂದೆಯವರು ನಿನ್ನ ಪೀಡಿಸ್ತಾರೆ? ಶಾಮರಾಯ ರಂಥವರು ಮದುವೆಯ ವಿಚಾರದೊಳಗೆ ಒತ್ತಾಯಮಾಡಬಹುದೇ, ತಮ್ಮ ಮಗಳಿಗೆ?"

"ಅವರ ಸ್ವಭಾವ ನಿನಗೇನು ಗೊತ್ತು ವಿಶ್ವನಾಥ? ಕಾಂಗ್ರೆಸ್ ಮುಖಂಡರೆಂದ ಮಾತ್ರಕ್ಕೆ ದೊಡ್ಡ ಕ್ರಾಂತಿಕಾರರಿರ್ತಾರೆ ಅಂತ ತಿಳಿದಿದ್ದೀ ಏನು, ನೀನು? ಇಂಥ ವಿಷಯದೊಳಗೆಲ್ಲ ಅವರು ಪೂರಾ orthodox ಇದಾರೆ. ಅದರೊಳಗೆ ನಾ ಒಬ್ಬಳೇ ಮಗಳು ಅವರಿಗೆ. ನನ್ನ ಮ್ಯಾಲ ಬಹಳ ಪ್ರೀತಿ. ಅತಿ ಪ್ರೀತಿ ಯಾವಾಗಲೂ ಕೆಟ್ಟದ್ದು ನೋಡು. ಆ ಅತಿ ಪ್ರೀತೀನೇ ಅವರನ್ನ ಹೀಗೆ ಮಾಡಿಸ್ತಾ ಅದ. ಅವರ ದೃಷ್ಟಿಯೊಳಗ ಕೀರ್ತಿ ಒಳ್ಳೆಯ ವರ, ಪದವೀಧರ, ಸಂಭಾವಿತ. ಅಂತೇ ಅವನಿಗೆ ಒಳ್ಳೇ ಕೆಲಸವನ್ನೂ ಕೊಡಿಸಿದರು, ಅವರೇ. ಅಧಿಕಾರದಲ್ಲಿ ಮೇಲಕ್ಕೇರುತ್ತ ಹೋಗಿ ಆತ ಡಿ. ಎಸ್. ಪಿ. ಆಗಬಹುದು ಅಂತ ಅವರ ಎಣಿಕೆ. ನಾನು ಡಿ. ಎಸ್. ಪಿ. ಯಂಥ ದೊಡ್ಡ ಅಧಿಕಾರಿಯ ಪತ್ನಿಯಾಗಿ ಸುಖದಿಂದ ಇರೋದನ್ನ ನೋಡಿ ಸಂತೋಷಪಡಬೇಕು ಅಂತ ಅವರ ಇಚ್ಛೆ. ಆದರೆ ನನ್ನ ಇಚ್ಛೆ ಏನು ಅನ್ನೋದನ್ನೇ ಅವರು ವಿಚಾರ ಮಾಡೋದಿಲ್ಲವಲ್ಲ ಅಂತ ನನಗೆ ದುಃಖ, ಬೇರೇನೂ ಇಲ್ಲ...."

"ಕೀರ್ತಿನಾಥರ ಅಭಿಪ್ರಾಯ ಏನು?"

"ಅವನೂ ಹಾಗೇ. ನಾನು ಈ ಚಳವಳಿಯ ಹುಚ್ಚನ್ನ ತಲೆಯೊಳಗಿಂದ ತೆಗೆದುಹಾಕಿ ಸಂಸಾರಕ್ಕೆ ಬೀಳಬೇಕು ಅಂತ ಅವನ ಆಸೆ. ಆಗಾಗ ಅವನೂ

ಆವನ ತಾಯಿ ಇಬ್ಬರೂ ಬರ್ತಾರ. ತಮ್ಮ ಮನೆಗೆ ಕರೆದುಕೊಂಡು ಹೋಗ ಬೇಕಂತ ಬಹಳ ಪ್ರಯತ್ನಪಟ್ಟರು. ನಾ ಹೋಗಲಿಲ್ಲ...."

"ನಿನ್ನ ಅಭಿಪ್ರಾಯ ಅವರಿಗೆ ಗೊತ್ತಾಗಿಲ್ಲವೇನು ಇನ್ನೂ ?"

"ಎಷ್ಟೋ ಸಲ ಸ್ಪಷ್ಟವಾಗಿ ಹೇಳಿನೋಡಿದೆ. ನಾನು serious ಆಗಿ ಮಾತಾಡೋದಿಲ್ಲ ಅಂತ ಅವರು ತಿಳಿದುಕೊಂಡಿದ್ದಾರೇನೊ. ನನ್ನ ಮಾತನ್ನ ಲಕ್ಷ್ಯಕ್ಕೇ ತಂದುಕೊಳ್ಳೋದಿಲ್ಲ. ಮತ್ತೆ ಮತ್ತೆ ಪೀಡಿಸುತ್ತಲೇ ಇರ್ತಾರೆ...."

"ಆ ಕೀರ್ತಿನಾಥರ ಕೆಲಸ ಏನೀಗ ?" ಎಂದು ಕುತೂಹಲದಿಂದ ಕೇಳಿದ ವಿಶ್ವನಾಥ.

"ಬೇರೆ ಏನು ? ಜಿಲ್ಲೆಯ ಒಂದು ಭಾಗದೊಳಗಿನ ಚಳವಳಿಯ ಕಾರ್ಯ ಕರ್ತರನ್ನ ಪತ್ತೇ ಮಾಡುವುದೇ ಅಂತೆ. ನಿಮ್ಮ ಗುಂಪಿನ ಜನರೆಲ್ಲರ ಹೆಸರು ದೆಸೆ ಎಲ್ಲಾ ಅವರಿಗೆ ಗೊತ್ತಿರೋ ಹಾಗೆ ಕಾಣಿಸಿತು...."

"ಏನಾದರೂ ಹೇಳುತ್ತಿದ್ದರೇನು ನಿನ್ನ ಹತ್ತಿರ ?"

"ಹಾಗೆಲ್ಲಾ ಗುಟ್ಟು ಬಿಟ್ಟುಕೊಡುವ ಆಸಾಮಿ ಅಲ್ಲಪ್ಪ ಅದು ! ಒಮ್ಮೆ ನಾನೇ ಸಹಜ ಕೇಳಿದಾಗ ಸಹಜ ಹೇಳಿದ. ನಿನ್ನ ವ್ಯಾಲೂ, ಶೇಖರನ ವ್ಯಾಲೂ ಐದು ನೂರು ರೂಪಾಯಿ ಇನಾಮು ಇಟ್ಟಿದ್ದಾರಂತಲ್ಲ, ನಿಮಗೆ ಗೊತ್ತಿಲ್ಲೇನು ?"

"ಗೊತ್ತು. ಹಳ್ಳಿಪಳ್ಳಿಗಳಲ್ಲೆಲ್ಲ ಜಾಹೀರು ಮಾಡಿದ್ದಾರ...."

"ರೂಪಾಯಿಯ ಆಸೆಗೆ ಬಿದ್ದು ನಿಮ್ಮನ್ನ ಯಾರಾದರೂ ಹಿಡಿದು ಕೊಟ್ಟರೆ ?"

"ಅಂಥ ಪಿತೂರಿ ನಡೆಯೂ ಹಾಂಗಿಲ್ಲ ಹೇಮಾ ನಮ್ಮ ಭಾಗದೊಳಗ. ಆದರ ಚಿಂತೆ ಬೇಡ. ಅದ್ಯಾವದೂ ನಡೆಯದಂತೆ ಎಲ್ಲಾ ವ್ಯವಸ್ಥೆ ಮಾಡಿದ್ದೇವೆ."

"ನಿಮ್ಮ ತಂದೆಯವರು ಏನೂ ಮಾಡಲಿಲ್ಲವೇನು ? ನೀನು ಚಳವಳಿ ಯೊಳಗ ಬಿದ್ದಿರೂದು ಗೊತ್ತಿರಬೇಕಲ್ಲ ಅವರಿಗೆ ?"

"ಎಂದೋ ಗೊತ್ತಾಗಿಹೋಯ್ತು. ನಾನೇ ಸ್ವತಃ ಮನೆಗೆ ಹೋಗಿ ಬಂದೂಕು ಹಾರಿಸಿಕೊಂಡು ಬಂದೆ. ಅಂದೇ ಅವರಿಗೆ ತಿಳೀತು ಎಲ್ಲಾ."

"ಶೇಖರನ ಗುಂಪಿನೊಳಗ ನೀನಿರೂದೂ ಗೊತ್ತಿರಬೇಕಲ್ಲ ?"

"ಗೊತ್ತಾಗದಿರ್ತದೇನು? ಆದರೆ ಅವರು ಏನು ಮಾಡುವ ಹಾಂಗೂ ಇಲ್ಲ."

"ಸರಿ. ಇನ್ನು ಮುಂದೆ ಏನು ಮಾಡಬೇಕಂತ ಮಾಡಿದ್ದೀರಿ? ಬರೀ ದಪ್ತರು ಸುಡೂದು, ತಾರ ತಂತಿ ಕಡಿಯೂದು ಇದೇ ಆಯ್ತಲ್ಲ?"

"ಈಗೀಗ ನಮ್ಮ ಶಕ್ತಿ ಹೆಚ್ಚುತ್ತಾ ಬಂದದ ಹೇಮಾ. ಇನ್ನುಮ್ಯಾಲ ದೊಡ್ಡ ದೊಡ್ಡ ಕೆಲಸ ಆಗಬೇಕು. ಮಾಡಿಯೂ ಮಾಡುತ್ತೇವೆ. ನಾಳೆ ಗಾಂಧೀ ಜಯಂತಿ. ನೆನಪು ಇರಬೇಕಲ್ಲ ನಿನಗೆ?"

"ಹೂಂ. ಅಕ್ಟೋಬರ್ ಎರಡು...."

"ನಾಳೆ ನಮ್ಮ ದೇಶದೊಳಗ ಬೇರೆ ಬೇರೆ ಕಡೆಯ ಜನ ಬೇರೆ ಬೇರೆ ರೀತಿಯಿಂದ ಜಯಂತಿ ಆಚರಿಸ್ತಾರೆ. ನಮ್ಮ ಗುಂಪಿನವರೂ ಒಂದು ಅದ್ಭುತ ರೀತಿಯೊಳಗ ಆಚರಿಸಬೇಕಂತ ಮಾಡಿದ್ದೇವೆ. ಕರ್ನಾಟಕದಲ್ಲೇ ಹೊಸ ರೀತಿ ಆದೀತು, ಇದು ಹೀಗೆ ಆಚರಿಸೋದು...." ಎಂದು ಉತ್ಸಾಹದಿಂದ ನುಡಿದ ವಿಶ್ವನಾಥ.

"ಅದೇನಪ್ಪಾ ಅಂಥ ಚಮತ್ಕಾರದ ಆಚರಣೆ? ಏನು ಮಾಡಬೇಕಂತ ಮಾಡಿದ್ದೀರಿ?"

"ಈಗ ನಾ ಹೇಳಿಬಿಟ್ಟರ ಅದರ ಮಜಾ ಎಲ್ಲಾ ಹೋಗಿಬಿಟ್ಟೀತು. ನಾವು ಮಾಡಿದ ಮ್ಯಾಲ ಹ್ಯಾಗೂ ಪತ್ರಿಕೆಯೊಳಗ ಬಂದೇ ಬರುತದ. ಓದಿ ನೋಡಿದ ಮ್ಯಾಲ ನೋಡೀಯಂತೆ ಮಜಾ" ಎಂದ ವಿಶ್ವನಾಥ.

ಒಂದೆರಡು ಗಂಟೆಗಳ ತರುವಾಯ ಆತ ಅಲ್ಲಿಂದ ಹೊರಟಾಗ ಬೀದಿಯ ಎದುರಿಗಿದ್ದ ಗಿಡದ ಕೆಳಗೆ ಯಾರೋ ನಿಂತುಕೊಂಡು ತನ್ನನ್ನೇ ದೃಷ್ಟಿಸುತ್ತಿದ್ದ ಹಾಗೆ ತೋರಿತು. ಮನೆಯ ಮಹಾದ್ವಾರದಲ್ಲಿ ನಿಂತು ಆತನನ್ನು ಬೀಳ್ಕೊಡುತ್ತಿದ್ದ ಹೇಮಾವತಿಗೂ ಸಂದೇಹ ಬರದಿರಲಿಲ್ಲ. "ಯಾರೋ ವಾಚ್ ಮಾಡುತ್ತಿದ್ದ ಹಾಗೆ ಕಾಣಿಸ್ತದ. ಹುಷಾರಾಗಿ ಹೋಗು" ಎಂದು ಪಿಸುದನಿಯಲ್ಲಿ ನುಡಿದಳು. "ಅದರ ಚಿಂತೀ ಬಿಡು ನೀನು. ಇಂಥ ಸಾವಿರ ಜನರನ್ನ ನೋಡಿದ್ದೇವೆ ನಾವು!" ಎಂದು ಮೆಲ್ಲಗಿನ ಧ್ವನಿಯಲ್ಲಿ ನುಡಿದು, ಆತ ಸರಸರನೆ ನಡೆದು ಕತ್ತಲಲ್ಲಿ ಮಾಯವಾದ.

ನಾಲ್ಕೈದು ನಿಮಿಷಗಳ ಕಾಲ ಮನೆಯ ಎದುರಿಗೇ ನಿಂತುಕೊಂಡು

ಹೇಮಾ ಆತ ಹೋದ ನಿಟ್ಟಿನ ಕಡೆಗೇ ದೃಷ್ಟಿಸುತ್ತಿದ್ದಳು. ಎದುರಿಗಿನ ಗಿಡದ ಕೆಳಗಡೆ ನಿಂತಿದ್ದ ವ್ಯಕ್ತಿ ಆತನನ್ನು ಹಿಂಬಾಲಿಸಿದುದು ಕಂಡು ಬರುತ್ತಲೂ ಆಕೆ ಯೋಚನೆಗೊಳಗಾದಳು. ಸಿ. ಐ. ಡಿ ಗಳ ಕೈಗೆ ವಿಶ್ವನಾಥ ಸಿಕ್ಕಿಬೀಳುವನೇನೋ ಎಂದು ಚಿಂತಿಸುತ್ತಲೇ ಒಳಕ್ಕೆ ತೆರಳಿದಳು.

ಅನಂತರ ಆಕೆಗೆ ನಿದ್ರೆ ಬರಲೇ ಇಲ್ಲ, ಹಾಸಿಗೆಯ ಮೇಲೆ ಬಿದ್ದುಕೊಂಡು ಅತ್ತ ಇತ್ತ ಹೊರಳಾಡುತ್ತಿದ್ದಳು. ಸುಮಾರು ಎರಡು ಗಂಟೆ ಆಗಿರಬಹುದು. ಕೆಳಗಡೆ ಏನೋ ಸದ್ದಾದ ಹಾಗೆ ಭಾಸವಾಯಿತು. ಒಂದೆರಡು ಕ್ಷಣಗಳಲ್ಲೇ ಜನರ ಮಾತಿನ ಧ್ವನಿಯೂ ಕೇಳಬಂದಿತು. ಮೆಟ್ಟಲಿನ ಕೆಳಗಡೆ ನಿಂತುಕೊಂಡು ಅತ್ತೆ ತನ್ನನ್ನು ಕೂಗುವುದೂ ಕೇಳಿಸಿತು.

ಮಹಡಿಯಿಂದಿಳಿದು ಕೆಳಗಡೆ ಬಂದಾಗ ಹಾಲಿನಲ್ಲಿ ಕೀರ್ತಿನಾಥ ಕುಳಿತಿದ್ದುದನ್ನು ಕಂಡು ಹೇಮಾವತಿಗೆ ದಿಗಿಲಾಗದಿರಲಿಲ್ಲ. ಅವನನ್ನು ಬೇಸರದಿಂದ ದೃಷ್ಟಿಸುತ್ತ—"ಏನು ಬಂದಿರಿ, ಇಂಥ ರಾತ್ರಿಯಲ್ಲಿ?" ಎಂದು ಕೇಳಿದಳು.

"ಅಂಥ ಕೆಲಸ ಇತ್ತು ಅಂತಲೇ ಬಂದೆ. ನಿಮಗೆ ತೊಂದರೆಯಾಯಿತು. ಕ್ಷಮಿಸಬೇಕು. ಇಂದು ಸಾಯಂಕಾಲ ದೇಸಾಯಿ ಅಂತ ಒಬ್ಬರು ಬಂದಿದ್ದರೇನು ಇಲ್ಲಿಗೆ?" ಎಂದು ಕೇಳಿ, ಆತ ಅವಳ ಮುಖವನ್ನೇ ಸೂಕ್ಷ್ಮವಾಗಿ ದೃಷ್ಟಿಸತೊಡಗಿದ.

ಅಂತೂ ವಿಶ್ವನಾಥ ಇಲ್ಲಿಗೆ ಬಂದ ವಿಚಾರ ಸಿ. ಐ. ಡಿ. ಗಳಿಗೆ ತಿಳಿದು ಹೋಗಿದೆ! ಅವನು ಪಾರಾಗಿಹೋದನೋ, ಇಲ್ಲವೆ, ಈಗಾಗಲೆ ಇವರ ಕೈಗೆ ಸಿಕ್ಕಿಬಿದ್ದಿರುವನೊ—ಎಂದು ಅವಳು ಚಿಂತಿಸತೊಡಗಿದಳು. ಮುಖವನ್ನು ಬೇರೆ ಕಡೆಗೆ ಹೊರಳಿಸಿ "ಯಾರೂ ಬಂದಿಲ್ಲ ಇಲ್ಲಿಗೆ ಯಾಕೆ?" ಎಂದಳು.

ಕೀರ್ತಿನಾಥ ಒಂದು ನಿಮಿಷ ಮೌನವಾಗಿ ಕುಳಿತುಕೊಂಡಿದ್ದ. ಆಕೆಯ ಮುಖದಿಂದ ನಿಜವಾದ ವಿಷಯವನ್ನು ಯಾವ ಉಪಾಯದಿಂದ ಹೊರಗೆಡಹಬೇಕೆಂದು ಯೋಚಿಸುತ್ತಿದ್ದನೇನೊ!

"ನಮಗೆಲ್ಲ ಗೊತ್ತಾಗಿದೆ, ಹೇಮಾವತಿ! ಇನ್ನು ನೀವು ಹಾರಿಸಿ ಮಾತಾಡಿ ಏನೂ ಉಪಯೋಗವಿಲ್ಲ. ಸುಮ್ಮನೆ ಇರುವ ವಿಚಾರವನ್ನು ಒಪ್ಪಿಕೊಂಡು ಬಿಡಬಾರದೇ? ನಿಮಗೇನೂ ತೊಂದರೆಯಾಗದ ಹಾಗೆ ನಾನು ನೋಡಿಕೊಳ್ತೇನೆ."

"ಇಲ್ಲದ ಸುದ್ದಿಯನ್ನೆಲ್ಲ ಒಪ್ಪಿಕೊಳ್ಳಬೇಕೆಂದರ ಹ್ಯಾಗೆ ಒಪ್ಪಿಕೋಬೇಕು?

ಆ ದೇಸಾಯಿ ಯಾರು ಅನ್ನೋದೇ ನನಗೆ ಗೊತ್ತಿಲ್ಲ. ಹೀಗಿರುವಾಗ ಅವ ಬಂದಿದ್ದ ಅಂತ ಹೇಳಿದರ ಏನು ಅನ್ನಬೇಕು? ನಮ್ಮ ಮನೆಗಂತೂ ಬಂದಿಲ್ಲ. ಬೇರೆ ಯಾರ ಮನೆಗಾದರೂ ಬಂದಿರಬಹುದು...."

"ನಿಮ್ಮ ಮನೆಗೇ ಬಂದು ನಿಮ್ಮ ಮನೆಯಿಂದಲೇ ಹೋದದ್ದು ನಮಗೆ ಪಕ್ಕಾ ಖಾತ್ರಿ ಆಗಿದೆ ಹೇಮಾ. ಸುಮ್ಮನೆ ಯಾಕೆ ಸುಳ್ಳು ಹೇಳ್ತೀರಿ? ಅವ ಯಾಕೆ ಬಂದಿದ್ದ ಇಲ್ಲಿಗೆ, ಇಲ್ಲಿಂದ ಎಲ್ಲಿಗೆ ಹೋದ ಹೇಳಿಬಿಡಬಾರದೇ?" ಎಂದು ನುಡಿದು, ಆತ ಕುರ್ಚಿಯಿಂದೆದ್ದು ಹಾಲಿನಲ್ಲಿ ಅಡಿಯಿಡತೊಡಗಿದ.

ಹೇಮಾವತಿಗೆ ಸ್ವಲ್ಪ ಸಮಾಧಾನವಾದಂತಾಯಿತು. ಅಂತೂ ವಿಶ್ವನಾಥ ಇವರ ಕೈಗೆ ಸಿಕ್ಕಿಲ್ಲ ಹಾಗಾದರೆ! ಏನೋ ಉಪಾಯ ಹೂಡಿ ತಪ್ಪಿಸಿಕೊಂಡು ಹೋಗಿದ್ದಾನೆ ಭೂಪ! ಹೋಗಿರಲೇ ಬೇಕು. ಇಲ್ಲವಾದರೆ ಕೀರ್ತಿ ಈ ರೀತಿ ಮಾತನಾಡುತ್ತಿರಲಿಲ್ಲ. "ಇಲ್ಲಿಂದ ಎಲ್ಲಿಗೆ ಹೋದ?" ಎಂದು ಕೇಳುತ್ತಿರಲಿಲ್ಲ....

ಕೀರ್ತಿನಾಥ ಅವಳ ಹತ್ತಿರ ಬಂದು ಕೊಂಚ ದರ್ಪ ಬೆರೆತ ಸ್ವರದಲ್ಲಿ ನುಡಿದ, "ಇಲ್ಲಿ ಕೇಳ್ರಿ, ಹೇಮಾವತಿ. ಫರಾರಿ ಆಸಾಮಿಗಳಿಗೆ ಆಶ್ರಯ ಕೊಡೋದು, ಅವರಿಗೆ ಸಹಾಯ ಮಾಡೋದು ಅಂದರೆ ಅಪರಾಧ ಅನ್ನೋದು ನಿಮಗೆ ಗೊತ್ತಿರಬೇಕು!"

ಅವನ ಕಡೆಗೆ ದೃಷ್ಟಿಯನ್ನೂ ಹೊರಳಿಸದೆ ಹೇಮಾ ನಿರ್ಲಕ್ಷ್ಯದ ಭಾವದಿಂದ ನುಡಿದಳು: "ಗೊತ್ತು."

ಆ ನಿರ್ಲಕ್ಷ್ಯದ ಧ್ವನಿ ಅವನ ಅಸಮಾಧಾನವನ್ನಿನ್ನೂ ಹೆಚ್ಚಿಸಿತು. "ಈ ಅಪರಾಧಕ್ಕಾಗಿ ನಿಮ್ಮನ್ನು ಅರೆಸ್ಟ್ ಮಾಡುವ ಅಧಿಕಾರವೂ ನಮಗಿದೆ ಅನ್ನೋದು ನಿಮಗೆ ಗೊತ್ತಿರಬೇಕು!" ಎಂದ.

"ಅದೂ ಗೊತ್ತು" ಎಂದಳು ಹೇಮಾ, ತುಚ್ಛತೆ ಬೆರೆತ ಧ್ವನಿಯಲ್ಲಿ.

"ನನ್ನ ಮನಸ್ಸಿನ ವಿರುದ್ಧ ನಾ ನಿಮ್ಮನ್ನು ಅರೆಸ್ಟ್ ಮಾಡುವ ಪ್ರಸಂಗ ಬರಬಹುದು....ನಮ್ಮ ನಿಮ್ಮಲ್ಲಿ ಇರುವ ಸಂಬಂಧದಿಂದ ಆ ಮಾತು ಹೇಳ್ತಾ ಇದೇನೆ. ಬೇರೆ ಯಾರಾದರೂ ಆಗಿದ್ದರೆ ಇಷ್ಟೊತ್ತಿಗೆ ಲಾಕಪ್‌ನಲ್ಲಿರುತ್ತಿದ್ದರು...."

"ನಮ್ಮ ನಿಮ್ಮ ಸಂಬಂಧವಾದರೂ ಏನು ಮಿಸ್ಟರ್? ನೀವು ಸಿ. ಐ. ಡಿ.

ಆಫೀಸರ್. ನಾವು ಕಾಂಗ್ರೆಸ್ ಜನ. ನಿಮ್ಮ ಡ್ಯೂಟಿ ನೀವು ಮಾಡ್ರಿ...." ಎಂದು ಗಂಭೀರವಾಗಿ ನುಡಿದಳು ಹೇಮಾ.

ಕೀರ್ತಿನಾಥ ಬೆರಗಾಗಿ ಆಕೆಯನ್ನು ಕ್ಷಣಕಾಲ ನಿಟ್ಟಿಸುತ್ತಿದ್ದು ಅನಂತರ —"ಇರಲಿ. ಇರಲಿ. ಇದೊಂದು ಸಲ ಹೋಗಲಿ. ಆದರೆ ಇನ್ನು ಮ್ಯಾಲ ಮಾತ್ರ ಫರಾರಿ ಆಸಾಮಿಗಳನ್ನ ಮನೆಗೆ ಸೇರಿಸಿಕೋ ಬ್ಯಾಡ್ರಿ" ಎಂದು ನುಡಿದು ಅವಳ ಉತ್ತರದ ದಾರಿಯನ್ನು ಕಾಯದೆ ಹೊರಟು ನಡೆದ.

೧೫

ಪೋಲೀಸರ ಕೈಯಿಂದ ತಪ್ಪಿಸಿಕೊಂಡು ಹೊರಟ ವಿಶ್ವನಾಥ ತಮ್ಮ ಕೇಂದ್ರಸ್ಥಲಕ್ಕೆ ಬಂದು ಮುಟ್ಟಿದಾಗ ಗುಂಪಿನವರೆಲ್ಲ ಮಧ್ಯಾಹ್ನದ ಊಟಕ್ಕೆ ಕುಳಿತಿದ್ದುದು ಕಾಣಿಸಿತು.

"ಓಹ್ಹೊ! ಇಷ್ಟು ಬೇಗ ಬಂದುಬಿಟ್ರಿ, ದೇಸಾಯರ! ಕೆಲಸ ಆಯ್ತೇನು?" ಎಂದು ನಗುತ್ತ ಸ್ವಾಗತಿಸಿದರು ಮಾಸ್ತರರು.

"ಆಯ್ತು. ಆದರೆ ಎಲ್ಲಾ ಕೆಲಸ ಕೆಟ್ಟುಹೋಗುವುದರೊಳಗಿತ್ತು. ಸ್ವಲ್ಪದರಾಗ ತಪ್ಪಿಸಿಕೊಂಡು ಬಂದೆ...." ಎಂದು ನುಡಿದು, ಆತ ಮಾಸ್ತರರ ಪಕ್ಕದಲ್ಲಿ ಕುಳಿತುಕೊಂಡು ರೊಟ್ಟಿಗೆ ಕೈಹಚ್ಚಿದ.

"ಪೋಲೀಸರ ಕೈಗೆ ಸಿಕ್ಕಿದ್ದಿರೋ ಏನು?" ಎಂದು ಚಿಂತೆಯಿಂದ ಕೇಳಿದ ಶೇಖರ.

"ಸಿಕ್ಕುಬಿಟ್ಟಹಾಗೇ ಆಗಿತ್ತು. ನಾ ಬೆಳಗಾವಿಗೆ ಬಂದದ್ದು ಹ್ಯಾಗೆ ತಿಳೀತೊ ಏನೊ ಅವರಿಗೆ. ದುಡ್ಡಣ್ಣವರ ಮನೆಯ ಮ್ಯಾಲ ಸಿ. ಐ. ಡಿ., ಇಟ್ಟ ಹಾಗೆ ಸಂಶಯ ನನಗೆ...."

"ಇದ್ದರೂ ಇರಬಹುದು. ಅವರ ಮ್ಯಾಲ ಬಹಳ ದಿವಸದಿಂದ ಕಣ್ಣು ಐತಿ ಪೋಲೀಸರದು. ಹೇಮಾವತಿಯವರು ಭೆಟ್ಟಿಯಾಗಿದ್ದರೊ ಇಲ್ಲೊ?— ಇಲ್ಲ, ಅವರ ಮನೆಗೆ ಹೋಗೂದರೊಳಗಾಗಿ ಸಿಕ್ಕುಬಿಟ್ಟಿರೊ?"

ವಿಶ್ವನಾಥ ರೊಟ್ಟಿ ತಿನ್ನುತ್ತಲೇ ಮುನ್ನಾದಿನದ ರಾತ್ರಿ ನಡೆದುದೆಲ್ಲವನ್ನು ಸ್ವಲ್ಪದರಲ್ಲಿಯೆ ವಿವರಿಸಿ ಹೇಳಿದ. "ಸಿಕ್ಕುಬಿಟ್ಟಿದ್ದರ ಬಹಳ ತ್ರಾಸ ಆಗುತಿತ್ತೇನೊ. ಕೈಚೀಲದೊಳಗ ಈ ಗೊಂಬಿಗಳ ಸಾಮಾನೆಲ್ಲ ಇದ್ದುವಲ್ಲ...."

ಕೈಬಾಂಬುಗಳಿಗೆ ಅವರು ' ಗೊಂಬೆ 'ಗಳೆಂದು ಕರೆಯುತ್ತಿದ್ದರು !

" ಅಂತೂ, ಪಾರಾಗಿ ಬಂದಿರಿ ಅಂತ ಈ ಸಾಮಾನೆಲ್ಲಾ ಸಿಕ್ಕವು. ಇವು ಇಲ್ಲದೆ ನಾವು ಮುಂದಿನ ದೊಡ್ಡ ದೊಡ್ಡ ಕೆಲಸ ಮಾಡೂದು ತ್ರಾಸ ಆಗ್ತಿತ್ತು" ಎಂದರು ಮಾಸ್ತರರು.

" ಹ್ಯಾಂಗ ಪಾರಾದಿರಿ ದೇಸಾಯರು ?" ಎಂದ ಸಂಗಣ್ಣ.

" ನನ್ನ ಹಿಂದೆ ಹಿಂದೆ ಬರ್ತಿದ್ದ ಸಿ. ಐ. ಡಿ.ನ್ನ ಹ್ಯಾಗಾದರೂ ಮಾಡಿ ಅಲ್ಲೇ ಕೆಡವಿ ಓಡಬೇಕಾಗಿತ್ತು. ನಾವು ದಿನಾಲೂ ಹತ್ತಿರ ಇಟ್ಟುಕೊಳ್ಳೋ ಖಾರದ ಪುಡಿ ಆಗಲೂ ನನ್ನ ಕಿಸೇದೊಳಗ ಇದ್ದದ್ದು ನೆನಪಾಯಿತು. ಒಂದು ಕಡೆ ನಿಂತುಕೊಂಡು, ಅವ ಹತ್ತಿರ ಬರೂದನ್ನೇ ಕಾಯ್ತಾ ಇದ್ದು, ಅವ ಎದುರಿಗೆ ಬರುತ್ತಲೂ ಪುಡಿಯನ್ನ ಅವನ ಕಣ್ಣಿಗೆ ಉಗ್ಗಿ ಪಾರಾದೆ. ಆ ಉರಿ ಯಿಂದ ಪಾರಾಗಿ ಅವ ಕಚೇರಿಗೆ ಹೋಗಿ ಸುದ್ದೀ ತಿಳಿಸಲಿಕ್ಕೆ ಒಂದು ತಾಸಾದರೂ ಬೇಕಾದೀತು ಅನ್ನೂದು ಗೊತ್ತಿತ್ತು. ಅಷ್ಟರೊಳಗ ಬೆಳಗಾವಿಯಿಂದ ಹೊರಡ ಬೇಕಾಗಿತ್ತು. ಮತ್ತೆ ದುಡ್ಡಣ್ಣವರ ಮನೆಗೆ ಹೋಗೂದು ನೆಟ್ಟಗಾಗ್ತಿರಲಿಲ್ಲ. ನಡೀತಾ ಹೊರಟೆ. ಮೂರು ನಾಲ್ಕು ಮೈಲು ನಡೆದಮ್ಯಾಲ ಸಂಪಗಾಂವಿಗೆ ಹೊರಟಿದ್ದ ಒಂದು ಚಕ್ಕಡಿ ಸಿಕ್ಕಿತು. ಅದರೊಳಗ ಆರಾಮಾಗಿ ಮಲಗಿಕೊಂಡು ಬಂದೆ, ಆಯಿತು."

" ಇನ್ನುಮ್ಯಾಲ ನೀವು ಹುಷಾರಾಗಿರ್ರಿ, ದೇಸಾಯರು! ಒಬ್ಬರೇ ಹೋಗ ಬ್ಯಾಡ್ರಿ ಯಾವ ಊರಿಗೂ!" ಎಂದರು ಮಾಸ್ತರರು.

ವಿಶ್ವನಾಥ ನಕ್ಕು ರೊಟ್ಟಿಯನ್ನು ತಿನ್ನುವುದರಲ್ಲಿ ಮನಸ್ಸನ್ನೆಲ್ಲ ತೊಡಗಿಸಿದ.

ಊಟ ಮುಗಿದ ತರುವಾಯ ಮೊದಲೇ ಗೊತ್ತುಪಡಿಸಿದ್ದ ಮೇರೆಗೆ ಗುಂಪಿ ನವರೆಲ್ಲರೂ ದೊಡ್ಡ ರಸ್ತೆಯ ಕಡೆಗೆ ಹೊರಟರು. ನಾಲ್ಕೈದು ಜನರು ಅಂಗಿಗಳ ಒಳಗಡೆ ಪಿಸ್ತೂಲುಗಳನ್ನು ಅಡಗಿಸಿಕೊಂಡಿದ್ದರು. ಮಿಕ್ಕವರು ಚೂಪುಗೊಡಲಿ ಗಳನ್ನೂ ದೊಣ್ಣೆಗಳನ್ನೂ ಹಿಡಿದುಕೊಂಡಿದ್ದರು.

ಮೂರು ನಾಲ್ಕು ಮೈಲಿಗಳವರೆಗೆ ಹೊಲಗಳಲ್ಲಿ ನಡೆದು ಅವರು ಮುಖ್ಯ ರಸ್ತೆಗೆ ಬಂದು ಸೇರಿ ಮೊದಲೇ ಗೊತ್ತುಮಾಡಿದ್ದ ಸ್ಥಳಕ್ಕೆ ಬಂದು ಕಾಯ್ದು ಕುಳಿತರು. ಬೆಳಗಾವಿಯಿಂದ ಬರುವ ಮೋಟಾರುದಾರಿ ಅಲ್ಲಿ ಹೊರಳಿ ಚಿಕ್ಕ ದೊಂದು ಸೇತುವೆಯ ಮೇಲೆ ಹಾದುಹೋಗುತ್ತಿತ್ತು. ಸುತ್ತುಮುತ್ತಲೂ

ದಟ್ಟವಾಗಿ ಬೆಳೆದ ಮಾವಿನ ಮರಗಳು. ಅವುಗಳಾಚೆ ಗಿಡಗಂಟೆಗಳಿಂದ ಕೂಡಿದ ಮರಡಿ. ಆಚೆ ಈಚೆ ಅರ್ಧ ಮೈಲಿನವರೆಗೂ ಜನ ಸುಳಿಯುವ ಹಾಗಿರಲಿಲ್ಲ. ಅಂಥ ಪ್ರದೇಶ ಅದು.

ಮೊದಲೇ ಗೊತ್ತುಪಡಿಸಿದಂತೆ ಮುದುಕ ಬಾಳಪ್ಪ ಧರಿಸಿದ್ದ ಬಟ್ಟೆ ಬರೆಗಳಲ್ಲೇ ಹೋಗಿ, ದಾರಿ ಹೊರಳುವ ಸ್ಥಳದ ಹತ್ತಿರ ಮರದ ನೆರಳಿನಲ್ಲಿ ಕುಳಿತುಕೊಂಡು, ಚಿಲುಮೆಯನ್ನು ತೆಗೆದು ತಂಬಾಕು ಹಾಕತೊಡಗಿದ. ಉಳಿದವರೆಲ್ಲ ಸುತ್ತುಮುತ್ತಲಿನ ಗಿಡಗಳ ಹಿಂದೆ ಅವಿತುಕೊಂಡು ಸಮಯ ಕಾಯ ತೊಡಗಿದರು.

ಅವರು ಬಹಳ ಹೊತ್ತು ಕಾಯುವ ಅಗತ್ಯ ಉಳಿಯಲಿಲ್ಲ, ದೂರದಿಂದ ಧೂಳು ಎದ್ದ ಹಾಗೆ ಕಾಣಿಸಿತು. ಒಂದೆರಡು ನಿಮಿಷಗಳಲ್ಲೇ ಅವರು ಆತುರ ವಾಗಿ ಕಾಯುತ್ತಿದ್ದ ವಸ್ತು—ಟಪಾಲು ಬಸ್ಸು ವೇಗವಾಗಿ ಬರುವುದು ಕಂಡು ಬಂದಿತು.

ಒಡನೆಯೆ ಶೇಖರ ಮೆಲ್ಲಗಿನದೊಂದು ಸಿಳ್ಳು ಹಾಕಿ ಗುಂಪಿನವರೆಲ್ಲ ಸಿದ್ಧವಾಗಿರುವಂತೆ ಸೂಚಿಸಿದ. ಬಾಳಪ್ಪನೂ ತಕ್ಷಣ ಎದ್ದುನಿಂತು ನಡು ದಾರಿಯಲ್ಲಿ ಬಸ್ಸು ನಿಲ್ಲಿಸುವ ಪ್ರವಾಸಿಕರ ಹಾಗೆ ಬಲಗೈಯನ್ನು ಮುಂದೆ ಮಾಡಿದ.

ವೇಗವಾಗಿ ಬರುತ್ತಿದ್ದ ಬಸ್ಸು ಹೊರಳುವ ಸ್ಥಳಕ್ಕೆ ಬಂದಾಗ ಕಿರ್‌ರ್‌ರ್‌ರ್ ಎಂದು ಸದ್ದಾಗುತ್ತಿರಲು ನಿಂತುಕೊಂಡಿತು. ಒಡನೆಯೆ ಸುತ್ತುಮುತ್ತಲಿಂದ ಗುಂಪಿನವರೆಲ್ಲ ಬಂದು ಬಸ್ಸಿನ ನಾಲ್ಕು ನಿಟ್ಟುಗಳನ್ನೂ ಆಕ್ರಮಿಸಿದರು. ಪಿಸ್ತೂಲನ್ನು ಡ್ರೈವರನ ಕಡೆಗೆ ಗುರಿಹಿಡಿದು ಶೇಖರ ಗಂಭೀರ ಸ್ವರದಲ್ಲಿ ಹೇಳಿದ: "ಆ ಟಪಾಲ ಚೀಲಗಳನ್ನೆಲ್ಲ ಕೊಟ್ಟುಬಿಡಿರಿ."

ಆಕಸ್ಮಾತ್ತಾಗಿ ಒದಗಿದ ಈ ಪ್ರಸಂಗದಿಂದ ಗಾಬರಿಯಾಗಿದ್ದ ಡ್ರೈವರು ಮರುಮಾತನಾಡದೆ ಟಪಾಲು ತುಂಬಿದ ಚೀಲಗಳನ್ನೆಲ್ಲ ಒಂದೊಂದಾಗಿ ತೆಗೆದು ಕೆಳಗಿರಿಸತೊಡಗಿದ.

ಡ್ರೈವರನ ಪಕ್ಕದ ಸ್ಥಳದಲ್ಲಿ ಸೂಟುಧಾರಿಯೊಬ್ಬ ಕುಳಿತುಕೊಂಡಿದ್ದುದು ಹಠಾತ್ತಾಗಿ ವಿಶ್ವನಾಥನ ಲಕ್ಷ್ಯಕ್ಕೆ ಬಂದಿತು. ಆತ ಪಿಸ್ತೂಲು ಹಿಡಿದುಕೊಂಡಿದ್ದ ಹಾಗೇ ಅಲ್ಲಿಗೆ ಬಂದು, ಕುಳಿತಿದ್ದ ಆಸಾಮಿಯನ್ನು ಲಕ್ಷ್ಯಗೊಟ್ಟು ನೋಡಿದ.

ಹಿಂದೆ ಎಲ್ಲೋ ಆತನನ್ನು ನೋಡಿದ್ದ ಹಾಗೆ ಭಾಸವಾಯಿತು. ವಿಶ್ವನಾಥನ ಮೆದುಳು ತ್ವರೆಯಿಂದ ಕೆಲಸ ಮಾಡತೊಡಗಿತು. ಎಲ್ಲಿ ನೋಡಿರಬಹುದು ಈತನನ್ನು ? ಕಾಲೇಜಿನಲ್ಲಿ? ಮುಂಬಯಿಯಲ್ಲಿ ?—ಛೆ! ಎಲ್ಲೋ ಪ್ರವಾಸದಲ್ಲಿ ನೋಡಿರಬಹುದು....ಒಮ್ಮಿಂದೊಮ್ಮೆಲೆ ಮಿರಜ ನಿಲ್ದಾಣದಲ್ಲಿ ನಡೆದ ಚಹದ ಪ್ರಸಂಗ ಅವನಿಗೆ ನೆನಪಾಯಿತು. ಓ! ಕೀರ್ತಿನಾಥ. ಸಿ. ಐ. ಡಿ. ಅಧಿಕಾರಿ ಕೀರ್ತಿನಾಥ....ಹೇಮಾವತಿಯನ್ನು ಮದುವೆಯಾಗುವ ಕನಸು ಕಾಣುವ ಯುವಕ! ಈ ಕಡೆಗೆ ಎಲ್ಲಿ ಹೊರಟಿರುವನೊ! ಈ ಬಸ್ಸಿನಿಂದ ಬಂದಿರುವನೆಂದ ಬಳಿಕ ಈ ಭಾಗಕ್ಕೇ ಹೊರಟದ್ದು ಸ್ಪಷ್ಟವಾಗಿದೆ. ಯಾವುದೊಂದು ವಿಶೇಷ ಕೆಲಸಕ್ಕಾಗಿಯೆ ಹೊರಟಿರುವಂತೆ ತೋರುತ್ತದೆ ಆಸಾಮಿ. ನಮ್ಮ ಗುಂಪಿನ ಜನರನ್ನು ಬಂಧನಕ್ಕೊಳಗುಮಾಡುವ ಉದ್ದೇಶವಿದ್ದರೂ ಇರಬಹುದು. ಸ್ವಲ್ಪ ತಮಾಷೆ ಮಾಡಿ ನೋಡೋಣ ಎಂದುಕೊಂಡು ಆತ “ಏನು ರಾಯ್ರೆ, ಎಲ್ಲಿಗೆ ಪ್ರಯಾಣ?” ಎಂದು ಕೇಳಿದ.

ಕೀರ್ತಿ ಮಾತನಾಡಲಿಲ್ಲ. ಸುಮ್ಮನೆ ಕುಳಿತಿದ್ದ ಹಾಗೇ ವಿಶ್ವನಾಥನನ್ನೂ ಗುಪಿನ ಇತರ ಜನರನ್ನೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದ.

ಬಸ್ಸಿನಲ್ಲಿದ್ದ ಹಲವರು ಹೆದರಿ ಬಸ್ಸಿನಿಂದ ಇಳಿದು ಓಡಿಹೋಗುವುದರಲ್ಲಿ ದ್ದರು. ಇನ್ನು ಕೆಲವರು ತಮ್ಮಲ್ಲಿದ್ದ ಹಣವನ್ನು ತೆಗೆದು ಗುಂಪಿನವರಿಗೆ ಕೊಡು ವುದಕ್ಕೂ ಬಂದರು. ಅನೇಕರು ಪ್ರಾಣಭಯದಿಂದ ನಡುಗುತ್ತಿದ್ದುದೂ ಕಂಡು ಬಂದಿತು. ಅದನ್ನು ನಿರೀಕ್ಷಿಸುತ್ತಿದ್ದ ಶೇಖರ “ನೀವ್ಯಾರೂ ಇಳೀಬ್ಯಾಡ್ರಿ ಮೋಟಾರಿನಿಂದ. ನಿಮಗೆ ನಾವು ಕೈಹಚ್ಚುವುದಿಲ್ಲ. ಈ ಟಪಾಲು ಸರಕಾರೀ ಸಾಮಾನು. ಅದನ್ನು ಮಾತ್ರ ತಗೊಂಡು ಹೋಗ್ತೇವೆ. ಯಾರೂ ಹೆದರಬ್ಯಾಡ್ರಿ. ನಾವೂ ನಿಮ್ಮವರೇ” ಎಂದು ಕೂಗಿ ಹೇಳಿದ. ಅನಂತರ ಡ್ರೈವರನ ಕಡೆಗೆ ತಿರುಗಿ “ಹೂಂ. ಇನ್ನು ಹೊರಡ್ರಿ ನೀವು!” ಎಂದ. ಬಸ್ಸು ಹೊರಟುಬಿಟ್ಟಿತು.

“ಅಂತೂ ಗಾಂಧೀ ಜಯಂತಿಯನ್ನ ಜೋರಾಗಿ ಆಚರಿಸಿದಂತಾಯ್ತು, ಶೇಖರಣ್ಣ! ಟಪಾಲು ಲೂಟಿ ಆಗೋದು ಇದೇ ಮೊದಲು ಸಾರಿ ನೋಡು ಕರ್ನಾಟಕದೊಳಗ. ನಾಳೆ ನಾಡದ್ದು ಈ ಸುದ್ದಿ ಪತ್ರಿಕೆಯೊಳಗ ಬಂತು ಅಂದರ ಆಮ್ಯಾಲ ಎಲ್ಲಾ ಕಡೆಗೂ ಲೂಟಿ ಸುರು ಆಗತೈತಿ....” ಎಂದರು ಮಾಸ್ತರರು.

ಕೆಲಸ ಯಶಸ್ವಿಯಾಗಿ ಕೊನೆಗೊಂಡದ್ದರಿಂದಾಗಿ ಆ ಸರಲ ಜೀವಿಗಳಿಗೆಲ್ಲ ತುಂಬಾ ಸಂತೋಷವಾಗಿದ್ದಿತು. ಯಾವ ಗಲಾಟೆಯೂ ಇಲ್ಲದೆ, ಕೊಂಚವೂ ಹಿಂಸೆಯಿಲ್ಲದೆ ಸುಲಭವಾಗಿ ಸಾಧಿಸಿತ್ತು ಆ ಕಾರ್ಯ! ಉತ್ಸಾಹದಿಂದ ಅವರೆಲ್ಲರೂ ಕಿರುಬನ ಕೊಳ್ಳದ ಕಡೆಗೆ ಹೊರಟರು.

"ಫ್ರಂಟ್‌ಸೀಟಿನೊಳಗ ಒಬ್ಬ ಸಿ. ಐ. ಡಿ. ಕೂತಿದ್ದ. ನೀ ನೋಡ್ಲಿಲ್ಲೇನು ಶೇಖರಣ್ಣ!" ಎಂದ ವಿಶ್ವನಾಥ.

"ಸೂಟು ಹ್ಯಾಟು ಹಾಕಿದವರೊಬ್ಬರು ಕೂತಿದ್ದ ಹಾಂಗ ಕಾಣಿಸಿತು. ಫ್ರಂಟ್‌ಸೀಟ್ ಯಾವಾಗಲೂ ಅಂಥವರಿಗೆ ರಿಜರ್ವ್ ಆಗುವದು ಗೊತ್ತಿದ್ದಕಿಂದ ಯಾರಾದರೂ ಇದ್ದಾರು ಅಂತ ನಾ ಅಲಕ್ಷ್ಯ ಮಾಡಿದೆ. ಸಿ. ಐ. ಡಿ. ಏನು ಅವ?"

"ಹೌದು. ಸಿ. ಐ. ಡಿ. ಆಫೀಸರ್. ಹಿಂದೊಮ್ಮೆ ನಾ ನೋಡಿದ್ದೆ ಅವನ್ನ. ನಮ್ಮ ಹೇಮಾವತಿಯನ್ನ ಮದುವೆಯಾಗಬೇಕಂತ ಹಂಬಲಿಸ್ತಾ ಇದಾನ ಆಸಾಮಿ."

"ಓಹ್ಹೋ! ಹೀಗೇನು? ಈ ಕಡೆ ಯಾಕ ಹೊರಟಾನೊ!"

"ಸುಮ್ಮನೆ ಹೊರಡೂ ಆಸಾಮಿಯು ಹಾಗೆ ಕಾಣಿಸುವದಿಲ್ಲ ಅವ. ಏನಾದರೂ ಹೊಂಚು ಇರಾಕs ಬೇಕು. ನಮ್ಮ ಗುಂಪನ್ನ ಪತ್ತೆ ಮಾಡುವದಕ್ಕೆ ಒಬ್ಬ ಸ್ಪೆಷಲ್ ಆಫೀಸರನ್ನ ನೇಮಿಸುತಾರಂತ ಸುದ್ದಿಯಿತ್ತು ಬೆಳಗಾವಿಯೊಳಗ. ಇವನೇ ಇರಬಹುದೋ ಏನೋ ಅವ...."

"ಇದ್ದರೂ ಇರಬಹುದು. ಬರಲಿ ಆಸಾಮಿ ನಮ್ಮನ್ನ ತಡವಲಿಕ್ಕೆ!" ಎಂದ ಶೇಖರ.

ಆ ದಿನ ಗುಂಪಿನವರೆಲ್ಲ ಕೂಡಿ ಆ ಕೊಳ್ಳದಲ್ಲಿಯೆ ಗಾಂಧೀಜಯಂತಿಯನ್ನಾಚರಿಸಿದರು. ಲೂಟಿ ಮಾಡಿ ತಂದ ಅಂಚೆಯನ್ನೊಡೆದು ಅದರಲ್ಲಿದ್ದ ಸರಕಾರೀ ಕಾಗದಪತ್ರಗಳನ್ನೆಲ್ಲ ಸುಟ್ಟುಬಿಟ್ಟರು. ಸಾರ್ವಜನಿಕರ ಪತ್ರಗಳನ್ನೆಲ್ಲ ಒಂದು ಚೀಲದಲ್ಲಿ ಕಟ್ಟಿ ರಾತ್ರಿಕಾಲದಲ್ಲಿ ತಾಲೂಕಿನ ಸ್ಥಳದಲ್ಲಿರುವ ಅಂಚೆ ಕಚೇರಿಯ ಕಟ್ಟೆಯ ಮೇಲೆ ಇಟ್ಟುಬರುವುದೆಂದು ಗೊತ್ತುಮಾಡಿ ಅದಕ್ಕಾಗಿ ಒಬ್ಬನನ್ನು ನಿಯಮಿಸಿದರು. ಅನಂತರ ಎಲ್ಲರೂ ಗುಡಿಯೊಳಗಡೆ ಸಭೆ ಸೇರಿ

ಗಾಂಧೀಜಿಯವರ ಹೆಸರು ಹೇಳಿ ಮತ್ತೊಂದು ಸಲ "ಮಾಡುವೆವು-ಇಲ್ಲ-
ಮಡಿಯುವೆವು" ಎಂಬುದಾಗಿ ಪ್ರತಿಜ್ಞೆ ಸ್ವೀಕರಿಸಿದರು.

ಸಾಯಂಕಾಲದ ಊಟವಾದನಂತರ ವಿಶ್ವನಾಥ ಗರ್ಭಗುಡಿಯಲ್ಲಿದ್ದ
ಕಾಗದ, ಕಾರ್ಬನ್, ಪೆನ್ಸಿಲ್ ಇತ್ಯಾದಿ ಸಾಮಗ್ರಿಗಳನ್ನು ತೆಗೆದುಕೊಂಡು
ಕರಪತ್ರಗಳನ್ನು ಬರೆಯುವ ಕಾರ್ಯಕ್ಕೆ ತೊಡಗಿದ. ತಾವು ಅಂದು ಆಚರಿಸಿದ
ಗಾಂಧೀಜಯಂತಿಯ ವೈಶಿಷ್ಟ್ಯವನ್ನೆಲ್ಲ ಚಿತ್ರಿಸಿ, ಅದೇ ರೀತಿ ಕರ್ನಾಟಕದ
ಜನರೆಲ್ಲ ಆಚರಿಸಬೇಕೆಂದು ಕರೆ ಕೊಡಬೇಕಾಗಿದ್ದಿತು. ವಾರಕ್ಕೊಂದು ಸಲ
ಕರಪತ್ರ ಹೊರಡಿಸುವುದು ಅವನ ಪಾಲಿನ ಕೆಲಸವಾಗಿದ್ದಿತು. ನೂರಾರು ಪ್ರತಿ
ಗಳನ್ನು ತೆಗೆದು ಅವುಗಳನ್ನು ಅಂಚೆಗೆ ಹಾಕುವ ಹಾಗೂ ಹಂಚುವ ಏರ್ಪಾಡು
ಮಾಡಿ, ಅನಂತರ ವಿರಮಿಸಬೇಕಾಗುತ್ತಿದ್ದಿತು. ಕೈಯಿಂದ ಪ್ರತಿಗಳನ್ನು
ತೆಗೆಯುವುದು ತೀರ ತೊಂದರೆಯ ಕೆಲಸವಾದುದರಿಂದಲೂ,ಆದಕ್ಕಾಗಿ ಸಮಯವೂ
ಹೆಚ್ಚಾಗಿ ವ್ಯಯವಾಗುತ್ತಿದ್ದುದರಿಂದಲೂ ಸಾಧ್ಯವಿದ್ದಷ್ಟು ಬೇಗ ಒಂದು ಅನು
ಕೂಲವಾದ ತಾಣವನ್ನು ಹುಡುಕಿ ಕರಪತ್ರಗಳಿಗಾಗಿ ಒಂದು ಪುಟ್ಟ ಕಾರ್ಯಾ
ಲಯವನ್ನೇ ಏರ್ಪಡಿಸಬೇಕಾಗಿದ್ದಿತು. ಆಮೇಲೆ ಸೈಕ್ಲೊಸ್ಟೈಲ್ ಯಂತ್ರವನ್ನು
ಅಲ್ಲಿಗೆ ತಂದು, ಹೇಮಾವತಿಯನ್ನು ಕರೆದು ತರಬಹುದಾಗಿದ್ದಿತು. ಅದುವರೆಗೆ
ವಿಶ್ವನಾಥನೊಬ್ಬನೇ ರಾತ್ರಿಯೆಲ್ಲ ಕುಳಿತು ಕಾರ್ಬನ್ನಿನಿಂದ ಪ್ರತಿಗಳನ್ನು ತೆಗೆಯ
ಬೇಕಾಗಿದ್ದಿತು. ಬೇಸರು ಬರಿಸುವ ಕೆಲಸವಾದರೂ ಆತ ಕೊಂಚವೂ ಗೊಣಗದೆ
ತನ್ನ ಕರ್ತವ್ಯವನ್ನು ಸಂತೋಷದಿಂದ ನೆರವೇರಿಸುತ್ತಿದ್ದ.

ಆ ದಿನ ರಾತ್ರಿ ಇನ್ನೊಂದು ಕೆಲಸವನ್ನು ಮಾಡಿ ಮುಗಿಸಬೇಕೆಂದು
ಮೊದಲೇ ನಿರ್ಧರಿಸಲಾಗಿದ್ದಿತು. ಗುಂಪಿನವರು ಹೊರಡುವ ಸಿದ್ಧತೆಗೆ ತೊಡಗಿ
ದರು. ಶೇಖರ ಅಂದು ಹೇಮಾವತಿಯ ಮನೆಯಲ್ಲಿ ಧರಿಸಿದ ಪೋಲೀಸ್ ಅಧಿ
ಕಾರಿಯ ವೇಷ ಹಾಕಿಕೊಂಡು ಕೈಯಲ್ಲಿ ಉದ್ದವಾದ ಟಾರ್ಚ್ ಹಿಡಿದುಕೊಂಡು
ಸಿದ್ಧನಾದ. ಮುದುಕ ಬಾಳಪ್ಪ ಎಂದಿನಂತೆ ಕೇಂದ್ರದ ಕಾವಲಿಗೆ ಕುಳಿತ.
ಉಳಿಕ್ಕವರೆಲ್ಲ ಹೊರಟು ನಡೆದರು.

ಕೊಳ್ಳದ ಸೀಮೆಯನ್ನು ದಾಟಿ ಹೊಲಗಳಲ್ಲಿ ಹಾಯ್ದು, ಅವರು ನಾಲ್ಕೈದು
ಮೈಲು ದಾರಿ ನಡೆದು, ಮುಖ್ಯ ರಸ್ತೆಗೆ ಬಂದು ಸೇರುವುದರೊಳಗಾಗಿ ಮಧ್ಯ

ರಾತ್ರಿಯಾಗುತ್ತ ಬಂದಿತ್ತು. ಅಲ್ಲಿಂದ ಅರ್ಧ ಮೈಲು ಪಶ್ಚಿಮಕ್ಕೆ ಸಾಗಿ ಒಂದು ಸೇತುವೆಯ ಹತ್ತಿರ ತಡೆದು ನಿಂತರು.

"ಬಂಗಲೆ ಸಮೀಪಿಸಿದ ಹಾಂಗಾಯ್ತು. ನೀವೆಲ್ಲಾ ಇಲ್ಲೇ ಇರ್ರಿ. ನಾ ಒಬ್ಬನೇ ಮೊದಲು ಹೋಗಿ ಯಾರಾದರೂ ಇದ್ದಾರೋ ಹ್ಯಾಂಗ ನೋಡತೀನಿ. ಯಾರೂ ಇರದಿದ್ದರ ಹಸಿರು ಬಣ್ಣದ ಬೆಳಕು ಬಿಡುತ್ತೇನೆ. ಆಗ ನೀವು ಬರಬೇಕು. ಇಲ್ಲದಿದ್ದರ ಇಲ್ಲೇ ಇರಬೇಕು. ತಿಳೀತೇನು?" ಎಂದು ಹೇಳಿ, ಶೇಖರ ಎದುರಿಗೆ ಹೊರಳಿದ್ದ ಪುಟ್ಟ ದಾರಿಯಲ್ಲಿ ಮುಂದೆ ಸಾಗಿದ.

ಮಧ್ಯರಾತ್ರಿ ಮೀರಿದೆ. ಕಾರ್ಮೋಡಗಳಿಂದ ಗಾಢಾಂಧಕಾರ ಕವಿದು ಕೊಂಡಿದ್ದಿತು. ತಾರೆಗಳ ಮಂದ ಪ್ರಕಾಶವೂ ಕಾಣದಂತಾಗಿದ್ದಿತು. ಟಾರ್ಚ್ ಬೇರೆ ಬಿಡುವಂತಿಲ್ಲ. ಎದುರಿಗೆ ಯಾವುದೂ ಸ್ಪಷ್ಟವಾಗಿ ಕಾಣಿಸುವಂತಿರಲಿಲ್ಲ. ಆದರೂ ರಾತ್ರಿ ಕಾಲದಲ್ಲಿ ನಡೆಯುವ ಅಭ್ಯಾಸಬಲದಿಂದಾಗಿ ಶೇಖರ ಹೇಗೋ ಆ ಪ್ರವಾಸಿಕರ ಬಂಗಲೆಯವರೆಗೂ ನಡೆದು ಬಂದ. ಕೊಂಚ ಕಾಲ ಹೊರಗಡೆ ಬೀದಿಯ ಮೇಲೆಯೆ ನಿಂತುಕೊಂಡು ಬಂಗಲೆಯ ಕಡೆಗೆ ದೃಷ್ಟಿ ತೂರಿದ. ಒಳಗೂ ಗಾಢಾಂಧಕಾರ ಕವಿದುಕೊಂಡಿತ್ತು. ಯಾರೂ ಇರಲಿಕ್ಕಿಲ್ಲವೆಂದು ಮನವರಿಕೆ ಯಾಗುತ್ತಲೂ ಟಾರ್ಚ್‌ನ ಗುಂಡಿ ಒತ್ತಿದ. ಝಗ್ಗನೆ ಸುರಿದ ಬೆಳಕಿನಲ್ಲಿ ಬಂಗಲೆಯ ಹೊರಭಾಗವೆಲ್ಲ ಅವನ ದೃಷ್ಟಿಗೆ ಬಿತ್ತು. ಬಾಗಿಲಿನ ಬಳಿ ಇಬ್ಬರು ಪೋಲೀಸರು ಬಂದೂಕು ಹಿಡಿದುಕೊಂಡು ಕಾವಲು ಮಾಡುತ್ತಿದ್ದುದೂ, ಪಡಸಾಲೆಯಲ್ಲಿ ಇಬ್ಬರು ಫೌಜದಾರರು ಕುಳಿತುಕೊಂಡಿದ್ದುದೂ ಕಂಡುಬಂದಾಗ ಒಂದು ಕ್ಷಣ ಅವನ ಮೆದುಳಿಗೆ ಯಾವುದೂ ಹೊಳೆಯಲಿಲ್ಲ. ಬಂಗಲೆಯಲ್ಲಿ ಯಾರೂ ಇಲ್ಲವೆಂದು ನಂಬಿಕೊಂಡು ಆತ ಟಾರ್ಚ್‌ನ ಬೆಳಕು ಬಿಟ್ಟಿದ್ದ, ಆ ಬೆಳಕಿನಲ್ಲಿಯೆ ಅವನ ವೇಷವೂ ಅಸ್ಪಷ್ಟವಾಗಿಯಾದರೂ ಗೋಚರವಾಗುತ್ತಿದ್ದಿತು. ಇನ್ನೇನು ಮಾಡುವುದು ಎಂದು ಆತ ಯೋಚಿಸುತ್ತಿರುವಷ್ಟರಲ್ಲಿಯೇ ಕಾವಲುಗಾರರ "Who comes there?" ಎಂಬ ಗುಡುಗು ಕೇಳಬಂದಿತು.

ಶೇಖರನ ಚುರುಕು ಬುದ್ಧಿ ತಕ್ಷಣ ಉಪಾಯವೊಂದನ್ನು ಹುಡುಕಿತು. ಟಾರ್ಚ್‌ನ ಬೆಳಕನ್ನು ಆರಿಸಿ ಆತ ಹಿಂದುಸ್ಥಾನಿಯಲ್ಲಿ ಕೂಗಿ ಹೇಳಿದ.

"ನಾನು ಸಿ. ಐ. ಡಿ. ಆಫೀಸರ್ ಇದ್ದೇನೆ. ಇಲ್ಲೇ ಹತ್ತಿರದಲ್ಲಿ ಶೇಖರಪ್ಪನ ಗ್ಯಾಂಗ್ ಕೆಲಸದಲ್ಲಿ ತೊಡಗಿದೆ. ಸ್ವಲ್ಪ ಉಪಾಯವಾಗಿ ನಾವು ಅವರನ್ನು

ಮುತ್ತಿದರೆ ಎಲ್ಲರೂ ಸಿಕ್ಕಬಿಡಬಹುದು. ನಾನು ಹೋಗಿ ಸಿಳ್ಳು ಹಾಕುತ್ತೇನೆ. ಆಗ ನೀವೆಲ್ಲರೂ ಬರಬೇಕು. ತಯಾರಾಗಿರ್ರಿ!" ಎಂದು ದರ್ಪದ ಧ್ವನಿಯಲ್ಲಿ ನುಡಿದವನೇ ಅಲ್ಲಿಂದ ತಿರುಗಿದ. "ಅಚ್ಛಾ ಸಾಬ್" ಎಂದು ಫೌಜದಾರರಿಬ್ಬರೂ ಕೂಗಿ ಹೇಳಿದುದು ಕೇಳಿಸಿದಾಗ ಅವನಿಗೆ ಮನಸ್ಸಿನಲ್ಲಿಯೇ ನಗು ಬರದಿರಲಿಲ್ಲ. ಬಲೆಯಲ್ಲಿ ಬೀಳುವುದರಲ್ಲಿದ್ದಾಗ ತನ್ನನ್ನು ಉಳಿಸಿದ ದೈವವನ್ನು ನೆನೆಯುತ್ತ ವೇಗವಾಗಿ ಓಡಿ ಗುಂಪಿನ ಬಳಿ ಬಂದ. ನಡೆದುದನ್ನೆಲ್ಲ ಸ್ವಲ್ಪದರಲ್ಲಿಯೆ ವಿವರಿಸಿ, "ಒಬ್ಬೊಬ್ಬರು ಒಂದೊಂದು ಹಾದಿಯಿಂದ ಓಡಿ ಆದಷ್ಟು ಲಗೂ ಕೊಳ್ಳಾ ಸೇರ ಬೇಕು. ಈಗೇನೋ ಅವರು ಮೋಸಹೋದರು. ಆದರ ಸ್ವಲ್ಪ ಹೊತ್ತಿನಾಗ ಎಲ್ಲಾ ಗೊತ್ತಾಗಬಹುದು. ಹೂಂ, ಓಡ್ರಿ" ಎಂದು ಹೇಳಿದ. ಒಡನೆಯೆ ಗುಂಪಿನವರೆಲ್ಲ ಅತ್ತ ಇತ್ತ ಚದರಿ ಕತ್ತಲಲ್ಲಿ ಮಾಯವಾದರು.

ಶೇಖರ ಊಹಿಸಿಕೊಂಡ ಹಾಗೇ ಆಯಿತು. "ಅಚ್ಛಾ ಸಾಬ್" ಎಂದು ಹೇಳಿ ಚಳವಳಿಗಾರರನ್ನು ಹಿಡಿದು ತರಲು ಸಿದ್ಧವಾಗಿ ಕುಳಿತ ಫೌಜದಾರರಿಗೆ ನಾಲ್ಕೈದು ನಿಮಿಷಗಳಲ್ಲಿಯೆ ಸಂದೇಹ ಹುಟ್ಟದಿರಲಿಲ್ಲ.

"ಯಾರ್ರೀ ಅವರು? ಒಳಗೆ ಕೂಡಾ ಬರದೆ ಹಾಂಗ ಹೋದರಲ್ಲ?" ಎಂದು ಅವರಲ್ಲಿ ಒಬ್ಬರು ಪ್ರಶ್ನೆ ಮಾಡಿದರು.

"ನಾನೂ ಅದೇ ವಿಚಾರ ಮಾಡ್ತಾ ಇದ್ದೆ. ಅಲ್ಲದೆ, ಒಬ್ಬರೇ ಇದ್ದ ಹಾಂಗಿತ್ತು. ಜತೆಗೆ ಯಾರೂ ಇರಲಿಲ್ಲ. ಯಾವಾಗಲೂ ಇಬ್ಬರು ಮೂವರು ಪೋಲೀಸರಿರ್ತಾರಲ್ಲ ಅವರ ಸಂಗಡ? ಇಂಥ ರಾತ್ರಿಯೊಳಗ ಒಬ್ಬರೇ ಹೊರಡ ಬೇಕಾದರೆ?—ಅದೂ ಪಿಸ್ತೂಲು ಬಂದೂಕು ಹಿಡಿದು ತಿರುಗುವ ಚಳವಳಿಗಾರರ ಸೀಮೆಯೊಳಗ ಬರಬೇಕಾದರೆ ಬಹಳ ಧೈರ್ಯ ಇರಬೇಕು...."

"ಒಬ್ಬರೇ ಬಂದಿರಬಹುದು ಅಂತ ತಿಳಿದರೂ ಇಲ್ಲಿಂದ ಹೋಗುವಾಗ ಆದರೂ ಯಾರನ್ನಾದರೂ ಕರೆದೊಯ್ಯಬಹುದಾಗಿತ್ತಲ್ಲ? ಒಬ್ಬರೇ ಯಾಕೆ ಹೋದರೋ....!"

ಹಠಾತ್ತಾಗಿ ಅವರಲ್ಲೊಬ್ಬರಿಗೆ ಹೊಸ ವಿಚಾರವೊಂದು ಹೊಳೆಯಿತು. ಅವರು ತಕ್ಷಣ ಮೇಲಕ್ಕೆದ್ದು–"ಛೆ! ನಾವು ಮೋಸಹೋದೆವು. ಅವ ಸಿ. ಐ. ಡಿ. ಅಲ್ಲವೇ ಅಲ್ಲ. ಸಿ.ಐ.ಡಿ.ಗಳೆಂದಾದರೂ ಇಂಥಾ ರಾತ್ರಿ ಒಬ್ಬರೇ ತಿರುಗಾಡುವಾಗ ಪೋಲೀಸ್ ಡ್ರೆಸ್ ಹಾಕ್ತಾರೇನು? ಅದು ಆ ಶೇಖರನ ಕೆಲಸವೇ ಇರಬೇಕು.

ಬಂಗ್ಲೆ ಸುಡುವ ಪ್ಲ್ಯಾನ್ ಮಾಡಿ ಬಂದಂಗ ಕಾಣಿಸುತ್ತೈತಿ. ಆಗಲೇ ಹೋಗೇಲಿಲ್ಲ. ವಲ್ಲ ಈ ವಿಷಯ ನನಗೆ!" ಎನ್ನುತ್ತ ಒಳಗಡೆ ವಿರಮಿಸುತ್ತಿದ್ದ ಪೋಲೀಸರಿಗೆಲ್ಲ ಆಜ್ಞೆಗಳನ್ನು ಕೂಗಿದರು.

ಒಂದು ಗಂಟೆಯುವರೆಗೆ ಇಪ್ಪತ್ತೈದು ಜನ ಪೋಲೀಸರು ಸುತ್ತುಮುತ್ತಲಿನ ಪ್ರದೇಶಗಳನ್ನೆಲ್ಲ ಟಾರ್ಚ್‌ನ ಬೆಳಕಿನಲ್ಲಿ ಸುತ್ತಿದ್ದಾಯಿತು.

ಬೇಟಿ ಕೈಗೆ ಸಿಕ್ಕುವುದು ಸಾಧ್ಯವಿರಲಿಲ್ಲ; ಅಷ್ಟು ಹೊತ್ತಿಗಾಗಲೆ ಅದು ತನ್ನ ಗವಿಯನ್ನು ಸಮೀಪಿಸುತ್ತಿದ್ದಿತು.

೧೬

ಮಧ್ಯಾಹ್ನದ ಊಟ ಆಗತಾನೆ ಮುಗಿದಿತ್ತು. ಬಾಬಾಸಾಹೇಬ ದೇಸಾಯಿಯುವರು ತಮ್ಮ ಮಲಗುವ ಕೋಣೆಯಲ್ಲಿ ಮಂಚದ ಮೇಲೆ ಪವಡಿಸಿದ್ದರು.

"ಯಾರೋ ಒಬ್ಬರು ಸಾಹೇಬ್ರು ಬಂದಾರ್ರಿ, ಧಣೇರ" ಎಂದು ಆಳು ಬಂದು ಹೇಳಿದಾಗ ದೇಸಾಯಿಯುವರು ಬೆಚ್ಚಿಬಿದ್ದು ಮೇಲಕ್ಕೆದ್ದರು. 'ಸಾಹೇಬರು' ಅವರ ಮನೆಗೆ ಬಂದು ಬಹಳ ದಿನ ಕಳೆದುಹೋಗಿದ್ದುವು. ಈಗ ಅಕಸ್ಮಾತ್ತಾಗಿ ಯಾರು ಬಂದರೊ, ಯಾವ ನಿಮಿತ್ತವಾಗಿ ಬಂದರೋ ಎಂದು ಯೋಚಿಸುತ್ತ ಮೆಟ್ಟಲುಗಳನ್ನಿಳಿದು ಕೆಳಗಡೆ ಬಂದರು.

ಹೊರಗಡೆ ಸೂಟುಧಾರಿ ಯುವಕನೊಬ್ಬ ಇಬ್ಬರು ಪೋಲೀಸರೊಂದಿಗೆ ನಿಂತುಕೊಂಡಿದ್ದುದು ಕಾಣಿಸಿತು. ದೇಸಾಯಿಯುವರು ಈ ಮೊದಲು ಅವನನ್ನು ನೋಡಿರಲಿಲ್ಲವಾದ್ದರಿಂದ ಕೊಂಚ ಗೊಂದಲದಲ್ಲಿ ಬಿದ್ದರು. ಜತೆಗೆ ಪೋಲೀಸಿನವರು ಬೇರೆ ಬಂದಿದ್ದುದರಿಂದ ಅವರ ಗೊಂದಲ ಇನ್ನೂ ಹೆಚ್ಚಿತು.

"ಬರ್ರಿ, ಬರ್ರಿ. ಯಾವೂರಿನಿಂದ ಬಂದಿರಿ?" ಎನ್ನುತ್ತಾ ಅವರನ್ನು ಸ್ವಾಗತಿಸುತ್ತಾ ಪಡಸಾಲೆಯಲ್ಲಿ ಕೂಡ್ರಿಸಿದರು.

ಬಂದಿದ್ದವ ಕೀರ್ತಿನಾಥ. ದೇಸಾಯರನ್ನು ಸೂಕ್ಷ್ಮವಾಗಿ ನಿರುಕಿಸುತ್ತ ಆತನೆಂದ: "ತಾಲೂಕಿನ ಸ್ಥಳದಿಂದ ಬಂದೆ. ನಿಮ್ಮ ಹತ್ತಿರ ಸ್ವಲ್ಪ ಮಾತಾಡುವದಿತ್ತು. ಅದಕ್ಕಾಗಿ ಬರಬೇಕಾಯ್ತು."

"ನೀವು ಯಾವ ಖಾತೆಯವರು? ಪೋಲೀಸು ಖಾತೆಯವರೋ?"

"ಹೌದು. ಸಿ. ಐ. ಡಿ. ಆಫೀಸರ್ ನಾನು."

"ಓಹ್ಹೊ ! ಹೀಂಗೊ? ಏಳ್ರಿ, ಊಟ ಮಾಡೇಳ್ರಿ" ಎಂದರು ದೇಸಾಯಿ.

ಅವರೆಲ್ಲರ ಊಟವಾದನಂತರ ಕೀರ್ತಿನಾಥ ದೇಸಾಯಿಯವರ ಮಹಡಿಯ ಮೇಲೆ ಕೊಟಡಿಯಲ್ಲಿ ವಿರಮಿಸಿದ್ದ ಹಾಗೆ ಮಾತಿಗಾರಂಭಿಸಿದ.

"ನಾನು ನಾಲ್ಕೈದು ಪ್ರಶ್ನೆ ಕೇಳಬೇಕಂತ ಬಂದಿದ್ದೇನೆ, ನಿಮಗೆ ಸಂಬಂಧ ಪಟ್ಟ ಸಂಗತಿಯೊಂದರ ಬಗ್ಗೆ."

"ನನಗೆ ?" ಎಂದರು ದೇಸಾಯರು ವಿಸ್ಮಯದಿಂದ.

"ಹೌದು. ನಿಮಗೇ ಸಂಬಂಧಪಟ್ಟವು. ನಿಮ್ಮ ಮಗ ವಿಶ್ವನಾಥನ ಸಂಗತಿ ಅದು...."

ಯಾವ ಪ್ರಶ್ನೆಯನ್ನು ಎದುರಿಸಲಾರದೆ ದೇಸಾಯಿಯವರು ದಿಗಿಲು ಗೊಂಡಿದ್ದರೋ, ಅದೇ ಪ್ರಶ್ನೆ ಹಠಾತ್ತಾಗಿ ಎದುರಿಗೆ ಬಂದಿತ್ತು!

"ಅವರು ಎಲ್ಲಿದ್ದಾರೆ, ಏನು ಮಾಡುತ್ತಿದ್ದಾರೆ, ನಿಮಗೇನಾದರೂ ಗೊತ್ತಿದೆಯೊ ?"

"ಇಲ್ಲ, ನನಗೂ ಅವನಿಗೂ ಭೆಟ್ಟಿಯೇ ಇಲ್ಲ."

"ಅವರು ಪುಣೆಯಿಂದ ಬಂದಮ್ಯಾಲ ನಿಮಗೆ ಭೆಟ್ಟಿ ಆಗಿಲ್ಲವೇ ?"

"ಇಲ್ಲ. ಮನೆಗೇ ಬಂದಿಲ್ಲ ಅವ."

ಕ್ಷಣಕಾಲ ಮೌನವಾಗಿದ್ದು ಕೀರ್ತಿನಾಥ ಕೇಳಿದ ;

"ಅವರೆಲ್ಲಿದಾರೆ ಅನ್ನೋದನ್ನ ತಿಳಿದುಕೊಳ್ಳುವ ಪ್ರಯತ್ನ ಆದರೂ ಮಾಡಿದಿರಾ ?"

"ಮಾಡಿದೆ. ಏನೂ ಗೊತ್ತಾಗಲಿಲ್ಲ."

"ಅವರು ಚಳವಳಿಯ ಜನರ ಸಂಗಡ ಸೇರಿದಾರ. ಅವರ ಮ್ಯಾಲ ವಾರಂಟೂ ಅದ. ನಾಲ್ಕೈದು ಕೇಸಿನೊಳಗ ಅವರ ಹೆಸರು ಅದ."

"ಸ್ವಲ್ಪ ಸ್ವಲ್ಪ ಸುದ್ದಿ ತಿಳಿದಿತ್ತು. ಏನ್ಮಾಡೂದು? ಈಗಿನ ಕಾಲದ ಹುಡುಗರು. ಹಿರಿಯರ ಮಾತು ಕೇಳೂ ಹಾಂಗಿಲ್ಲ ಏನಿಲ್ಲ" ಎಂದು ವಿಷಾದ ದಿಂದ ನುಡಿದರು ದೇಸಾಯರು.

"ಅದು ಸರಿ ದೇಸಾಯರು. ಆದರು ಸರಕಾರದ ಸಂಗಡ ನಿಮಗಿರುವ ಋಣಾನುಸಂಬಂಧದ ವಿಚಾರ ಮಾಡಿದರ, ನಿಮ್ಮ ಮಗ ಮಾಡ್ತಾ ಇರೂದು

ನಿಮ್ಮ ಮನೆತನಕ್ಕೇ ಕೆಟ್ಟದು. ಕಲೆಕ್ಟರ್ ಸಾಹೇಬರು, ಕಮಿಶನರ್ ಸಾಹೇಬರು ಎಲ್ಲರೂ ನಿಮ್ಮ ಮ್ಯಾಲ ಬಹಳ ಪ್ರೀತಿಯಿಂದ ಇದಾರ."

"ನನಗೂ ಬಹಳ ಕೆಟ್ಟ ಅನಿಸ್ತದ. ಆದರ ಈಗ ಏನ್ಮಾಡೂದು ಸಾಹೇಬರ! ಅವನ್ನ ಕಾಲೇಜಿಗೆ ಕಳಿಸಿ ಹೀಂಗಾತೋ ಏನೊ...."

"ಕಾಲೇಜೇನು ಮಾಡೀತು ದೇಸಾಯರ! ನಾವೂ ಕಾಲೇಜಿನಾಗ ಕಲಿತಿಲ್ಲೇನು? ಮುಖ್ಯ–ಸಹವಾಸ ನೆಟ್ಟಗಿರಬೇಕು. ಅದೂ ತರುಣ ವಯಸ್ಸಿನೊಳಗ ಕೆಟ್ಟ ಸಹವಾಸ ಆಯ್ತು ಅಂದರ ಬಹಳ ಕಷ್ಟ. ಮನೆತನದ ಸರ್ವನಾಶ ಆದ ಹಾಂಗ ಅನ್ನಿ!"

"ನೀವನ್ನೂದೂ ನಿಜ ಸಾಹೇಬರ. ಯಾರ ಸಂಗಡ ಇದಾನ ನಮ್ಮ ಹುಡುಗ?"

"ಇಲ್ಲೇ ಸಮೀಪದೊಳಗ ಕಲ್ಲಾಪುರ ಅಂತ ಹಳ್ಳಿ ಅದ ಅಲ್ಲ–ಅಲ್ಲಿ ಶೇಖರಪ್ಪ ಅಂತ ಇದಾನ ಒಬ್ಬ ಕಾಂಗ್ರೆಸ್ ಕಾರ್ಯಕರ್ತ. ಅವನದೊಂದು ಗುಂಪೂ ಅದ. ಇಪ್ಪತ್ತು ಮೂವತ್ತು ಮಂದಿ ಇದಾರ. ಅವರ ಸಂಗಡ ನಿಮ್ಮ ಮಗ ಸೇರಿದ್ದಾರ...."

ಕಲ್ಲಾಪುರದ ಗುಂಪು! ಶೇಖರಪ್ಪ! ಆತನೇನೂ ದೇಸಾಯಿಯವರಿಗೆ ಅಪರಿಚಿತನಾಗಿರಲಿಲ್ಲ. ತಮ್ಮ ಹೊಲವನ್ನು ಲಾವಣಿಗೆ ಮಾಡುತ್ತಿರುವ ರೈತ ಲಿಂಗಣ್ಣನ ತಮ್ಮ ಆತ. ತಮ್ಮ ರೈತನೇ. ಅವನ ಗುಂಪಿನೊಂದಿಗೆ ವಿಶ್ವನಾಥ ಸೇರಿದನೇ ಹಾಗಾದರೆ! ಅವರು ವಿಸ್ಮಯದಿಂದ ಕೇಳಿದರು:

"ಏನೇನು ಕೆಲಸ ನಡಸಿದ್ದಾರ ಅವರು?"

"ಅವರದೊಂದು ಕಾರ್ಯಕ್ರಮ ಇದ್ದಾಂಗ ಅದ. ದಫ್ತರ್ ಸುಡೂದು, ಪೂಲು ಕೆಡವೂದು, ಬಂಗಲೆ ಸುಡೂದು, ತಾರ ತಂತೀ ಕಂಭ ಕತ್ತರಿಸೂದು— ಹೀಂಗ ಪುಂಡತನದ ಕೆಲಸ. ಮೊನ್ನೆ ಟಪಾಲು ಮೋಟರು ತರುಬಿ ಲೂಟಿ ಮಾಡಿದರು."

"ಟಪಾಲು ಲೂಟಿ ಮಾಡಿ ಏನು ಮಾಡತಾರಿವರು?"

"ಸರಕಾರವನ್ನ ಉರುಳಿಸುವ ಕಾರ್ಯಕ್ರಮ ಅಂತೆ ಇವೆಲ್ಲಾ. ಸರಕಾರೀ ಯಂತ್ರ ನಿಲ್ಲಿಸಿಬಿಡೂದಕ್ಕೆ ಇದನ್ನೆಲ್ಲ ನಡಸಿದ್ದಾರಂತೆ!"

"ಟಪಾಲು ಲೂಟಿ ಮಾಡಿದರ ಸರಕಾರ ಹ್ಯಾಂಗ ಉರುಳುತೈತ್ರಿ ?" ಎಂದು ಸೋಜಿಗದಿಂದ ಕೇಳಿದರು ದೇಸಾಯಿ.

"ಅದೇ ನನಗೂ ಆಶ್ಚರ್ಯ. ಏನೋ ಇವರದೆಲ್ಲಾ ಒಂದು ವಿಚಿತ್ರ ಕೆಲಸಾನೇ ನಡದದ. ನಿಮ್ಮ ಸಣ್ಣ ದೇಸಾಯರಂತ ಕಲಿತವರೂ ಈ ಹುಚ್ಚಿಗೆ ಬಿದ್ದಾರ–ಅದೇ ದೊಡ್ಡ ಆಶ್ಚರ್ಯ...."

"ಅವನೂ ಹೋಗಿದ್ದನಂತೇನ್ರಿ ಟಪಾಲು ಲೂಟಿ ಮಾಡೂದಕ್ಕೆ ?"

"ಅವರೇ ಅದಕ್ಕೆ ಪುಢಾರಿ ಆದ ಹಾಂಗಿತ್ತು. ನಾನೇ ಸ್ವತಃ ನೋಡಿದೆ"

"ನೀವೇ ನೋಡಿದಿರಾ ? ಯಾವಾಗ ?"

"ಬಸ್ಸು ಲೂಟಿ ಆದಾಗ ನಾನೂ ಅದರೊಳಗಿದ್ದೆ. ಒಬ್ಬನೇ ಇದ್ದೆ ಅಂತ ಹಾಂಗ ಸುಮ್ಮನಿರಬೇಕಾಯ್ತು. ಇಲ್ಲದಿದ್ದರ ಆಗಲೇ ಎಲ್ಲರನ್ನೂ ಹಿಡೀಬಹುದಾಗಿತ್ತು."

"ಇವರೆಲ್ಲ ಎಲ್ಲಿ ವಸ್ತಿ ಮಾಡುತಾರಂತೆ ರಾತ್ರಿ ಹೊತ್ತಿನಾಗ ? ಕಲ್ಲಾಪುರದೊಳಗ ಏನು ?"

"ಅಲ್ಲ. ಅಲ್ಲಿಂದ ಸಮೀಪದೊಳಗ ಒಂದು ಸಣ್ಣ ಕೊಳ್ಳ ಅದ ಅಂತೆ, ಅಲ್ಲಿರತಾರ."

"ಯಾವ ಕೊಳ್ಳ ? ಕಿರುಬನ ಕೊಳ್ಳ ಏನು ?" ಎಂದು ಕುತೂಹಲದಿಂದ ಕೇಳಿದರು ದೇಸಾಯರು.

"ಇರಬೇಕು. ಆ ಊರ ಕುಲಕರ್ಣಿ ಹೇಳ್ತಿದ್ದ."

"ರಂಗಣ್ಣ ?"

"ಇರಬಹುದು. ಅವ ಒಬ್ಬ ನಮ್ಮ ಕಡೆ ಅದಾನ ಆ ಊರೊಳಗ. ಉಳಿದವರೆಲ್ಲಾ ಆ ಪುಂಡರ ಕಡೆಗೇ."

"ಈ ಕಡೆಯ ಜನರು ಹಾಂಗ. ಹುಂಬರು. ಏನೂ ತಿಳಿಯೂದಿಲ್ಲ. ಬುದ್ಧಿಯಿಲ್ಲದೆ ಏನಾದರೂ ಮಾಡ್ತಾರೆ" ಎಂದರು ದೇಸಾಯರು.

"ಈಗ ನೀವು ಏನಾದರೂ ಉಪಾಯ ಮಾಡಿ ನಿಮ್ಮ ಮಗನ್ನ ಈ ಗುಂಪಿನಿಂದ ಒಡಿಯಬೇಕು, ದೇಸಾಯರ. ಇಲ್ಲದಿದ್ದರ ನಿಮ್ಮ ಮ್ಯಾಲೂ ಆರೋಪ ಬರತದ.

"ಹ್ಯಾಂಗ ಒಡೀಬೇಕು ಅಂತೀರಿ? ನನಗೇನೂ ಉಪಾಯ ಹೊಳೀಲೊಲ್ಲದು."

"ನೀವು ಸ್ವತಃ ಆ ಕೊಳ್ಳಕ್ಕೆ ಹೋಗಿ ನಿಮ್ಮ ವಿಶ್ವನಾಥನ್ನ ಭೆಟ್ಟಿಯಾಗಿ ಬುದ್ಧಿ ಹೇಳಬೇಕ."

ದೇಸಾಯಿಯವರಿಗೆ ಯೋಚನೆಗಿಟ್ಟುಕೊಂಡಿತು. ಕೊಳಕ್ಕೇನೋ ಹೋಗಬಹುದು, ವಿಶ್ವನಾಥನ ಭೆಟ್ಟಿಯೂ ಆಗಬಹುದು : ಆದರೆ ಆತ ತಮ್ಮ ಬುದ್ಧಿಯ ಮಾತುಗಳನ್ನು ಕೇಳಬಹುದೆಂಬ ನಿರೀಕ್ಷೆಯೇನೂ ಅವರಿಗಿರಲಿಲ್ಲ. ತಮ್ಮನ್ನು ಮೋಸಗೊಳಿಸಿ ಬಂದೂಕುಗಳನ್ನೆತ್ತಿಕೊಂಡು ಆತ ಮಾಯವಾದಾಗಲೇ ಅವನ ಬಗೆಗಿದ್ದ ಆಸೆಯೆಲ್ಲ ಮಸುಳಿಸಿಹೋದಹಾಗಾಗಿದ್ದಿತು. ಇನ್ನು ಅವನಿಗೆ ಬುದ್ಧಿ ಬಂದರೆ ತಾನಾಗಿಯೇ ಬರಬೇಕು, ಅಷ್ಟೆ. ಪೋಲೀಸರ ಕೈಗೆ ಸಿಕ್ಕು ಶಿಕ್ಷೆಗೊಳಗಾಗಿ ಎರಡು ಮೂರು ವರ್ಷ ಸೆರೆಮನೆಯಲ್ಲಿ ಕೊಳೆತಾಗ ಬಂದೀತೇನೊ ಇಂಥ ತಿಳಿವಳಿಕೆ! ಅದುವರೆಗೂ....ವಿಶ್ವನಾಥನ ಸ್ವಭಾವವೇನೂ ಅವರಿಗೆ ಅಪರಿಚಿತ ವಿಷಯವಲ್ಲ. ಬಹಳ ಹಟದ ಸ್ವಭಾವ ಅವನದು. ಒಮ್ಮೆ ಒಂದು ವಿಷಯದಲ್ಲಿ ಮನಸ್ಸು ಹಾಕಿದರೆ ಆಮೇಲೆ ಯಾರು ಬೇಡವೆಂದರೂ ಕೇಳುವ ಆಸಾಮಿಯಲ್ಲ. ಹೀಗಿರುವಾಗ....

ಕೀರ್ತಿನಾಥ ಮುಂದೆ ಹೇಳುತ್ತಿದ್ದ : "ಇನ್ನೂ ಒಂದು ಉಪಾಯ ಅದ ದೇಸಾಯರs. ಆ ಶೇಖರನ ಅಣ್ಣ ಲಿಂಗಣ್ಣ ಮಾಡಿರುವ ಹೊಲ ನಿಮ್ಮದಂತೆ. ಹೌದೇನು?"

"ಹೌದು. ಬಹಳ ವರ್ಷದಿಂದ ಅವರೇ ಮಾಡ್ತಾ ಇದಾರ."

"ಆ ಹೊಲ ಬಿಡಿಸಿಬಿಡತೀವಿ ಅಂತ ಹೆದರಿಕೆ ಹಾಕಿದರೆ ಆ ಗುಂಪಿನ ಶಕ್ತಿಯನ್ನ ಮುರೀಬಹುದು...."

ದೇಸಾಯರಿಗೆ ಮತ್ತೆ ಯೋಚನೆಗಿಟ್ಟುಕೊಂಡಿತು. ತಲೆತಲಾಂತರಗಳಿಂದ ಲಿಂಗಣ್ಣನ ಮನೆಯವರೇ ತಮ್ಮ ಹೊಲವನ್ನು ಹಿಡಿದು ದುಡಿಯುತ್ತ ಬಂದಿದ್ದಾರೆ. ಅತ್ಯಂತ ನಿಷ್ಠೆಯಿಂದ, ಪ್ರಮಾಣಿಕತನದಿಂದ ಕೆಲಸ ಮಾಡುತ್ತ ಬಂದಿದ್ದಾರೆ. ಹಲವಾರು ಪೀಳಿಗೆಗಳಿಂದ ನಡೆದು ಬಂದ ಈ ಋಣಾನುಬಂಧವನ್ನು ತಾವು ಈಗ ಒಮ್ಮೆಲೆ ಮುರಿದುಹಾಕುವುದು ಉಚಿತವಾದೀತೇ? ಲಿಂಗಣ್ಣ ಬಲು ಒಳ್ಳೆಯ ಮನುಷ್ಯ. ಅವನ ತಂದೆಯೂ ಹಾಗೇ ಇದ್ದ. ಎಂದೂ ಯಾವುದರ ಬಗೆಗೂ

ತಕರಾರು ಮಾಡಿದ ಜನವಲ್ಲ ಅದು. ಅಂಥವರನ್ನು ಒಮ್ಮೆಲೆ ಬಿಡಿಸುವುದೆಂದರೆ....

"ನೋಡಿರಿ. ಎರಡು ಉಪಾಯಗಳಿದಾವೆ. ಏನಾದರೂ ಮಾಡಿ ಈ ಗುಂಪಿನ ಶಕ್ತಿಯನ್ನ ಮುರಿದು ಅವರನ್ನೆಲ್ಲ ಹಿಡಿದು ಜೇಲಿಗೆ ಕಳಿಸಬೇಕಾಗಿದೆ. ಅವರನ್ನ ಹಿಡಿಯೂದು ಸುಲಭ ಅಲ್ಲ. ಯಾಕಂದರ, ಆ ಕುಲಕರ್ಣಿ ಒಬ್ಬನ್ನ ಬಿಟ್ಟರ ಊರೊಳಗ ಅವರಿಗೆ ವಿರುದ್ಧ ಆದವರು ಯಾರೂ ಇಲ್ಲ. ಅದಕ್ಕೆ ಹೀಂಗ ನಾವು ಭೇದೋಪಾಯ ಮಾಡಬೇಕಾಗಿ ಬಂತು. ಆ ಕುಲಕರ್ಣಿಯೂ ಇದನ್ನೇ ಹೇಳುತ್ತಿದ್ದ...."

"ಆಗಲಿ. ನಾ ಸ್ವಲ್ಪ ವಿಚಾರ ಮಾಡ್ತೇನೆ ಸಾಹೇಬರೇ. ಆದರೂ ಈ ಉಪಾಯದಿಂದ ಕೆಲಸ ಸಾಧಿಸೀತು ಅಂತ ನನಗೇನೂ ಅನ್ನಿಸುವದಿಲ್ಲ...." ಎಂದು ನಿರುತ್ಸಾಹದಿಂದ ನುಡಿದರು ದೇಸಾಯರು.

"ಹೀಂಗ ನಿರಾಶರಾಗಬಾರದು ದೇಸಾಯರ. ನೀವು ಮನಸ್ಸು ಮಾಡಿದರ ಈ ಕೆಲಸವೇನು ದೊಡ್ಡದು ನಿಮಗ? ನಾನಂತೂ ಇನ್ನು ಮ್ಯಾಲ ಈ ಭಾಗ ದೊಳಗೇ ಇರ್ತೀನಿ. ನಿಮಗೆ ಯಾವಾಗ ಸಹಾಯ ಬೇಕಾದರೂ ತಿಳಿಸಿರಿ, ನಾ ಮಾಡ್ತೇನೆ."

"ಆಯ್ತು. ನೀವೇ ಇರುತೀರಂದಮ್ಯಾಲ ಇನ್ನೂ ಚಲೋ ಆಯ್ತು" ಎಂದರು ದೇಸಾಯರು ಅನ್ಯಮನಸ್ಕರಾಗಿ.

## ೧೭

ರಾತ್ರಿಯ ಕೆಲಸವನ್ನು ಯಶಸ್ವಿಯಾಗಿ ಕೊನೆಗಾಣಿಸಿ ಗುಂಪಿನವರು ಕಿರುಬನ ಕೊಳ್ಳಕ್ಕೆ ಹಿಂದಿರುಗುತ್ತಿದ್ದರು. ಬೆಳಗಾಗುತ್ತ ಬಂದಿತ್ತು. ಪೂರ್ವ ದಿಕ್ಕಿನಿಂದ ಬಾಲರವಿಯ ಎಳೆಗಿರಣಗಳು ಗುಡ್ಡದೋರೆಯ ಮೇಲೆ ಸುರಿದು ಸುತ್ತಲಿನ ದೃಷ್ಟಿಯನ್ನೆಲ್ಲ ಚೇತೋಹಾರಿಯನ್ನಾಗಿ ಮಾಡಿದ್ದುವು. ವಿಶ್ವನಾಥ, ಶೇಖರ, ಸಂಗಣ್ಣ, ಮಾಸ್ತರರು ಎಲ್ಲರೂ ಆನಂದದಿಂದ ಅಡಿಯಿಡುತ್ತ ಬರುತ್ತಿದ್ದರು. ರಾತ್ರಿಯ ಕೆಲಸದ ಪ್ರತಿಫಲವಾಗಿ ಐದು ಬಂದೂಕುಗಳನ್ನು ಅವರು ಸಂಪಾದಿಸಿದ್ದರು. ಒಬ್ಬೊಬ್ಬರು ಒಂದೊಂದನ್ನು ಹೆಗಲ ಮೇಲೆ ಹಾಕಿಕೊಂಡು ಸೈನಿಕರಂತೆ ಹೆಜ್ಜೆ ಹಾಕುತ್ತ ಬರುತ್ತಿದ್ದರು.

"ಅಂತೂ ಬಹಳ ಗಂಡಾಂತರದ ಕೆಲಸ ಆದು ಶೇಖರಣ್ಣ! ಝುಟ್ ಪಟ್

ಆಯ್ತು ಅಂತ ನೆಟ್ಟಗಾಯ್ತು....ಒಂದು ಮಿನೀಟು ಹೆಚ್ಚು ಕಡಿಮೆ ಆಗಿದ್ದರೆ ಘಾತ ಆಗ್ತಿತ್ತು...." ಎಂದ ವಿಶ್ವನಾಥ.

"ಆ ಗೌಡ ಸುಮ್ಮನಿದ್ದ ಅಂತ ಒಳ್ಳೇದಾಯ್ತು" ಎಂದ ಶೇಖರ.

"ನಾವು ಹೇಳಿದ್ದನ್ನ ಅವರು ಹ್ಯಾಂಗಾದರೂ ನಂಬಿದರೋ ಅಂತ ಆಶ್ಚರ್ಯ ನನಗೆ. ಅಷ್ಟೂ ಸಹ ತಿಳೀಬಾರದು ಅವರಿಗೆ?" ಎಂದ ಸಂಗಣ್ಣ.

"ರಾತ್ರಿ ಹೊತ್ತಿನಾಗ, ಅದೂ ಬೆಳಗಿನ ಜಾವದಾಗ ಅವರಿಗಾದರೂ ಅಷ್ಟು ಎಚ್ಚರಿಕೆ ಎಲ್ಲಿರತೈತಿ ಸಂಗಣ್ಣ? ಪಾಪ, ರಾತ್ರಿಯೆಲ್ಲಾ ನಿದ್ರೆಗೆಟ್ಟು ಗಸ್ತೀ ತಿರುಗಿರತಾರೆ. ಸಾಕಪ್ಪ ಈ ಗಸ್ತಿ–ಎಲ್ಲಾದರೂ ಹೋಗಿ ಮಲಗಿಬಿಡೋಣ ಅನ್ನಿಸತಿರುತ್ತೈತಿ. ಅಂಥ ಹೊತ್ತಿನಾಗ ಯಾರೂ ಹೆಚ್ಚು ಬುದ್ಧಿ ಉಪಯೋಗಿಸಿ ವಿಚಾರ ಮಾಡುವದಿಲ್ಲ....ಅಂತೂ, ಇನ್ನು ನಾಲ್ಕೈದು ದಿನ ಪೋಲೀಸರ ಕಾವಲು ಬಹಳ ಆಗುತೈತಿ. ಐದು ಬಂದೂಕು ಅಂದರೇನು, ಸಾದಾ ಕೆಲಸವಲ್ಲ....!"

ಶೇಖರನಾಡಿದ ಮಾತು ನಿಜವಾಗಿತ್ತು. ಐದು ಬಂದೂಕುಗಳನ್ನು, ಅದರಲ್ಲೂ ಪೋಲೀಸರ ರೈಫಲ್ಲುಗಳನ್ನು ಅವರು ದೋಚಿಕೊಂಡು ಬಂದಿದ್ದರು. ಪೋಲೀಸರಿಗೂ ಅವರಿಗೂ ದ್ವಂದ್ವ ನಡೆದುದು ಅದೇ ಮೊದಲ ಸಲ. ಮೊದಲೇ ಗೊತ್ತುಪಡಿಸಿದ ಮೇರೆಗೆ ರಾತ್ರಿ ಮೂರು ಗಂಟೆಗೆ ಅವರು ಹತ್ತಿರದಲ್ಲಿದ್ದ ಊರಿಗೆ ಹೋಗಿದ್ದರು. ಅಲ್ಲಿ ಐದು ಜನ ಪೋಲೀಸರು ಗಸ್ತಿ ತಿರುಗುತ್ತಿದ್ದ ವಿಷಯವೂ ಅವರಿಗೆ ಗೊತ್ತಿದ್ದಿತು.

ಊರೊಳಗಿನ ಒಂದು ಬೀದಿಯ ಗುಂಟ ಆ ಐವರು ಪೋಲೀಸರೂ, ಊರ ಗೌಡನೂ ಗಸ್ತಿ ತಿರುಗುತ್ತ ಬರುತ್ತಿದ್ದಾಗ ಗುಂಪಿನಲ್ಲಿ ನಾಲ್ಕು ಜನ ಅವರಿಗೆದುರಾಗಿ ಬಂದರು. ಅಂಥ ಹೊತ್ತಿನಲ್ಲಿ ಹೊರಗಡೆ ತಿರುಗುತ್ತಿದ್ದ ಅವರನ್ನು ಕಂಡು ಸಹಜವಾಗಿಯೇ ಪೋಲೀಸರು ಪ್ರಶ್ನಿಸಿದರು: "ಎಲ್ಲಿಗೆ ಹೊರಟೀರಿ?" ಎಂದು. ಎಲ್ಲರೂ ರೈತರ ಹಾಗೆ ಕಾಣಿಸುತ್ತಿದ್ದುದರಿಂದ ಸಂಶಯವೇನೂ ಬರುವಂತಿರಲಿಲ್ಲ. ಅಲ್ಲದೆ ಮುಬ್ಬುಗತ್ತಲೆ. ಪೋಲೀಸರ ಪ್ರಶ್ನೆಗೆ ಸಂಗಣ್ಣ—"ನಮ್ಮ ಪೈಕಿ ಒಬ್ಬ ಮುದುಕಿ ಸತ್ತಾಳ. ಆಕೆಗೆ ಮಣ್ಣು ಕೊಡುವ ತಯಾರಿ ಮಾಡಬೇಕಾಗೈತಿ. ಅದಕ್ಕ ಹೊರಟೇವಿ" ಎಂದು ಹೇಳುತ್ತಿದ್ದ ಹಾಗೇ ಇನ್ನುಳಿದ ಮೂವರೂ ಪೋಲೀಸರ ಕಣ್ಣುಗಳಿಗೆ ಖಾರದ ಪುಡಿ ಉಗ್ಗಿ ಅವರ ಮೈಮೇಲೆ ಹಾರಿದ್ದರು. ಒಡನೆಯೆ ಹಿಂದಿನಿಂದ ಇನ್ನು ಐದು ಜನ ಬಂದು ಬಂದೂಕುಗಳನ್ನು ಕಸಿದು

ಕೊಂಡು ಓಡಿಹೋದರು. ಗೌಡ ಏನೂ ತೋಚದೆ ಸುಮ್ಮನಿದ್ದುಬಿಟ್ಟ. ಖಾರದ ಪುಡಿಯ ಪ್ರಭಾವದಿಂದ ವೇದನೆಗೊಳಗಾದ ಪೋಲೀಸರನ್ನು ಅಲ್ಲಿಯೇ ಬಿಟ್ಟು ಗುಂಪಿನವರೆಲ್ಲ ಕ್ಷಣಮಾತ್ರದಲ್ಲಿ ಅಲ್ಲಿಂದ ಕಾಲ್ತೆಗೆದು ಬಂದಿದ್ದರು.

"ಇದರ ಸೇಡು ತೀರಿಸಿಕೊಳ್ಳದೆ ಬಿಡೋದಿಲ್ಲ ಅವರು. ಆ ಊರಿನ ಮಂದಿಯನ್ನ ಹಿಡೀತಾರೆ ಇವೊತ್ತು. ಪೋಲೀಸ್ ಪಾರ್ಟಿ ಬಂದಿರಬಹುದು ಇಷ್ಟೊತ್ತಿಗೇ...." ಎಂದ ವಿಶ್ವನಾಥ.

"ಆ ಊರವರನ್ನ ಹಿಡಿದು ಏನ್ಮಾಡ್ತಾರ ? ಅಲ್ಲಿ ಬಂದೂಕ ಸಿಗಬೇಕಲ್ಲ ಅವರಿಗೆ ?" ಎಂದ ಸಂಗಣ್ಣ.

"ಅಂತೂ ಈ ಐದು ಬಂದೂಕು ಸಿಕ್ಕಿದ್ದರಿಂದ ನಮ್ಮ ಕೆಲಸ ಹಗುರಾಗಿ ಆಗೂದಕ್ಕ ದಾರಿ ಆದಂಗಾಯ್ತು. ತಾಲೂಕ ಕಚೇರಿಯ ಮ್ಯಾಲ ದೌಡು ಮಾಡುವಾಗ ಇವುಗಳಿಂದ ಉಪಯೋಗ ಆಗುತ್ತೈತಿ" ಎಂದರು ಮಾಸ್ತರರು.

"ಇನ್ನೂ ಎಂದು ಮಾಡೂದು ಅದನ್ನ, ಶೇಖರಣ್ಣ ?" ಎಂದು ಕೇಳಿದ ಸಂಗಣ್ಣ.

"ಅದು ಸಣ್ಣ ಕೆಲಸ ಅಲ್ಲ ಸಂಗಣ್ಣ. ಮೊದಲು ಬಹಳ ತಯಾರಿ ಮಾಡಬೇಕು. ನೂರು ಜನರಾದರೂ ಬೇಕು ಆ ಕೆಲಸಕ್ಕ. ಹಾಂಗs ಆಗುತ್ತೈತೇನು ?"

"ನೂರು ಜನರ್‍ಯಾಕ, ನೂರಿಪ್ಪತ್ತು ಜನರನ್ನ ತಂದುಕೊಡ್ತೀನಿ ನಾ. ಒಂದು ಮಾತು ಹೇಳಿಕಳಿಸಿದರ ಸಾಕು, ತಾಲೂಕಿನ ಜನರೆಲ್ಲ ಬಂದಾರು."

"ಬರಬಹುದು. ಆದರs ಹಾಂಗ ಕೂಡಿಸಿದರ ಕೆಲಸ ಆಗುವುದಿಲ್ಲ. ಬರೀ ಗದ್ದಲ ಆಗಬಹುದು. ಅಷ್ಟರೊಳಗs ಪೋಲೀಸ ಪಾರ್ಟಿ ಬಂದು ಕಚೇರಿಯ ಸುತ್ತಮುತ್ತ ಕೂತಿತಂದರ ಲಕ್ಷ ಜನ ಸೇರಿದರೂ ಏನೂ ಆಗುವ ಹಾಂಗಿಲ್ಲ. ಇದೂ ಒಂದು ಯುದ್ಧ ಇದ್ದ ಹಾಂಗ ಸಂಗಣ್ಣ. ಎಲ್ಲಾ ಮೊದಲೇ ನಕಾಶೆ ಹಾಕಿ, ತಯಾರು ಮಾಡಬೇಕಾಗ್ತೈತಿ. ಸೈನಿಕರ ಹಾಂಗ ಶಿಸ್ತಿನಿಂದ ಕೆಲಸ ಮಾಡುವ ನೂರು ಜನರಾದರೂ ಸಾಕು. ಅವರಿಂದಲೇ ಕೆಲಸ ಸಾಧಿಸಬಹುದು.... ಅಂಥ ನೂರು ಜನ ಸಿಕ್ಕಬೇಕಲ್ಲ ಮೊದಲು...."

ಕೊಳ್ಳಕ್ಕೆ ಬಂದು ಝುರಿಯ ನೀರಿನಲ್ಲಿ ಸ್ನಾನ ಮಾಡುತ್ತಿದ್ದಾಗಲೂ ಶೇಖರನ ಮನಸ್ಸಿನಲ್ಲಿ ಅದೇ ವಿಚಾರ ತಿರುಗುತ್ತಿತ್ತು. ತಮ್ಮ ಕಾರ್ಯಕ್ರಮ

ದಲ್ಲೆಲ್ಲ ಅದೇ ಅತಿ ಮಹತ್ವದ ಮತ್ತು ಸಾಹಸದ ಕೆಲಸವಾಗಿತ್ತು. ಪೂರ್ಣ ಸಿದ್ಧತೆಯಾದ ಹೊರತು ಅದಕ್ಕೆ ಕೈಹಾಕುವ ಹಾಗಿರಲಿಲ್ಲ. ಸಿದ್ಧತೆಯೆಲ್ಲ ಮುಗಿಯಬೇಕಾದರೆ ಇನ್ನೂ ಒಂದು ತಿಂಗಳಿನ ಕಾಲವಾದರೂ ಅಗತ್ಯವಾಗಿ ಬೇಕಾಗಿದ್ದಿತು.

ಆತ ಸ್ನಾನ ತೀರಿಸಿ ಧೋತರವನ್ನುಟ್ಟುಕೊಳ್ಳುತ್ತಿದ್ದ ಹಾಗೆ ಮುದುಕ ಬಾಳಪ್ಪ ಕೂಗಿದುದು ಕೇಳಿಸಿತು. ಶೇಖರ ಹೊರಳಿ ನೋಡಿದರೆ, ತನ್ನ ತಾಯಿ ಕೈಯಲ್ಲೊಂದು ಗಂಟನ್ನು ಹಿಡಿದುಕೊಂಡು ನಿಂತಿದ್ದುದು ಕಂಡುಬಂದಿತು.

ಲಗುಬಗೆಯಿಂದ ಅಂಗಿ ಹಾಕಿಕೊಂಡು ಶೇಖರ ತಾಯಿಯ ಬಳಿ ಬಂದು ಆಕೆಯ ಕೈಯಲ್ಲಿದ್ದ ಗಂಟನ್ನು ತೆಗೆದುಕೊಂಡು ಬಾಳಪ್ಪನ ಕೈಗೆ ಕೊಡುತ್ತಾ ಕೇಳಿದ :

" ಏನವ್ವಾ, ಇಷ್ಟು ಲಗೂ ಬಂದೆ ?"

" ಹೀಂಗs ಬಂದೆನಪ್ಪ. ನಡೀ. ನೀವೆಲ್ಲ ರೊಟ್ಟೀ ತಿನ್ನಿರಿ ಮೊದಲು. ಎಲ್ಲಾ ಹೇಳ್ತೇನೆ" ಎಂದಳು ಪಾರ್ವತಮ್ಮ.

ತಾಯಿಯ ಮುಖವನ್ನೊಂದು ಸಲ ಸೂಕ್ಷ್ಮವಾಗಿ ನಿರುಕಿಸಿದ ಶೇಖರ. ಅಲ್ಲಿ ಚಿಂತೆಯ ಭಾವವನ್ನು ಗುರುತಿಸಲು ಸಾಧ್ಯವಾಗದಿದ್ದರೂ ಆಕೆಯ ಧ್ವನಿಯಲ್ಲಾದ ಬದಲಾವಣೆಯಿಂದ ಏನೋ ಒಂದು ಅಚಾತುರ್ಯ ನಡೆದಿರ ಬೇಕೆಂಬುದು ಸ್ಪಷ್ಟವಾಗಿದ್ದಿತು.

ಗುಂಪಿನವರೆಲ್ಲ ಗುಡಿಯ ಪಡಸಾಲೆಯಲ್ಲಿ ಕುಳಿತುಕೊಂಡು ರೊಟ್ಟಿ ತಿನ್ನುತ್ತಿದ್ದಾಗ ಪಾರ್ವತಮ್ಮ ಹೇಳಿದಳು :

" ಆ ರಂಗಣ್ಣ ಮತ್ತೆ ಏನೋ ಕುತಂತ್ರ ಹೂಡಿದಾಂಗ ಕಾಣುತೈತಿ. ನಿನ್ನೆ ಅವನೂ ದೇಸಾಯರೂ ಕೂಡಿ ಮನೆಗೆ ಬಂದಿದ್ದರು."

ದೇಸಾಯರು ಎನ್ನುತ್ತಲೂ ವಿಶ್ವನಾಥನಿಗೆ ಕುತೂಹಲ ಉಕ್ಕೇರಿತು. " ಯಾರು ? ನಮ್ಮ ಅಪ್ಪ ಏನು ?" ಎಂದು ಆತ ಕೇಳಿದ.

" ಹೌದಪ್ಪ. ಅವರೇ. ನಿಮ್ಮ ಹೊಲವನ್ನೇ ನಾವು ಲಾವಣಿಗೆ ಹಿಡಿದಿರೂದು. ನಿನಗೆ ಗೊತ್ತಿಲ್ಲೇನು ?"

" ಯಾಕ ಬಂದಿದ್ದರು ಅವರು ?"

“ಏನೋ ತಂತ್ರ ಮಾಡಿದಾನ ಕುಲಕರ್ಣಿ. ಇಲ್ಲದಿದ್ದರ ದೇಸಾಯರು ಅಂಥಾವರಲ್ಲ. ನಿನ್ನೆ ಬಂದವರೇ ಲಿಂಗಣ್ಣನ್ನ ಕರದು ಬಾಯಿಗೆ ಬಂದ ಹಾಂಗ ಮಾತಾಡಿದರು. ‘ಹೊಲಾ ಈಗಿಂದೀಗ ಬಿಡಬೇಕು’ ಅಂದರು....”

“ಹೊಲಾ ಬಿಡಬೇಕು? ಇದೇನವ್ವ, ಇಂಥಾ ಮಾತು?” ಎಂದ ಶೇಖರ.

“ಹೌದು, ಬಿಡಬೇಕಂತೆ. ಅಷ್ಟs ಅಲ್ಲ. ಈಗ ನಾಲ್ಕೈದು ವರ್ಷದಿಂದ ನೆಟ್ಟಗೆ ಬೆಳಿ ಬರಲಿಲ್ಲ ಅಂತ ಲಾವಣಿ ಹಣ ಕೊಡೂದೂ ಉಳಿದಿತ್ತಲ್ಲ? ಇಷ್ಟರ ತನಕ ದೇಸಾಯರೂ ಅದನ್ನ ಕೇಳಿರಲಿಲ್ಲ. ಚಲೋ ಬೆಳಿ ಬಂದಾಗ ಕೊಟ್ಟರಾಯ್ತು ಅಂತ ನಾವು ಸುಮ್ಮನಿದ್ದೆವು. ಈಗ ಒಮ್ಮಿಂದ ಒಮ್ಮೆಲೆ ಎಲ್ಲಾ ಕೊಡಬೇಕು ಅಂತ ಕೂತಿದ್ದಾರ. ಈ ವರ್ಷನೂ ಬೆಳಿ ಬರಲಿಲ್ಲ. ನಾಲ್ಕೈದು ಚೀಲ ಆದ್ರೂ ಜೋಳ ಬರ್ತಾವೋ ಇಲ್ಲೋ. ಸುಗ್ಗೀನೂ ಇನ್ನೂ ದೂರ ಐತಿ. ಇಂಥಾದರಾಗ ದೇಸಾಯರು ಹೀಂಗ ಬಂದು ಕೂತರ ಏನು ಮಾಡಬೇಕು?”

ಶೇಖರನ ರೊಟ್ಟಿ ಕೈಯಲ್ಲಿಯೆ ಉಳಿಯಿತು. ಮುಂದೆ ತಿನ್ನಲು ಅವನಿಗೆ ಮನಸ್ಸು ಬರಲಿಲ್ಲ. ಆಕಸ್ಮಾತ್ತಾಗಿ ಬಂದು ನಿಂತ ಈ ಮಹಾ ಸಮಸ್ಯೆಯನ್ನು ಹೇಗೆ ಎದುರಿಸಬೇಕೆಂಬುದು ತಿಳಿಯದಾಯಿತು. ಇದುವರೆಗೆ ಮನೆಯ ಯೋಚನೆಯನ್ನೇ ತಲೆಗೆ ಸೇರಿಸಿಕೊಳ್ಳದೆ ಎಲ್ಲ ಬುದ್ಧಿಯನ್ನೂ ಎಲ್ಲ ಶಕ್ತಿಯನ್ನೂ ಚಳವಳಿಯಲ್ಲೇ ತೊಡಗಿಸಿ ಕೆಲಸ ಮಾಡುತ್ತಿದ್ದನಾತ. ಹಿರಿಯಣ್ಣ ಲಿಂಗಣ್ಣ ಮನೆತನವನ್ನು ನೋಡಿಕೊಳ್ಳಲು ಸಮರ್ಥನಾಗಿದ್ದು ಅವನಿಗೆ ಸಹಾಯಕಳಾಗಿ ತಾಯಿಯಿರುವಾಗ ತಾನು ಆ ಬಗೆಗೆ ಚಿಂತೆಮಾಡುವ ಅಗತ್ಯವಿಲ್ಲವೆಂದು ತಿಳಿದುಕೊಂಡಿದ್ದ. ಆದರೆ ಈಗ ಹಠಾತ್ತಾಗಿ ಬಂದೊದಗಿದ ಈ ಗಂಡಾಂತರವನ್ನೆದುರಿಸಲಾರದೆ ಮನೆಯವರು ಚಿಂತೆಗೆ ಒಳಗಾಗಿದ್ದರು. ಅಂತೆಯೆ, ತಾಯಿ ಆ ಚಿಂತೆಯನ್ನು ಹೊತ್ತುಕೊಂಡು ಇಲ್ಲಿಗೆ ಬಂದಿದ್ದಳು.

ದೇಸಾಯಿಯವರು ಒಮ್ಮಿಂದೊಮ್ಮೆಲೆ ಈ ರೀತಿ ವರ್ತಿಸಲು ಕಾರಣ ಏನೆಂಬುದು ಮಾತ್ರ ಅವನಿಗೆ ಹೊಳೆಯಲಿಲ್ಲ. ತಾಯಿ ಹೇಳಿದ ಹಾಗೆ ಕುಲಕರ್ಣಿ ರಂಗಣ್ಣನೇ ಏನಾದರೂ ಕುಟಿಲ ಕಾರಸ್ಥಾನ ಹೂಡಿ ಇಂಥ ಕೆಲಸಕ್ಕೆ ದೇಸಾಯಿಯವರನ್ನು ಪ್ರೇರೇಪಿಸಿರಬಹುದೆಂದೂ ಅವನಿಗನ್ನಿಸಿತು. ವಿಶ್ವನಾಥನಿಗೂ ಆಶ್ಚರ್ಯವುಂಟಾಗದಿರಲಿಲ್ಲ. ಆತ ಕೇಳಿದ :

“ ಇದೆಲ್ಲ ಯಾಕಂತವ್ವ ? ಏನಾದರೂ ಹೇಳಿದರೇನು ?”

ಪಾರ್ವತವ್ವ ಒಂದೆರಡು ಕ್ಷಣ ಉತ್ತರವೀಯಲಿಲ್ಲ. ಹೇಳಲೋ ಬೇಡವೋ ಎಂದು ಆಕೆ ಒಳಗೊಳಗೇ ವಿಚಾರ ಮಾಡುತ್ತಿದ್ದ ಹಾಗಿದ್ದಿತು. ಕೊನೆಗೆ ಹೇಳಿ ಬಿಡುವುದೇ ಒಳ್ಳೆಯದೆಂದುಕೊಂಡು—“ ದೇಸಾಯಿಯವರಿಗೆ ಸರಕಾರದಿಂದ ತಾಕೀತು ಬಂದೈತಂತಪ್ಪ. ಚಳವಳಿಯ ಮುಂದಿಗೆ ಹೊಲ ಮಾಡೂದಕ್ಕ ಕೊಡ ಬಾರದಂತ. ಅದಕ್ನ ಬಿಡಿಸುತಾರಂತೆ....” ಎಂದಳು.

ವಿಶ್ವನಾಥನಿಗೆ ಸೋಜಿಗವೆನ್ನಿಸದಿರಲಿಲ್ಲ. “ ಚಳವಳಿಗೂ ಹೊಲಕ್ಕೂ ಸಂಬಂಧ ಏನವ್ವ ?” ಎಂದ.

“ ಏನು ಸಂಬಂಧ ಐತ್ಯೊ ಏನೋ. ರಂಗಣ್ಣ ಹಾಂಗ ಅಂತಿದ್ದ. ಶೇಖರ ನಮ್ಮ ಮನೆಯವ ಅಂತ ನಮಗ ಆ ಹೊಲ ಕೊಡಬಾರದಂತೆ ಮಾಡೂದಕ್ಕೆ.”

“ ಶೇಖರಣ್ಣ ಚಳವಳಿಯವ ಆದರೆ ಲಿಂಗಣ್ಣ ಏನು ಅಲ್ಲವಲ್ಲ ? ಅವ ಪಾಪ, ತಾನಾಯ್ತು ತನ್ನ ಹೊಲ ಆಯ್ತು....ತನ್ನ ದುಡಿತ ಆಯ್ತು....ಅಂಥವನ ಸುತ್ತು ಯಾಕ ಇವರು ಗಂಟುಬಿದ್ದಾರ ?” ಎಂದ ಸಂಗಣ್ಣ.

“ ನಮ್ಮ ರಂಗಣ್ಣನಂಥ ಕುಲಕರ್ಣಿ ಇದ್ದರೆ ಯಾರಿಗೆ ಏನೂ ಬರಲಿಕ್ಕಿಲ್ಲ ಬಿಡು ! ನಿನಗೂ ಬಂದರ ಬಂತೇ ದಾಳಿ !” ಎಂದ ಬಾಳಪ್ಪ.

“ ಅದೂ ಅಲ್ಲದೆ, ಸಣ್ಣ ದೇಸಾಯರು ನಿಮ್ಮ ಸಂಗಡ ಇರೋದು ಗೊತ್ತಾಗೈತಿ. ಅವರನ್ನ ನೀವೇ ಕೆಡಿಸಿ ಹಾಳುಮಾಡಿ ಚಳವಳಿಗೆ ಹಾಕಿದಿರಿ ಅಂತ ಸಿಟ್ಟಾಗಿದ್ದಾರ ದೇಸಾಯರು. ಅವರನ್ನ ಮನೆಗೆ ಕಳಿಸಿಬಿಟ್ಟರ ಹೊಲಾ ಬಿಡಿಸುವದಿಲ್ಲಂತೆ....”

ಈ ಆಕಸ್ಮಿಕ ಘಟನೆಗೆ ಕಾರಣವೇನೆಂಬುದು ಈಗ ಎಲ್ಲರಿಗೂ ಹೊಳೆದ ಹಾಗಾಯಿತು. ಅಂತೂ ವಿಶ್ವನಾಥನನ್ನು ಚಳವಳಿಯಿಂದ ದೂರಗೊಳಿಸಿ ಮನೆಗೆ ಕರೆದೊಯ್ಯಲೆಂದೇ ಈ ಆಟ ನಡೆದಿದೆಯೆಂದಂತಾಯಿತು. ಗುಂಪಿನವರೆಲ್ಲ ಪರಸ್ಪರರ ಮುಖ ನಿರುಕಿಸಿದರು. ವಿಶ್ವನಾಥನಿಗೆ ಕೊಂಚ ನಗು ಬರದಿರ ಲಿಲ್ಲ. ಯಾವುದಾದರೊಂದು ಉಪಾಯದಿಂದ ತನ್ನನ್ನು ಮನೆಗೆ ಕರೆದೊಯ್ಯ ಬೇಕೆಂದು ತಂದೆ ನಿರ್ಧರಿಸಿದ್ದ ಹಾಗಿತ್ತು. ಈ ಉಪಾಯವನ್ನು ಅವರಿಗೆ ಬೇರಾರೋ ಹೇಳಿಕೊಟ್ಟಿರಬೇಕೆಂದು ಅವನಿಗೆ ಅನ್ನಿಸದಿರಲಿಲ್ಲ.

"ನಾ ಮನೆಗೆ ಹೋದರೆ ಹೊಲ ಬಿಡಿಸುವದಿಲ್ಲವಂತೇನು ?" ಎಂದು ಕೇಳಿದ.

"ಖಾತ್ರಿ ಅಂತ ಹ್ಯಾಂಗ ಹೇಳಾಕ ಬರ್‍ತೈತಪ್ಪ. ಅಂತೂ ಹಾಂಗ ಹೇಳಿದರು—ನೀವು ಏನಾರೆ ಮಾಡಿಕೊಳ್ಳಲೊಲ್ಲಿರ್‍ಯಾಕ, ನಮ್ಮ ಹೆಸರ್‍ಯಾಕ ಕೆಡಿಸ್ತೀರಿ ಸರಕಾರದೊಳಗ ? ನಮ್ಮ ಮಗನ್ನ ಕಳಿಸಿಬಿಡ್ರಿ—ಅಂದರು."

"ಕಳಿಸಿಬಿಡ್ರಿ ಅಂದರ ಕಳಿಸುವವರ್‍ಯಾರವ್ವ ? ಇವರೇನೂ ನನ್ನ ಕರ ಕೊಂಡು ಬಂದಿಲ್ಲ. ನಾನಾಗೇ ಬಂದೆ. ನನಗೆ ಮನಸು ಬಂದರ ಹೋಗ್ತೀನಿ. ಈಗಂತೂ ಅಂಥಾ ಪ್ರಸಂಗ ಬಂದಂಗಾಯ್ತು."

"ಛೆ. ಛೆ. ಹಾಂಗ ತಿಳಿಕೋಬ್ಯಾಡ. ನಿನ್ನ ಮನಸ್ಸಿನಾಗ ಇಲ್ಲದಿದ್ದರ ಹೋಗಬ್ಯಾಡ. ನಮಗೇನು ಹ್ಯಾಂಗಾದರೂ ಮಾಡತೀವಿ. ಇಂಥ ಕಷ್ಟ ನಮ ಗೇನೂ ಹೊಸದಲ್ಲ. ಇಂಥಾವು ಬೇಕಾದಷ್ಟು ಬರತಾವ ನಮ್ಮ ಆಯುಷ್ಯದಾಗ. ಎಲ್ಲಾ ಅನುಭೋಗಿಸಿ ನಮಗ ರೂಢಿ ಆಗಿರತೈತಿ. ಈ ಹೊಲಾ ಇರದಿದ್ದರ ಇನ್ನೊಂದು ಹೊಲಾ ಮಾಡಿದರಾಯ್ತು. ದುಡಿಯುವವರಿಗೆ ಯಾವದಾದ ರೇನಂತೆ ? ಆದರ ನಾಲ್ಕು ವರ್ಷದ ಲಾವಣೀ ಹಣಾ ಒಮ್ಮೆಲೆ ಕೊಡೋದು ಮಾತ್ರ ತ್ರಾಸದ ಕೆಲಸ. ದನಾ ಕರು, ನೇಗಿಲು, ಬಂಡಿ ಎಲ್ಲಾ ಜಪ್ತು ಮಾಡಿ ತಗೊಂಡು ಹೋಗತೀವಿ ಅಂತ ಹೇಳಿದರು ದೇಸಾಯರು. ಅದೊಂದನ್ನ ಹ್ಯಾಂಗಾ ದರೂ ಬಗೆಹರಿಸಿದರ ಆಯ್ತು. ನಮಗಾಗಿ ನೀನೇನೂ ಚಳವಳಿ ಬಿಡಬೇಕಾ ಗಿಲ್ಲಪ್ಪ. ನಾ ಮುದುಕಿಯಾಗ್ತಾ ಬಂದೆ. ಆದರೂ ಮೈಯಾಗ ಶಕ್ತಿ ಐತಿ ಇನ್ನೂ. ಈ ತೋಳು ಇರುವತನಕಾ ಯಾರಿಗೂ ಅಂಜಬೇಕಾಗಿಲ್ಲ. ಕೂಲೀ ಮಾಡಿ ದುಡಿದು ಇರ್‍ತೀವಿ. ಆದರ ಯಾರಿಗೂ ಅಂಜಾಕಿಲ್ಲ," ಎಂದು ಆವೇಶದಿಂದ ನುಡಿದಳು ಪಾರ್ವತಮ್ಮ.

ಕನ್ನಡನಾಡಿನ ಕೆಚ್ಚು ಕಲಿತನಗಳೇ ಮೂರ್ತಿವೆತ್ತು ಬಂದಂತಿದ್ದ ಆ ತಾಯಿಯನ್ನು ಕಂಡು ಗುಂಪಿನವರಿಗೆಲ್ಲ ಅಭಿಮಾನದಿಂದ ಮೈಯುಬ್ಬದೆ ಇರಲಿಲ್ಲ. ಆ ಬಡ ಸಂಸಾರದ ಮೇಲೆ ನಡೆಯಲಿದ್ದ ಅನ್ಯಾಯದ ಕತೆ ಕೇಳಿ ಸಂಗಣ್ಣನಿಗೆ ಮೈಯೆಲ್ಲ ಉರಿಯುತ್ತಿದ್ದಿತು. ತಲೆತಲಾಂತರಗಳಿಂದ ದುಡಿಯುತ್ತ ಬಂದ ಹೊಲವನ್ನು ಒಮ್ಮೆಲೆ ಯಾವ ಕಾರಣವೂ ಇಲ್ಲದೆ ಬಿಡಿಸುವುದೆಂದರೇನು? ಲಿಂಗಣ್ಣನ ಅಪರಾಧನಾದರೂ ಏನು ? ಅವನೇಕೆ ಹೊಲ ಬಿಡಬೇಕು ?

"ನೀನೇನೂ ಚಿಂತೀ ಮಾಡಬ್ಯಾಡವ್ವ. ಅವರು ಹ್ಯಾಂಗ ಹೊಲ

ಬಿಡಿಸತಾರ, ನಾ ನೋಡತೀನಿ. ಬಿಡಿಸಿದರೂ ನಾಳೆ ಅದನ್ನ ಯಾರು ಮಾಡಾಕ ಬರ್‍ತಾರ, ಅದನ್ನೂ ನೋಡತೀನಿ ?" ಎಂದನಾತ.

"ಹೊಲ ಹಾಂಗs ಬಿದ್ದರೂ ಚಿಂತಿಲ್ಲ. ನಮಗ ಕೊಡೂದಿಲ್ಲಂತೆ ಅದನ್ನ...." ಎಂದಳು ಪಾರ್ವತಮ್ಮ.

"ಹಿಂಗೇನು ? ಯಾರಂದರು ಈ ಮಾತನ್ನ ? ದೇಸಾಯರಂದರೇನು ?"

"ಅಲ್ಲ. ರಂಗಣ್ಣ ಅಂದ. ದೇಸಾಯರು ಹೂಂ ಅಂದರು."

"ಇದೆಲ್ಲಾ ಆ ರಂಗಣ್ಣಂದs ಕುತಂತ್ರ ಇರಬೇಕು. ಅವಗ ಏನಾದರೂ ಮಾಡಿ ಬುದ್ಧೀ ಕಲಿಸಬೇಕು ನಾವು ಶೇಖರಣ್ಣ. ಅವಗೂ ಹೊಲಾ ತೋಟಾ ಇಲ್ಲೇನು ? ಅದರಾಗ ಬೆಳೆ ಇಲ್ಲೇನು ? ನೋಡಿಬಿಡೋಣೇನು ಒಂದು ಕೈ !" ಎಂದ ಸಂಗಣ್ಣ.

"ಈಗs ಅಷ್ಟು ದೂರ ಹೋಗೋದು ಬ್ಯಾಡ. ಅವನ ತಂತ್ರಕ್ಕೆ ಸರಿಯಾಗಿ ಏನಾದರೂ ತಂತ್ರ ಮಾಡಿ ಇದರಿಂದ ಪಾರಾಗಬೇಕು. ನೀ ಏನೂ ಚಿಂತೀ ಮಾಡಬ್ಯಾಡವ್ವ. ಅಣ್ಣನಿಗೂ ಹೇಳು. ನಾವು ಏನೂ ಆಗದಾಂಗ ಮಾಡತೀವಿ. ಅಷ್ಟರಾಗ ಮತ್ತೇನಾದ್ರೂ ಆದರ ಹೇಳಿ ಕಳಿಸು. ಬರ್‍ತೀವಿ," ಎಂದು ಶೇಖರ ತಾಯಿಯನ್ನು ಊರಿಗೆ ಕಳುಹಿಸಿದ.

ರಾತ್ರಿಯೆಲ್ಲ ನಿದ್ರೆಯಿರಲಿಲ್ಲವಾದುದರಿಂದ ಎಲ್ಲರೂ ಮಲಗಿಕೊಂಡು ವಿಶ್ರಾಂತಿ ತೆಗೆದುಕೊಳ್ಳಬೇಕಾಗಿದ್ದಿತು. ಕಂಬಳಿಗಳನ್ನು ಹಾಸಿಕೊಂಡು ಎಲ್ಲರೂ ಒರಗಿದರು. ಮುದುಕ ಬಾಳಪ್ಪನೊಬ್ಬ ಗುಡಿಯ ಮುಂದಿನ ಗಿಡದ ಅಡಿಯಲ್ಲಿ ಕುಳಿತು ಕಾವಲುಗಾರನ ಕೆಲಸ ಮಾಡುತ್ತಿದ್ದ.

ಗುಂಪಿನವರೆಲ್ಲ ಕೊಂಚ ಕಾಲದಲ್ಲೇ ನಿದ್ರಾಧೀನರಾದರೂ ಶೇಖರನಿಗೂ ವಿಶ್ವನಾಥನಿಗೂ ನಿದ್ರೆ ಬರುವಂತಿರಲಿಲ್ಲ. ಮುಂದೇನು ಮಾಡಬೇಕು, ಯಾವ ಉಪಾಯದಿಂದ ಈ ಸಂಕಟವನ್ನು ದೂರಗೊಳಿಸಬೇಕು ಎಂಬ ಯೋಚನೆಗಳು ಅವರಿಬ್ಬರನ್ನೂ ಜಾಗ್ರತರನ್ನಾಗಿಸಿದ್ದುವು.

"ನಾ ಹೋಗಿಬಿಡೂದೊಂದೇ ಉಪಾಯ ಉಳಿದಂಗಾಯ್ತು," ಎಂದ ವಿಶ್ವನಾಥ, ಕುಗ್ಗಿದ ದನಿಯಲ್ಲಿ.

"ಆ ಮಾತು ಆಡಬ್ಯಾಡ ವಿಶ್ವನಾಥ, ಸೊಟ್ಟ ಒಂದು ಹೊಲಕ್ಕಾಗಿ ನಿನ್ನಂಥವನ್ನ ಕಳಕೊಳ್ಳುವುದಕ್ಕೆ ನಾವು ತಯಾರಿಲ್ಲ," ಎಂದ ಶೇಖರ.

"ಬರೀ ಹೊಲಾ ಅಲ್ಲ, ಶೇಖರಣ್ಣ. ನನ್ನಿಂದ ನಿಮ್ಮ ಮನೆಯವರಿಗೆಲ್ಲ ಉಪವಾಸ ವನವಾಸ ಬಂದೀತು. ನಾಲ್ಕು ವರ್ಷದ ಲಾವಣೀ ಹಣ ಕೊಡ ಬೇಕಂತಲ್ಲ, ಕೇಳಲಿಲ್ಲೇನು? ಕೊಡದಿದ್ದರ...."

"ಅದನ್ನು ನೋಡಿಕೊಳ್ಳಾಕ ಬಂದೀತು. ಏನಾರೆ ಮಾಡೋಣ...."

"ಏನು ಮಾಡುವ ಹಾಗಿದೆ ಈಗ? ನಾಲ್ಕು ವರ್ಷದ ಲಾವಣಿ ಅಂದರ ಎಷ್ಟಾಗತದ?"

"ಐದೂವರೆ ನೂರು ರೂಪಾಯಿ ಆಗಬಹುದು."

"ಅಷ್ಟು ಎಲ್ಲಿಂದ ತರೂದು ಈಗ? ನಮ್ಮ ಹತ್ತಿರ ಅಂತೂ ಇಲ್ಲವಲ್ಲ?"

"ಇಲ್ಲ...."

"ಅಂದಮ್ಯಾಲ ಈಗ ಬ್ಯಾರೆ ಉಪಾಯ ಏನೂ ಉಳೀಲಿಲ್ಲ. ಇಲ್ಲ—ಯಾರದಾದರೂ ಮನೀ ಒಡದು ದರೋಡೆ ಮಾಡಬೇಕು. ಆಮೇಲೆ ಹಣ ತರಬೇಕು...."

"ಅಂಥಾ ಕೆಲಸ ನನ್ನ ಕನಸು ಮನಸಿನಾಗೂ ಹೊಳೀಲಿಕ್ಕಿಲ್ಲ, ವಿಶ್ವನಾಥ. ನಾವು ಹೀಂಗೆಲ್ಲ ಮಾಡಿದೆವು ಅಂತ ಗಾಂಧಿಯವರಿಗೆ ತಿಳಿದರ ಎಷ್ಟು ನೊಂದು ಕೊಂಡಾರು ಅವರು?"

"ನೀನು ಮಾಡಬೇಕು ಅಂತ ಹೇಳಲಿಲ್ಲ ನಾನು. ಆದರ಼ ಹಣ ತರ ಬೇಕಾದರ ಏನಾದರೂ ಮಾಡಾಕ಼ ಬೇಕಲ್ಲ?"

ಶೇಖರ ಮೌನವಾಗಿದ್ದ. ಯಾವ ಉತ್ತರವನ್ನೂ ಕೊಡಲಿಲ್ಲ.

ಕೆಲಕಾಲ ಮೌನವಾಗಿ ಒರಗಿಕೊಂಡಿದ್ದು ವಿಶ್ವನಾಥ ಏನೋ ಯೋಚನೆ ಹೊಳೆದವರಂತೆ ನುಡಿದ :

"ನನಗೊಂದು ಉಪಾಯ ಹೋಳೀತದ ಶೇಖರಣ್ಣ. ಹಾಂಗ ಮಾಡಿದರ ಎಲ್ಲಾ ಮತ್ತೆ ನೆಟ್ಟಗ ನಡೀಬಹುದು...."

ಕಣ್ಣು ಮುಚ್ಚಿಕೊಂಡು ಯೋಚಿಸುತ್ತಿದ್ದ ಶೇಖರ ಮತ್ತೆ ಕಣ್ಣು ತೆರೆದು—"ಏನು?" ಎಂದು ಕೇಳಿದ.

ವಿಶ್ವನಾಥ ಉತ್ತರವೀಯುತ್ತಿದ್ದ ಹಾಗೇ ಹೊರಗೆ ಕುಳಿತಿದ್ದ ಬಾಳಪ್ಪ ಸಿಳ್ಳುಹಾಕಿದಂತಾಗಲು ಮಾತು ಅಷ್ಟಕ್ಕೇ ನಿಂತುಹೋಯಿತು. ಏನೋ

ಗಂಡಾಂತರದ ಸೂಚನೆ ಎಂದುಕೊಂಡು ಇಬ್ಬರೂ ಮೇಲಕ್ಕೆದ್ದರು. ಬಾಳಪ್ಪ ಮೆಲ್ಲಗಿನ ಧ್ವನಿಯಲ್ಲಿ ಹೇಳುತ್ತಿದ್ದ.

"ಯಾರೋ ಕುದುರೆ ಹತ್ತಿಕೊಂಡು ಬರೂಹಾಂಗ ಕಾಣಿಸುತ್ತೈತಿ. ಎಬ್ಬಿಸು ಎಲ್ಲಾರನ್ನೂ. ಪೋಲೀಸರು ಬಂದರೋ ಏನೊ. ಬಂದೂಕು ಗಿಂದೂಕು ಎಲ್ಲಾ ತಗೊಂಡು ತಯಾರಾಗಿರ್ರಿ ಹೊರಡೂದಕ್ಕ...."

ಒಂದೆರಡು ನಿಮಿಷಗಳಲ್ಲಿಯೆ ಎಲ್ಲರೂ ಎದ್ದು ಗುಡಿಯೊಳಗೆ ಇರಿಸಿದ್ದ ಸಾಮಗ್ರಿಗಳೆಲ್ಲವನ್ನು ಹೊತ್ತುಕೊಂಡು ಅಲ್ಲಿಂದ ಹೊರಡತೊಡಗಿದರು. ದಕ್ಷಿಣ ದಿಕ್ಕಿನ ಕಾಲುದಾರಿಯಿಂದ ಕುದುರೆಯ ಖುರಪುಟದ ದನಿ ಕೇಳಿಬರುತ್ತಿತ್ತು. ಉತ್ತರ ದಿಕ್ಕಿನ ಕಣಿವೆಯನ್ನಿಳಿದು ಮುಂದಿನ ಗುಡ್ಡವನ್ನೇರಿ ಅವರೆಲ್ಲರೂ ತಪ್ಪಿಸಿ ಕೊಂಡು ಹೋಗಬೇಕಾಗಿದ್ದಿತು.

"ನೀವೆಲ್ಲರೂ ಒಂದು ಫರ್ಲಾಂಗು ದೂರದ ಮ್ಯಾಲ ಅಡಗಿಕೊಂಡು ನಿಂತಿರ್ರಿ. ಯಾರು ಬರ್ತಾರ ಅನ್ನೂದು ಖಾತ್ರಿಯಾದ ಮ್ಯಾಲ ನಾನು ಸೂಚನೆ ಕೊಡ್ತೇನಿ," ಎಂದು ನುಡಿದು, ಶೇಖರ ವಿಶ್ವನಾಥನೊಂದಿಗೆ ಗಿಡದ ಬುಡದಲ್ಲಿ ನಿಂತುಕೊಂಡ. ಇಬ್ಬರ ಹತ್ತಿರವೂ ತುಂಬಿದ ಪಿಸ್ತೂಲುಗಳಿದ್ದುವು.

"ಕುದುರೆಯ ಕಾಲಿನ ಸಪ್ಪಳ ಬಿಟ್ಟರೆ ಮತ್ತೇನೂ ಕೇಳಿಸುವದಿಲ್ಲಲ್ಲ? ಯಾರೋ ಒಬ್ಬರs ಬರ್ತಾರೋ ಏನೊ!" ಎಂದ ವಿಶ್ವನಾಥ.

"ಹೇಳಾಕ ಬರೂದಿಲ್ಲಪ್ಪ. ಆದ್ದರಿಂದ ನಮ್ಮ ತಯಾರಿನೊಳಗ ನಾವು ಇರಬೇಕು."

ಒಂದೆರಡು ನಿಮಿಷಗಳಲ್ಲಿಯೆ ಸಮೀಪದಿಂದ ಸದ್ದು ಕೇಳಿಸತೊಡಗಿತು. ಕೊಂಚ ಅವಧಿಯಲ್ಲೇ ಕುದುರೆಯೂ ಅದರ ಮೇಲೆ ಕುಳಿತ ಸವಾರನೂ ದೃಷ್ಟಿಗೆ ಬಿದ್ದರು. ಮೇಲಕ್ಕೇರಿ ಬರುತ್ತಿದ್ದ ಸೂರ್ಯನ ಬೆಳಕಿನಲ್ಲಿ ಸವಾರನ ಮುಖ ಸ್ಫುಟವಾಗಿ ಎದ್ದು ಕಾಣಿಸುತ್ತಿದ್ದಿತು. ನೋಡುತ್ತ ನಿಂತಿದ್ದವರೆಲ್ಲರೂ ಒಮ್ಮೆಲೆ ಗಿಡಗಳ ಮರೆಗೆ ಹೋಗಿ ಅವಿತುಕೊಂಡರು. "ದೇಸಾಯರು!" ಎಂದ ಶೇಖರ "ಒಬ್ಬರೇ ಬಂದರೋ ಏನೊ!" ಎಂದ ವಿಶ್ವನಾಥ.

"ನಾವಿಲ್ಲಿ ಇರೂದು ಇವರಿಗೆ ಹ್ಯಾಂಗಾದರೂ ತಿಳೀತೋ! ಸಿ. ಐ. ಡಿ. ಗಳ ಕೆಲಸಾನೇ ಇರಬಹುದು ಇದೆಲ್ಲಾ. ಅವರಿಗೆ ಈ ಜಾಗದ ಪತ್ತೆ ಗೊತ್ತಾ ಗಿದ್ದೀತು...."

"ಈಗ ಇಲ್ಲಿ ನಿಲ್ಲೂದು ನೆಟ್ಟಗಲ್ಲ. ನಡಿ. ಲಗೂ ನಡಿ. ಪಾರಾಗಿ ಹೋಗೋಣ. ಹಿಂದೆ ಪೋಲೀಸರಿದ್ದರೂ ಇರಬಹುದು," ಎಂದು ಹೇಳಿ ವಿಶ್ವನಾಥ ಅಲ್ಲಿಂದ ಹೊರಟು ಕಣಿವೆಯಲ್ಲಿ ಇಳಿಯತೊಡಗಿದ, "ನೀನಿಲ್ಲೇ ಇರು ಬಾಳಪ್ಪ. ಅವರ್‍ಯಾತಕ್ಕ ಬಂದಿದ್ದರು ಅನ್ನೂದನ್ನ ತಿಳಕೋ. ನಾವು ಆ ಗುಡ್ಡದ ಕೆಳಗೆ ವಸ್ತಿ ಮಾಡತೀವಿ. ಅಲ್ಲಿಗೆ ಸುದ್ದಿ ಕಳಿಸು," ಎಂದು ಹೇಳಿ ಶೇಖರನೂ ಅಲ್ಲಿಂದ ಹೊರಟು ನಡೆದ.

ಬಾಳಪ್ಪ ಚಿಲುಮೆಯನ್ನು ತೆಗೆದು ತಂಬಾಕು ಹಾಕಿ ಹೊಗೆ ಎಳೆಯ ತೊಡತದ. ನಾಲ್ಕೈದು ನಿಮಿಷಗಳಲ್ಲಿ ದೇಸಾಯರು ಅಲ್ಲಿಗೆ ಬಂದು ಕುದುರೆ ಯಿಂದಿಳಿದರು. ಒಂದು ಕ್ಷಣ ಹಾಗೇ ನಿಂತುಕೊಂಡು ಗುಡಿಯನ್ನೂ, ಗಿಡದ ಬುಡದಲ್ಲಿ ಕುಳಿತಿದ್ದ ಬಾಳಪ್ಪನನ್ನೂ ನಿಟ್ಟಿಸಿ ನೋಡಿದರು. ಅವನ ಗುರುತೂ ತಿಳಿದಿರಬೇಕು. "ನೀನ್ಯಾಕಪಾ ಇಲ್ಲಿ, ಮುದುಕಾ?" ಎಂದರು.

ಬಾಳಪ್ಪ ಚಿಲುಮೆಯನ್ನು ಹಿಡಿದುಕೊಂಡೇ ಮೇಲಕ್ಕೆದ್ದು ದೇಸಾಯರನ್ನು ಸ್ವಾಗತಿಸುತ್ತ—"ಬನ್ನಿ ಧಣೇರs. ಕೂಡ್ರಬರ್‍ರಿ. ಇಂಥಾ ಗುಡ್ಡಗಾಡಿನಾಗ ಒಬ್ಬರs ಬಂದಿರೇನ್ರಿ?" ಎಂದ.

"ಕೆಲಸ ಇತ್ತು ಅಂತ ಬರಬೇಕಾಯ್ತು. ನೀನ್ಯಾಕ ಇಲ್ಲಿ?" ಎಂದು ಕೇಳಿದರು ದೇಸಾಯರು.

"ಅಯ್ಯೋ ಏನ ಹೇಳ್ಲಿ. ದೇಸಾಯರs. ನನ್ನ ಮಗನ್ನ ಕಳಕೊಂಡಾಗಿನಿಂದ ನನಗ ಪ್ರಪಂಚ ಎಲ್ಲಾ ಬೇಸರಾಗೈತಿ. ಅವನೊಬ್ಬನ್ನ ಬಿಟ್ಟರ ಬ್ಯಾರೆ ಯಾರಿದ್ದರು ನನಗ? ವಯಸ್ಸಿಗೆ ಬಂದ ಮಗಾನs ಸತ್ತುಹೋದ ಮ್ಯಾಲ ಆ ಊರಾಗ ಇದ್ದು ಜೀವ ಗವಿುಸೀತೇನ್ರಿ? ಅದಕ್ಕs ಇಲ್ಲಿಗೆ ಬಂದುಬಿಟ್ಟೆದ್ದೀನಿ. ಈ ದೇವರಿಗೂ ನೀರು ಹಾಕುವವರ್‍ಯಾರೂ ಇರಲಿಲ್ಲ. ಪೂಜೆ ಮಾಡಿಕೋಂತ ಬಾವಾನ ಹಾಂಗ ಇದ್ದೀನ್ರಿ. ಇಲ್ಲಿ ಮ್ಯಾಲ ಗವಿಯೊಳಗ ಸಾಧುಗಳೂ ಇದ್ದಾರ. ಅವರ ಸೇವಾನೂ ಮಾಡಲಿಕ್ಕಾಯ್ತು," ಎಂದ.

"ನೀನೂ ಸಾಧು ಆಗಾಂವ ಅನ್ನು—" ಎನ್ನುತ್ತಾ ದೇಸಾಯರು ಕುದುರೆ ಯನ್ನು ಗಿಡಕ್ಕೆ ಕಟ್ಟಿ ಗುಡಿಯನ್ನೆಲ್ಲ ಸುತ್ತಿ ನೋಡಿದರು. ಯಾರ ಸುಳಿವೂ ಇರಲಿಲ್ಲ. ಆದರೆ ಪಡಸಾಲೆಯಲ್ಲಿ ಅಲ್ಲಲ್ಲಿ ಬಿದ್ದುಕೊಂಡಿದ್ದ ರೊಟ್ಟಿಯ ಚಿಕ್ಕ

ತುಂಡುಗಳನ್ನೂ, ಗುಂಪಿನವರು ಸೇದಿ ಬಿಸುಟಿದ್ದ ಬೀಡಿಯ ತುಣುಕುಗಳನ್ನೂ ಕಂಡಾಗ ಅಲ್ಲಿ ಜನ ವಾಸಿಸಿದ್ದುದು ಸ್ಪಷ್ಟವಾದಂತಾಯಿತು.

"ಮುಂಜಾನೆ ಇಲ್ಲಿದ್ದವರೆಲ್ಲ ಎಲ್ಲಿಗೆ ಹೋದರೋ ?" ಎಂದರು ದೇಸಾಯರು ಕೊಂಚ ಗರ್ವದಿಂದ.

"ಯಾರ್ರೀ ಅಪಾ ಮುಂಜಾನೆ ಇದ್ದವರು ?" ಎಂದು ಏನನ್ನೂ ಅರಿಯದವನಂತೆ ನುಡಿದ ಬಾಳಪ್ಪ.

"ಸುಳ್ಳು ಹೇಳಬ್ಯಾಡೋ ನನ್ನ ಮುಂದೆ. ನನಗೆಲ್ಲಾ ಗೊತ್ತದ. ಆ ಚಳವಳೀ ಜನ ಎಲ್ಲಾ ಎಲ್ಲಿ ಹೋಯ್ತು ?" ಎಂದು ಗದರಿಸಿ ಕೇಳಿದರು, ದೇಸಾಯರು.

"ಯಾವ ಚಳವಳಿಯವರೋ ನನಗೊಂದೂ ಗೊತ್ತಿಲ್ಲಪ್ಪಾ. ನನಗಂತೂ ನನ್ನ ಮಲ್ಲನ್ನ ಕಳಕೊಂಡಾಗಿನಿಂದ ಜೀವಾನೇ ಬ್ಯಾಡಾಗೈತಿ."

"ಜೀವ ಬ್ಯಾಡಾಗೈತ್ಯೋ, ಜೇಲು ಬೇಕಾಗೈತ್ಯೋ ಮುದುಕಾ ? ಸಮ್ಮನ ಚಲೋ ಮಾತಿನಿಂದ ಹೇಳಿದರ ನೆಟ್ಟಗಾಯ್ತು. ಇಲ್ಲದಿದ್ದರ ಒಣಾ ತ್ರಾಸ ಆಗುತೈತಿ ನೋಡು ನಿನಗ, ಈ ಮುಪ್ಪಿನ ಕಾಲದಾಗ."

"ನನಗಂತೂ ಜೀವದ ಮ್ಯಾಲ ಆಸೇನ಼ ಉಳಿದಿಲ್ಲ ಧಣೇರ಼. ಈ ಎಲುವು ಇವತ್ತ಼ ಮಣ್ಣು ಕೂಡಿದರೂ ನನಗೇನೂ ಅನ್ನಿಸೂದಿಲ್ಲ. ನಿಮ್ಮ ಮುಂದ ಯಾಕ ಸುಳ್ಳು ಹೇಳಲಿ ನಾನು ? ಯಾರ್‍ಯಾರೋ ಬರ್‍ತಾರ, ಮಲಗಿ ಕೋತಾರ. ಬೆಳಗಾಗುತ್ತಲೂ ಎದ್ದು ಹೊರಟುಹೋಗ್ತಾರ. ನನ್ನಷ್ಟಕ್ಕೆ ನಾ ಒಂದು ಕಡೆ ಬಿದ್ದುಕೊಂತೀನಿ. ಅವರ ಪುರಾಣ ಎಲ್ಲಾ ತಗೊಂಡು ನಾ ಏನ ಮಾಡ್ಲಿ ಧಣೇರ಼!"

ದೇಸಾಯಿಯವರಿಗೆ ಕೋಪ ಉಕ್ಕೇರಿದಂತಾಯಿತು. "ಸಾಕುಮಾಡೋ ಆ ನಾಟಕಾ. ನೀನೂ ಈ ಚಳವಳಿಯ ಪುಂಡರ ಸಂಗಡ ಇದ್ದೀ ಅಂತ ಆ ಕುಲಕರ್ಣಿ ಹೇಳ್ತಿದ್ದ. ನನಗೆಲ್ಲಾ ಗೊತ್ತಾಗಿದೆ. ನೀನು ಉಳಿದುಕೊಬೇಕಾದರ ನಾ ಕೇಳೂದಕ್ಕೆಲ್ಲಾ ನೆಟ್ಟಗ ಉತ್ತರ ಕೊಡು. ನಮ್ಮ ವಿಶ್ವನಾಥ ಎಲ್ಲಿ ಇದ್ದಾನ? ರಾತ್ರಿ ಇಲ್ಲೇ ಇದ್ದನೋ ಇಲ್ಲೋ ?"

ಬಾಳಪ್ಪ ಒಂದೆರಡು ನಿಮಿಷ ಮೌನವಾಗಿ ಕುಳಿತಿದ್ದ. ಅಂತೂ ಆ ಕುಲಕರ್ಣಿ ಎಲ್ಲವನ್ನೂ ವರದಿ ಮಾಡಿದ್ದಾನೆ ಹಾಗಾದರೆ ? ಅವ ಅಂಥವನೆಂಬುದು

ಗೊತ್ತೇ ಇದ್ದಿತಲ್ಲ ತನಗೆ. ಗುಂಪಿನಲ್ಲಿರುವವರ ಹೆಸರುಗಳನ್ನೆಲ್ಲ ತಿಳಿಸಿರಬೇಕು ಆತ. ಇನ್ನು ದೇಸಾಯರಿಂದ ತಪ್ಪಿಸಿಕೊಳ್ಳುವುದು ಸುಲಭವಲ್ಲವೆಂದುಕೊಂಡು—

"ನೀವು ಹೇಳೂದು ನನಗ ಏನೂ ತಿಳೀಲಿಲ್ಲರೀ ಧಣೇರs. ಆ ಕುಲಕರ್ಣಿ ಯಾವಾಗಲೂ ಹಾಂಗs ಏನಾರ ಚಾಡಿ ಹೇಳಿ ಯಾರನ್ನಾರೆ ಹಾಳು ಮಾಡೋ ಮನುಷ್ಯಾ ಅವ. ಅವ ಹೇಳಿದ ಅಂತ ನೀವು ಎಲ್ಲಾ ನಂಬಬ್ಯಾಡ್ರಿ ಧಣೇರs. ನನಗ ಗೊತ್ತಿದ್ದರ ಹೇಳತಿರಲಿಲ್ಲೇನ್ರಿ ನಿಮಗ?" ಎಂದ.

"ಇಲ್ಲಿ ನೋಡು ಮುದುಕಾ, ಸುಮ್ಮನs ನನ್ನ ಸಿಟ್ಟಿಗೆಬ್ಬಿಸಬ್ಯಾಡ. ವಿಶ್ವನಾಥ ಎಲ್ಲಿದಾನ ಅನ್ನೂದನ್ನಷ್ಟ ಹೇಳಿಬಿಡು, ಸಾಕು. ನನಗೆ ಬ್ಯಾರೆ ಏನೂ ಬೇಕಾಗಿಲ್ಲ. ಅವನ್ನ ಮನೆಗೆ ಕರಕೊಂಡು ಹೋದರ ಸಾಕು."

"ನೀವು ಹೇಳೂದು ತಿಳೀತ್ರಿ ಧಣೇರs. ಆದರ ನನಗ ಗೊತ್ತಿರದಿದ್ದರ ಏನು ಹೇಳ್ಲಿ ನಿಮಗ? ಇನ್ನು ವ್ಯಾಲ ಏನಾದರೂ ಅವರು ಇಲ್ಲಿಗೆ ಬಂದರ ತಿಳಿಸತೀನ್ರಿ. ನೀವು ಬಂದಿದ್ದಿರಿ ಅಂತ ಅವರಿಗೂ ಹೇಳತೀನ್ರಿ."

"ಒಳ್ಳೇ ಮಾತಿಗೆ ನೀ ಬಾಯಿ ಬಿಡೂ ಹಾಂಗ ಕಾಣೂದಿಲ್ಲ. ಕೊರಡೆ ಯಿಂದ ಏಟು ಬಿದ್ದಾಗ ಹೇಳೂ ಮಂದಿ ನೀವು. ಆಗಲಿ. ಏನ್ಮಾಡೂದು. ಬಡಿಸಿಕೋ ಬೇಕಂತ ನಿನಗೆ ಆಶಾ ಇದ್ದರ ನಾನಾದರೂ ಏನ್ಮಾಡೇನು?" ಎಂದು ನುಡಿದು ದೇಸಾಯರು ಗಿಡದ ಹತ್ತಿರ ಬಂದು ಚಪ್ಪಾಳೆ ತಟ್ಟಿದರು. ಒಡನೆಯೆ ಎಲ್ಲಿಂದಲೊ ಹತ್ತು ಹದಿನೈದು ಜನ ಸಶಸ್ತ್ರ ಪೋಲೀಸರೂ ಮತ್ತು ಒಬ್ಬ ಫೌಜ ದಾರರೂ ಇನ್ನೊಬ್ಬರು ಸಾದಾ ವೇಷದ ಅಧಿಕಾರಿಗಳೂ ಎದುರಿಗೆ ಬಂದರು.

"ಎಲ್ಲಾರೂ ಪಾರಾಗಿ ಹೋಗಿದಾರ. ಇವ ಏನೂ ಹೇಳಲೊಲ್ಲ. ಹಿಡೀರಿ ಇವನ್ನ. ಇನ್ನೇನು ಮಾಡೋದು?" ಎಂದು ದೇಸಾಯರು.

ಅದುವರೆಗೆ ವಿನಯದಿಂದ ಮಾತಾಡುತ್ತಿದ್ದ ಮುದುಕ, ಪೋಲೀಸರನ್ನು ಕಂಡೊಡನೆ ದಿಗ್ಗನೆ ಎದ್ದು ನಿಂತು ದರ್ಪದ ದನಿಯಲ್ಲಿ ನುಡಿದ: "ನನ್ನ ಏನಂತ ಹಿಡೀತೀರಿ? ನಾ ಏನ ಮಾಡಿದ್ದೀನಿ? ಏನು ಹುಡುಗಾಟ ಆಗ್ಯೆತೇನು ನಿಮಗೆ?"

"ಹೌದು. ಮುದಿ ವಯಸ್ಸಿನಾಗ ಎಲ್ಲಾ ಹುಡುಗಾಟ ಆಗಿರಬೇಕು ನಿನಗೆ. ಗುಂಪಿಗೆಲ್ಲಾ ನೀನೇ ಪುಢಾರಿ ಆಗಿ ಮತ್ತ ವ್ಯಾಲ ಸೋಗು ಮಾಡತೀ

ಏನು? ನಮಗೆಲ್ಲಾ ಗೊತ್ತೈತಿ. ಬಾ," ಎಂದು ನುಡಿದು ಫೌಜದಾರರು ಅವನನ್ನು ಬಂಧಿಸಲು ಪೋಲೀಸರಿಗೆ ಆಜ್ಞಾಪಿಸಿದರು.

"ಖಬರ್‌ದಾರ್, ನನ್ನ ಮೈಗೆ ಕೈಹಚ್ಚಬೇಡಿರಿ," ಎಂದು ಮುದುಕ ಪ್ರತಿಭಟಿಸುತ್ತಿದ್ದ ಹಾಗೇ ಮೂವರು ಪೋಲೀಸರು ಬಂದು ಅವನನ್ನು ಬಿಗಿಯಾಗಿ ಹಿಡಿದುಕೊಂಡರು. ಕೈಗೆ ಬೇಡಿ ತೊಡಿಸಿದ್ದೂ ಆಯಿತು.

ಆ ದಿನವೆಲ್ಲ ಮುದುಕನಿಗೆ ಏಟುಗಳ ಮೇಲೆ ಏಟು ಬಿದ್ದವು. ಯಾವುದಕ್ಕೂ ಆತ ಸೊಪ್ಪು ಹಾಕಲಿಲ್ಲ; ಅಂಥ ಇಳಿ ವಯಸ್ಸಿನಲ್ಲೂ ಧೀರನಂತೆ ಎಲ್ಲವನ್ನೂ ಸಹಿಸಿದ. ಗುಂಪಿನವರ ಸುದ್ದಿ ತಿಳಿಸಿದರೆ ಬಿಟ್ಟುಬಿಡಲಾಗುವುದೆಂದು ಆಸೆ ತೋರಿಸಲಾಯಿತು. ಬಹುಮಾನ ಕೊಡುವುದಾಗಿಯೂ ಹೇಳಲಾಯಿತು. ಹೊಡೆತಗಳನ್ನೆಲ್ಲ ಮೌನವಾಗಿ ಸಹಿಸಿಕೊಂಡ ಮುದುಕನಿಗೆ ಈ ಲೋಭದ ಹೊಡೆತವನ್ನು ಮಾತ್ರ ಸಹಿಸಲಾಗಲಿಲ್ಲ. ಕೆರಳಿದ ಹುಲಿಯಂತೆ ಕನಲಿ ಒಂದೇ ಮಾತಿನಲ್ಲಿ ಉತ್ತರವಿತ್ತ: "ಕಿತ್ತೂರ ಚೆನ್ನವ್ವನ ನಾಡಿಗನಾಗ ಹುಟ್ಟಿ ಬೆಳದೀನಿ ನಾನು. ಇಂಥ ಹೇಸಿ ಕೆಲಸ ನಮ್ಮ ಮಂದಿ ಯಾರೂ ಮಾಡಾಕಿಲ್ಲ. ನಾಲಿಗೆ ಬಿಗಿಹಿಡಿದು ಮಾತಾಡಿರಿ."

## ೧೮

ಕೊಳ್ಳದಿಂದ ಹೊರಟ ಗುಂಪಿನವರು ಗುಡ್ಡವನ್ನೇರಿ ಇಳಿದು ಅಡ್ಡಹಾದಿಯಲ್ಲಿ ಎಂಟು ಹತ್ತು ಮೈಲು ನಡೆದು ಆ ಹಳ್ಳಿಗೆ ಬಂದು ಮುಟ್ಟಿದಾಗ ಮಧ್ಯಾಹ್ನ ಕಳೆದುಹೋಗಿದ್ದಿತು.

ಒಂದೆ ಸಮನೆ ಹತ್ತು ಹನ್ನೆರಡು ಮೈಲು ನಡೆದುಬಂದಿದ್ದುದರಿಂದಲೂ, ಹಿಂದಿನ ರಾತ್ರಿ ನಿದ್ರೆಯಿಲ್ಲದಿದ್ದುದರಿಂದಲೂ ಬೆಳಗಿನ ರೊಟ್ಟಿಯನ್ನುಳಿದು ಬೇರೇನೂ ಹೊಟ್ಟೆಗೆ ಬಿದ್ದಿರಲಿಲ್ಲವಾದುದರಿಂದಲೂ ಎಲ್ಲರಿಗೂ ತುಂಬಾ ದಣಿವೂ ಹಸಿವೂ ಆಗಿತ್ತು. ಎಲ್ಲಾದರೂ ಹೋಗಿ ಊಟ ಮಾಡಿ ದೇಹಗಳನ್ನೊರಗಿಸಬೇಕೆಂಬುದೇ ಅವರೆಲ್ಲರ ಬಯಕೆಯಾಗಿತ್ತು. ಹಗಲು ಹೊತ್ತಿನಲ್ಲಿ ಹೋಗಿ ಇರಲು ಸುರಕ್ಷಿತ ಸ್ಥಳವಾವುದೆಂಬುದನ್ನು ಕುರಿತು ಯೋಚಿಸುತ್ತಿದ್ದರು.

"ಸಂಗಪ್ಪ ಗೌಡರ ಮನಿಗೆ ಹೋಗಬಹುದು. ಆದರ ನಮ್ಮನ್ನ

ಯಾರಾದ್ರೂ ನೋಡಿಬಿಟ್ಟರ ನಮ್ಮಿಂದ ಅವರಿಗೆ ತ್ರಾಸ ಆದೀತು. ಪಾಪ. ಅವರಿಗ್ಯಾಕ ಸಂಕಟದಾಗ ಹಾಕಬೇಕು....?" ಎಂದ ಶೇಖರಪ್ಪ.

"ಸ್ವಾಮಿಗಳ ಮಠಕ್ಕೆ ಹೋಗಬಹುದಲ್ಲ? ಊಟಾನೂ ಆಗುತ್ತೈತಿ. ಗುಪ್ತವಾಗಿ ಇರೂದಕ್ಕೂ ಆಗುತ್ತೈತಿ," ಎಂದರು ಮಾಸ್ತರರು.

"ಅವರೂ ಚಳವಳಿಯ ಕಡೆಗೇ ಅದಾರೇನು?" ಎಂದು ವಿಶ್ವನಾಥ ಪ್ರಶ್ನಿಸಿದ.

"ಹೌದು, ಅವರೂ ನಮ್ಮವರು. ಮೊದಲಿನಿಂದಲೂ ಕಾಂಗ್ರೆಸ್ ಅಂದರ ಬಹಳ ಪ್ರೀತಿ ಅವರಿಗೆ. ಎಷ್ಟೋ ವರ್ಷಗಳಿಂದ ಖಾದೀ ಹಾಕುತಾ ಇದ್ದಾರ. ಕಾಂಗ್ರೆಸ್ಸಿನವರು ಯಾರೇ ಹೋದರೂ ಸಹಾಯ ಮಾಡುತಾರ."

"ಹೌದು. ಅಲ್ಲಿಗೇ ಹೋಗೋಣ," ಎಂದ ಶೇಖರಪ್ಪ.

ಊರ ಹೊರಗೆ ತೋಟವೊಂದಕ್ಕೆ ಹತ್ತಿಕೊಂಡ ಹಾಗೇ ಸ್ವಾಮಿಗಳ ಮಠ. ಊರನ್ನು ಪ್ರವೇಶಿಸಿದರೆ, ಯಾರಿಗೂ ಗೊತ್ತಾಗದಂತೆ ಮಠದಲ್ಲಿ ಪ್ರವೇಶಿಸಲು ಸಾಧ್ಯವಿದ್ದಿತು. ತೋಟದ ಒಡ್ಡಿನ ಮೇಲಿನಿಂದ ಹಾಯ್ದು ಎಲ್ಲರೂ ಮಠಕ್ಕೆ ಬಂದರು.

ಮಠದ ಕಟ್ಟಡ ಅಷ್ಟು ಭವ್ಯವಾದುದಾಗಿರಲಿಲ್ಲವಾದರೂ ಸಾಕಷ್ಟು ವಿಶಾಲವಾಗಿದ್ದಿತು. ದೊಡ್ಡ ಪಡಸಾಲೆ, ಅದರ ಮೇಲೆ ಹಳೆಯ ಕಾಲದ ಕಟ್ಟಡ. ಎದುರಿಗೆ ಬಸವಣ್ಣನ ಗುಡಿ. ಒಂದೆರಡು ಕೊಟಡಿಗಳೂ ಇದ್ದುವು. ಪಡಸಾಲೆಯ ಆಚೆಗೆ ಪೂಜಾಗೃಹ. ಅದರ ಕೆಳಗಡೆ ಹಿಂದಿನ ಸ್ವಾಮಿಗಳ ಸಮಾಧಿಯನ್ನೊಳಗೊಂಡ ನೆಲಮನೆಯೂ ಇದ್ದಿತು. ಪೂಜಾಗೃಹದಿಂದ ಸಮಾಧಿಗೆ ಹೋಗಲು ಮೆಟ್ಟಲುಗಳನ್ನು ಏರ್ಪಡಿಸಲಾಗಿದ್ದಿತು. ಪಡಸಾಲೆಯಲ್ಲಿ ಒಂದು ವ್ಯಾಸಪೀಠವನ್ನು ಹಾಕಿ ಅದರ ಮೇಲೆ ಸ್ವಾಮಿಗಳಿಗೆ ಆಸನವನ್ನೇರ್ಪಡಿಸಲಾಗಿದ್ದಿತು. ಅಲ್ಲಿ ಕುಳಿತುಕೊಂಡು ಸ್ವಾಮಿಗಳು ಭಕ್ತಾದಿಗಳಿಗೆ ದರ್ಶನವೀಯುವರು. ಪ್ರವಚನ ನಡೆಸುವರು. ಯಾರೂ ಇಲ್ಲದಿದ್ದಾಗ ಅಲ್ಲಿಯೆ ವ್ಯಾಸಂಗದಲ್ಲಿ ತಲ್ಲೀನರಾಗಿರುವರು. ಶೇಖರನ ಗುಂಪಿನವರು ಮಠವನ್ನು ಪ್ರವೇಶಿಸಿದಾಗ ಸ್ವಾಮಿಜಿ ಆಸನದ ಮೇಲೆ ಮಂಡಿಸಿರಲಿಲ್ಲ. ಬದಿಯಲ್ಲಿದ್ದ ಕಪಾಟಿನಿಂದ ಯಾವುದೋ ಒಂದು ಪುಸ್ತಕವನ್ನು ಹುಡುಕುವುದರಲ್ಲಿ ತೊಡಗಿದ್ದರು.

ಸ್ವಾಮೀಜಿಗೆ ನಲವತ್ತು ನಲವತ್ತೆರಡು ವರ್ಷಗಳ ವಯಸ್ಸಾಗಿರಬಹುದು. ಐದೂವರೆ ಅಡಿ ಎತ್ತರವಾದ ಗೌರವರ್ಣದ ಶರೀರದ ಮೇಲೆ ಕಾವಿಯ ಬಣ್ಣದ ಖದ್ದರಿನ ಕಫಣಿಯನ್ನು ಧರಿಸಿ, ಕಾಲುಗಳಲ್ಲಿ ಹಾವುಗೆಗಳನ್ನು ಮೆಟ್ಟಿದ್ದರು. ಕೊರಳಲ್ಲಿ ಒಂದು ರುದ್ರಾಕ್ಷಿ ಮಾಲೆ. ಹಣೆಯ ಮೇಲೆ ಎದ್ದು ಕಾಣಿಸುವ ವಿಭೂತಿಯ ಪಟ್ಟೆ. ಅಷ್ಟೆ, ಮುಗಿಯಿತು. ತೀರ ಸಾದಾ ವೇಷ ಅವರದು.

ಬಂದವರ ಅಡಿಗಳ ಸದ್ದು ಕಿವಿಗೆ ಬೀಳುತ್ತಲೂ ಸ್ವಾಮೀಜಿ ಹೊರಳಿ ನೋಡಿದರು. ಅವರ ಮುಖದ ಮೇಲೆ ಆನಂದ ಬೆರೆತ ಆಶ್ಚರ್ಯದ ಭಾವ ಮಿನುಗುವುದು ಕಾಣಿಸಿತು. ವಿಶ್ವನಾಥನೊಬ್ಬನನ್ನುಳಿದು ಅವರಲ್ಲಿ ಯಾರೂ ಸ್ವಾಮೀಜಿಗೆ ಅಪರಿಚಿತರಲ್ಲ. ಎಲ್ಲರೂ ಕಲ್ಲಾಪುರದವರೇ. ತಮ್ಮ ಭಕ್ತರೇ. ನಗುನಗುತ್ತ ಸ್ವಾಮೀಜಿ ಎಲ್ಲರನ್ನೂ ಸ್ವಾಗತಿಸಿದರು.

ಬಂದವರೆಲ್ಲ ಅಡ್ಡಬಿದ್ದು ವಂದಿಸಿದ ತರುವಾಯ ಸ್ವಾಮೀಜಿ ಕೇಳಿದರು : "ನೀವು ಮಾಡ್ತಾ ಇರುವ ಕೆಲಸದ ಸುದ್ದಿ ಎಲ್ಲಾ ನಮಗೆ ತಿಳಿದಿದೆ. ಬಹಳ ಸಂತೋಷ. ಬಹಳ ಸಂತೋಷ. ಈಗಲೂ ಎಲ್ಲೋ ಕೆಲಸಕ್ಕಾಗಿಯೇ ಹೊರಟ ಹಾಂಗೈತೆಲ್ಲ ?"

"ಈ ದಿನ ಏನೂ ಇಲ್ಲ ಸ್ವಾಮೀಜಿ. ನಿನ್ನೆ ರಾತ್ರಿ ಒಂದು ಕೆಲಸ ಮುಗಿಸಿದೆವು. ಅದರ ಫಲವೇ ಈ ಬಂದೂಕುಗಳು. ಮೊದಲು ಇವನ್ನೆಲ್ಲ ಎಲ್ಲಾದ್ರೂ ಮುಚ್ಚಿಡಬೇಕು. ಆಮೇಲೆ ನಾವೂ ತಮ್ಮ ಆಶ್ರಯದೊಳಗೇ ಇರಬೇಕಾಗೈತಿ. ಬೇರೆ ಜಾಗಾ ನೋಡುವ ತನಕ ಆದರೂ...." ಎಂದ ಶೇಖರ.

"ನಿಮಗೆ ಮನಸಿಗೆ ಬಂದಷ್ಟು ದಿನಾ ಇರ್ರಿ ಇಲ್ಲೇ. ಹ್ಯಾಂಗೂ ಕೆಳಗೆ ಸಮಾಧಿ ಅದ. ಈ ಸಾಮಾನೆಲ್ಲಾ ಅಲ್ಲಿಡಬಹುದು. ನೀವೂ ಅಲ್ಲಿ ಮಲಗಿಕೋಬಹುದು. ಏನೂ ಚಿಂತೀ ಮಾಡಬ್ಯಾಡ್ರಿ," ಎಂದರು ಸ್ವಾಮೀಜಿ.

"ಸಮಾಧಿಯ ಹತ್ತಿರ ನಾವು ಹೋದರ ಅದು ಅಪವಿತ್ರ ಆಗುವದಿಲ್ಲೇನು ಬುದ್ಧೀ ?" ಎಂದು ಮಾಸ್ತರರು ಸಂದೇಹ ವ್ಯಕ್ತಗೊಳಿಸಿದರು.

ಸ್ವಾಮೀಜಿ ನಕ್ಕು ನುಡಿದರು : "ಅಪವಿತ್ರ ? ಹುಚ್ಚಾ. ಆ ಸಮಾಧಿ ಯಾರದು ಅಂತ ತಿಳಿದಿದ್ದೀ ? ಪೂರಾ ಸ್ವಾತಂತ್ರ್ಯಪ್ರಿಯರಾಗಿದ್ದ ನಮ್ಮ ಹಿಂದಿನ ಗುರುಗಳ ಗುರುಗಳದ್ದು. ಕಿತ್ತೂರ ಚೆನ್ನಮ್ಮರಾಣಿ, ರಾಜ ಮಲ್ಲಸರ್ಜ ಇಬ್ಬರೂ ನಮ್ಮ ಗುರುಗಳ ಭಕ್ತರಾಗಿದ್ದರು. ಅವರಿಬ್ಬರೂ ಮಠಕ್ಕೂ ಬಂದು ಹೋಗಿದಾರ.

ಅಂಥ ಸ್ವಾತಂತ್ರ್ಯವೀರರ ಗುರುಗಳಾಗಿದ್ದವರ ಸಮಾಧಿಯ ಹತ್ತಿರ ನಿಮ್ಮಂಥ ಸ್ವಾತಂತ್ರ್ಯದ ಸೈನಿಕರು ಮಲಗಿದರೆ ಅವರ ಆತ್ಮಕ್ಕೆಷ್ಟು ಸಂತೋಷವಾದೀತು! ನೀವು ಏನೂ ವಿಚಾರ ಮಾಡದೆ ಇಲ್ಲಿ ಆರಾಮಾಗಿ ಇರ್ರಿ," ಎಂದು ಎಲ್ಲರನ್ನೂ ಊಟಕ್ಕೆಬ್ಬಿಸಿದರು.

ಹತ್ತು ಮೈಲುಗಳ ಪ್ರಯಾಣದ ತರುವಾಯ ಮಠದ ಪ್ರಸಾದ—ರೊಟ್ಟಿ, ಅವರೆಕಾಳಿನ ಪಲ್ಯ, ಕಡಲೆಕಾಯಿ ಚಟ್ಣಿ, ಬೇಳೆ—ತುಂಬಾ ರುಚಿಕರವಾಗಿ ಪರಿಣಮಿಸಿತು. ಊಟಮಾಡುತ್ತಿದ್ದವರನ್ನೆಲ್ಲ ಸಮಾಧಾನದಿಂದ ನಿರುಕಿಸುತ್ತ ಸ್ವಾಮೀಜಿ ವಿಶ್ವನಾಥನ ಕಡೆ ಬೆರಳುಮಾಡಿ, "ಈತ ಯಾರು? ಕಾಲೇಜು ವಿದ್ಯಾರ್ಥಿಯ ಹಾಂಗ ಕಾಣಿಸುತಾನಲ್ಲ?" ಎಂದರು.

"ಸರಿಯಾಗಿ ಗುರುತಿಸಿದಿರಿ ಬುದ್ಧೀ. ಅವರು ಕಾಲೇಜಿನಾಗ ಕಲಿಯುವವರೇ. ನಮ್ಮ ಸಂಗಡ ಕೆಲಸಕ್ಕೆ ಸೇರಿದ್ದಾರ. ಬಾಬಾಸಾಹೇಬ ದೇಸಾಯರು ನಿಮಗ ಗೊತ್ತಲ್ಲ—ಅವರ ಮಕ್ಕಳು. ವಿಶ್ವನಾಥಪ್ಪ," ಎಂದು ಶೇಖರ ಪರಿಚಯ ಮಾಡಿಕೊಟ್ಟ.

"ಬಹಳ ಸಂತೋಷ, ಬಹಳ ಸಂತೋಷ," ಎಂದು ನಕ್ಕು ಸ್ವಾಮೀಜಿ ಹೇಳಿದರು: "ಅಂತೂ ಬಾಬಾಸಾಹೇಬರಿಗೆ ಸಂಕಟ ಬಂದಿರಬೇಕಲ್ಲ ಇವನಿಂದ? ಅವರಿಗೂ ಸರಕಾರಕ್ಕೂ ದೊಡ್ಡ ನೆಂಟಸ್ತನ. ದಿವಾನಬಹದ್ದೂರ ಆಗಬೇಕಂತ ಪ್ರಯತ್ನಿಸ್ತಾ ಇದಾರ ಅವರು. ಇವ ಚಳವಳಿಗೆ ಸೇರಿದರ ಅವರ ಪದವಿಯ ಗತಿಯೇನು?"

"ಅದಕ್ಕಃ ಇವರನ್ನ ಏನಾದರೂ ಮಾಡಿ ನಮ್ಮಿಂದ ಬಿಡಿಸಿ ಮನೆಗೆ ಕರಕೊಂಡು ಹೋಗಬೇಕಂತ ಪ್ರಯತ್ನ ನಡಸಿದ್ದಾರ ಅವರು. ಇಂದು ನಾವಿತ್ತ ಓಡಿಬಂದದ್ದು ಅವರಿಂದಾಗಿಯೆ," ಎಂದು ನುಡಿದು ಶೇಖರ ಬೆಳಗ್ಗೆ ನಡೆದುದೆಲ್ಲವನ್ನು ಸ್ವಲ್ಪದರಲ್ಲಿಯೇ ವಿವರಿಸಿ ಹೇಳಿದ.

"ಹಾಂಗಾದರ ಇನ್ನುಮ್ಯಾಲ ದೇಸಾಯರಿಗೆ ಇನ್ನೂ ಹಟ ಬೀಳುತದ ಅನ್ನು. ಅವರ ಸ್ವಭಾವ ನಮಗೂ ಗೊತ್ತು. ಒಂದು ಕೆಲಸಕ್ಕ ಬಿದ್ದರಂದರ ಪ್ರತ್ಯಕ್ಷ ಶಿವನೇ ಎದುರಾದರೂ ಬಿಡುವ ಆಸಾಮಿ ಅಲ್ಲ ಅದು. ಮಗನ ಮ್ಯಾಲ ಪ್ರೀತಿಯೂ ಬಹಳ. ಸರಕಾರದ ಮ್ಯಾಲೂ ಬಹಳ ಭಕ್ತಿ. ಎರಡೂ ಕೂಡಿದಾ

ವಂದವ್ಯಾಲ ಇವ ಚಳವಳಿ ಬಿಡುವ ತನಕ ಅವರೇನೂ ಸುಮ್ಮನೆ ಕೂಡುವ ಹಾಂಗ ಕಾಣುವದಿಲ್ಲ," ಎಂದರು ಸ್ವಾಮೀಜಿ.

"ನನ್ನಿಂದಾಗಿ ಶೇಖರಣ್ಣನ ಮನೆಯವರಿಗೆ ಒಣಾ ತ್ರಾಸ ಸ್ವಾಮೀಜಿ. ಅದನ್ನ ಮೊದಲು ತಪ್ಪಿಸಬೇಕಾಗಿದೆ," ಎಂದ ವಿಶ್ವನಾಥ.

"ಚಿಂತಿ ಮಾಡಬ್ಯಾಡ್ರಿ. ಏನಾದರೂ ಮಾಡಲಿಕ್ಕೆ ಬಂದೀತು. ಶಿವ ಇದ್ದಾನ...." ಎಂದು ನುಡಿದು ಸ್ವಾಮೀಜಿ ಶತಪಥ ಹಾಕತೊಡಗಿದರು.

"ಬಾಳಪ್ಪನ್ನ ಅಲ್ಲೇ ಬಿಟ್ಟುಬಂದೆವು. ಏನಾಯ್ತೋ ಏನೊ...." ಎಂದು ನುಡಿದ ಶೇಖರ.

"ಅವನಿಗೇನಾಗುತ್ತೈತಿ ? ದೇಸಾಯರು ಅವನ್ನೇನು ಮಾಡಿಯಾರು ? ನಮ್ಮನ್ನ ಕೇಳಿ ಹೊರಟುಹೋಗಿದ್ದಾರು...." ಎಂದ ಸಂಗಣ್ಣ.

"ಬರೀ ದೇಸಾಯರೊಬ್ಬರs ಬಂದಿದ್ದರಂತ ಹ್ಯಾಂಗ ಹೇಳ್ತೀ ? ಅವರ ಹಿಂದಿನಿಂದ ಪೋಲೀಸರು ಬಂದಿರಲಿಕ್ಕಿಲ್ಲ ಅಂತ ಹ್ಯಾಂಗ ಹೇಳಾಕ ಬರುತ್ತೈತಿ ?" ಎಂದರು ಮಾಸ್ತರರು.

"ಅವನನ್ಯಾಕ ಬಿಟ್ಟುಬಂದಿರಿ ಅಲ್ಲಿ ?" ಎಂದು ಕೇಳಿದರು ಸ್ವಾಮೀಜಿ.

"ಯಾವಾಗಲೂ ಅವ ಅಲ್ಲೇ ಕಾವಲು ಮಾಡ್ತಾ ಇರ್‍ತಿದ್ದ ಬುದ್ಧೀ, ಗುಡಿಯ ಪೂಜಾರಿಯ ವೇಷ ಹಾಕಿಕೊಂಡು. ಯಾರು ಬಂದಿದ್ದರು, ಏನು ಅನ್ನೂದು ತಿಳೀಬೇಕಲ್ಲ ಅಂತ ಅವನ್ನ ಅಲ್ಲೇ ಬಿಟ್ಟೆವು...." ಎಂದ ಶೇಖರ.

"ಬಿಡಬಾರದಾಗಿತ್ತೋ ಏನೊ. ದೇಸಾಯರೊಬ್ಬರೇ ಬಂದಿರಲಾರರು ಅಂತ ನನಗೂ ಅನಿಸುತದ. ಅವರ ಹಿಂದೆ ಪೋಲೀಸ್‌ಪಾರ್ಟಿ ಬಂದಿರಬೇಕು. ಬಾಳಪ್ಪನ್ನ ಹಿಡಿದು ಒಯ್ದಿದ್ದರೂ ಒಯ್ದಿರಬಹುದು ಅವರು...." ಎಂದರು ಸ್ವಾಮೀಜಿ.

"ಅಂಥ ಮುದುಕನ್ನ ಹಿಡಿದು ಏನ್ಮಾಡ್ತಾರ ಸ್ವಾಮೀ ಪೋಲೀಸರು ?"

"ಮುದುಕ ಇರಲಿ, ಮುದುಕಿ ಇರಲಿ. ನಿಮ್ಮ ಗುಂಪಿನ ಸುದ್ದಿಯನ್ನ ತಿಳಿದುಕೊಳ್ಳೊದಕ್ಕೆ ಯಾರು ಸಿಕ್ಕರೂ ಹಿಡಿಯುವವರೇ ಅವರು. ನಮ್ಮ ಮಠದಾಗ ನೀವಿರೂದು ಗೊತ್ತಾಯಿತಂದರ ಇಲ್ಲಿಗೆ ಬಂದು ನಮ್ಮನ್ನ ಹಿಡಿಯಲಿಕ್ಕೂ ಹಿಂದೆಮುಂದೆ ನೋಡುವವರಲ್ಲ ಅವರು," ಎಂದು ನುಡಿದು ಸ್ವಾಮೀಜಿ ನಕ್ಕರು.

"ನಿಮ್ಮನ್ನ ಹಿಡಿಯೂ ಧೈರ್ಯ ಎಲ್ಲೈತಿ ಆ ಪೋಲೀಸರಿಗೆ?" ಎಂದ ಸಂಗಣ್ಣ.

"ಅಂಥಾ ಮಹಾತ್ಮನ್ನs ಹಿಡಿಯೂ ಧೈರ್ಯ ಅದ, ಇನ್ನು ನಮ್ಮಂಥವರನ್ನ ಹಿಡಿಯೂದು ಏನು ದೊಡ್ಡದೋ ತಮ್ಮ? ಅವರ ಕರ್ತವ್ಯ ಅದು. ಮನಸ್ಸಿಲ್ಲದಿದ್ದರೂ ಹಿಡಿಯಬೇಕಾಗುತದ. ನೌಕರಿ ಅಂದರ ಹಾಂಗs. ಬಹಳ ಕೆಟ್ಟದ್ದು...."

"ಈ ನೌಕರಿಗಳಿಗೆಲ್ಲ ರಾಜೀನಾಮೆ ಕೊಡಬೇಕಂತ ಗಾಂಧೆಪ್ಪ ಹೇಳಿಲ್ಲೇನು ಬುದ್ಧಿ? ಇವರೆಲ್ಲ ಯಾಕ ರಾಜೀನಾಮೆ ಕೊಡಬಾರದು?"

"ಅವರಿಗೂ ನೂರಾರು ಕಷ್ಟ ಇರಬಹುದಪ್ಪ. ರಾಜೀನಾಮೆ ಕೊಡೂದು ಸುಲಭದ ಕೆಲಸ ಅಲ್ಲ. ಪ್ರತಿಯೊಬ್ಬರಿಗೂ ಸಂಸಾರ ಅನ್ನೂದು ಇರತದ. ತಾನು, ತನ್ನವರು, ತನ್ನ ಹೆಂಡರು ಮಕ್ಕಳು ಅನ್ನೂದು ಇರುತದ. ಅವರ ಹೊಟ್ಟೆಪಾಡಿಗಾಗಿ ಇವರು ದುಡೀಬೇಕಾಗುತದ. ಹೀಂಗs ಇರತಾವ ಎಲ್ಲರಿಗೂ. ನಮ್ಮ ಹಾಂಗ ಎಲ್ಲರೂ ಸನ್ಯಾಸಿಗಳಾಗಿ ಇರೂದು ಎಲ್ಲಿ ಸಾಧ್ಯ ಹೇಳು...." ಎಂದು ಸ್ವಾಮೀಜಿ ಗಟ್ಟಿಯಾಗಿ ನಕ್ಕರು.

"ಸಂಸಾರ ಯಾರಿಗಿರೂದಿಲ್ಲ ಬುದ್ಧೀ? ನಮಗ ಇಲ್ಲೇನು? ಚಳವಳಿಯೊಳಗ ಕೆಲಸ ಮಾಡುತಿರುವವರಿಗೆಲ್ಲಾ ಇಲ್ಲೇನು? ಕಷ್ಟ, ದುಃಖ ಎಲ್ಲರಿಗೂ ಇರ್ತಾವ. ಈ ನೌಕರರಿಗೆ ಮಾತ್ರ ಇರ್ತಾವೇನ್ರಿ?" ಎಂದು ಸಂಗಣ್ಣ ಸವಾಲು ಹಾಕಿದ.

"ನಿಮಗೂ ನೌಕರದಾರರಿಗೂ ಇರುವ ಭೇದವನ್ನ ಮೊದಲು ವಿಚಾರ ಮಾಡಿರಿ. ನೀವು ರೈತರು. ಹೊಲದೊಳಗ ಬೆವರು ಸುರಿಸಿ ಕೆಲಸ ಮಾಡುವವರು. ನಿಮ್ಮ ಹೆಂಡರು ಮಕ್ಕಳು ಎಲ್ಲರೂ ನಿಮ್ಮ ಹಾಂಗs ದುಡಿಯುವವರು. ನೌಕರದಾರರ ಹೆಂಡರು ಮಕ್ಕಳಿಗೆ ನಿಮ್ಮವರ ಹಾಂಗ ಬಿಸಿಲೊಳಗ ದುಡೀಲಿಕ್ಕೆ ಬರೋದಿಲ್ಲ. ಇವರು ನೌಕರಿ ಮಾಡಿ ಸಂಬಳಾ ತಂದರೆ ಅವರ ಹೊಟ್ಟೆ ತುಂಬೀತು. ಇಲ್ಲದಿದ್ದರ? ಅದಕ್ಕs ಅವರಿಗೆ ತ್ರಾಸ, ಈ ರಾಜೀನಾಮೆ ಅಂದರ. ನಮ್ಮ ವೈರಿಗಳನ್ನೂ ಪ್ರೀತಿಯಿಂದ ಕಾಣಬೇಕಂತ ಗಾಂಧಿಯವರು ಹೇಳಿಲ್ಲೇನು? ಈ ನೌಕರದಾರರಂತೂ ನಮ್ಮವರೇ. ಹೊಟ್ಟೆಗಾಗಿ ಪರಕೀಯರ ಸೇವೆ ಮಾಡು

ತ್ತಿದ್ದಾರ. ಅವರನ್ನ ನಾವು ಯಾವಾಗಲೂ ಸಹಾನುಭೂತಿಯಿಂದ ನೋಡಬೇಕು" ಎಂದರು ಸ್ವಾಮೀಜಿ.

"ನೀವು ಹೇಳೋದು ಸರಿ, ಬುದ್ಧೀ. ಆದರ ಇದೇ ನಮ್ಮ ಕಡೆಯ ಹೋರಾಟ ಅಂತ ಗಾಂಧೀಜೀ ಹೇಳಿ ಹೋಗಿದ್ದಾರ. ದೇಶಕ್ಕಾಗಿ ತಾವೂ ಏನಾದರೂ ಮಾಡಬೇಕು ಅನ್ನೂದು ಇವರಿಗೆ ತಿಳೀಬಾರದೇನ್ರಿ ?" ಎಂದ ಶೇಖರ.

"ತಿಳೀತಿರಬಹುದು. ಆದರ ಏನೂ ಮಾಡಲಿಕ್ಕೆ ಸಾಧ್ಯವಾಗದಿರ ಬಹುದು. ಮಾಡುವ ಮನಸ್ಸಿದ್ದವರೆಲ್ಲ ಮಾಡಬೇಕು. ಬೇರೆಯವರನ್ನು ಅಂದು ಉಪಯೋಗವಿಲ್ಲ. ಹಾಂಗ ನೋಡಿದರ, ಕಾಂಗ್ರೆಸ್ಸಿನವರೇ ಎಷ್ಟು ಮಂದಿ ಕೆಲಸಾ ಮಾಡ್ತಾ ಇದ್ದಾರ ಈಗ? ಆ ಶಾಮರಾಯರು, ಆ ರಾಮರಾಯರು, ಆ ಶಿವನ ಗೌಡರು, ಆ ಮಂತ್ರಿಗಳಾಗಿದ್ದವರು, ವಿಟ್ಟಪ್ಪನವರು ಎಲ್ಲಾ ಎಲ್ಲಿದಾರ? ಏನ್ಮಾಡ್ತಾ ಇದಾರ ? ಯಾರಾದರೂ ಅವರ ಸುದ್ದೀ ಕೇಳೀರೇನು ?" ಎಂದರು ಸ್ವಾಮೀಜಿ.

"ಹೌದು ಬುದ್ಧೀ ನೀವು ಹೇಳೋದು ನಿಜ. ಇವರ್ಯಾರೂ ಚಳವಳಿಗೆ ಬಿದ್ದಿಲ್ಲ. ಎಲ್ಲರೂ ಮುಂಬಯಿ ಪುಣೇದಂಥಾ ಪಟ್ಟಣಗಳಲ್ಲಿ ಕೂತಾರ" ಎಂದ ಶೇಖರ.

"ಇಂಥಾ ದೊಡ್ಡ ದೊಡ್ಡ ಮುಖಂಡರೇ ಏನೂ ಮಾಡದೆ ಸುಮ್ಮನೆ ಕೂತಿದ್ದಾರಂದ ಮ್ಯಾಲ—ಈ ಸರಕಾರೀ ನೌಕರದಾರರು ಏನು ಮಾಡಿಯಾರು, ನೀವೇ ಹೇಳ್ರಿ ! ರಾಜೀನಾಮೆ ಕೊಡೂದಕ್ಕ, ತ್ಯಾಗ ಮಾಡೂದಕ್ಕ ಉತ್ಸಾಹ ಆದರೂ ಹ್ಯಾಂಗ ಬಂದೀತು ಅವರಿಗೆ?" ಎಂದರು ಸ್ವಾಮೀಜಿ. ಅವರ ಧ್ವನಿ ಯಲ್ಲಿ ವಿಷಾದ ವ್ಯಕ್ತವಾಗುತ್ತಿದ್ದುದು ಸ್ಪಷ್ಟವಾಗಿದ್ದಿತು. "ನಿಮ್ಮಂಥ ಹಳ್ಳಿಯ ಬಂಟರೇ ಮಾಡಬೇಕು. ನಿಮ್ಮಿಂದಲೇ ಸ್ವಾತಂತ್ರ್ಯ ಬರುವ ಹಾಂಗಾಗಬೇಕು. ನೀವು ತಂದುಕೊಡೋ ಸ್ವಾತಂತ್ರ್ಯವನ್ನ ಎಲ್ಲರೂ ಅನುಭವಿಸಲಿ" ಎಂದು ನುಡಿದು ಅವರು ಮತ್ತೆ ತಮ್ಮ ಪುಸ್ತಕವನ್ನು ಹುಡುಕತೊಡಗಿದರು.

"ನಮ್ಮಿಂದ ನಿಮ್ಮ ಮ್ಯಾಲ ಏನಾದರೂ ಬಂದೀತು ಬುದ್ಧೀ!" ಎಂದು ಶೇಖರ ಸಂಕೋಚದಿಂದ ನುಡಿದ.

ಪುಸ್ತಕ ಹುಡುಕುತ್ತಿದ್ದ ಸ್ವಾಮೀಜಿ ಅವನ ಕಡೆಗೆ ತಿರುಗಿ ನಗುತ್ತ

ನುಡಿದರು : “ ಬಂದರೂ ಒಳ್ಳೆಯದಾದೀತು ಬಿಡು. ನಮಗೂ ಒಂದು ಸಲ ಹಿಂಡಲಗಿ ಜೇಲು ನೋಡುವ ಆಸೆ ಆಗಿದೆ.”

ಆ ಮಾತಿನಿಂದಾಗಿ ಗುಂಪಿನವರೆಲ್ಲ ನಗತೊಡಗಿದರು.

೧೯

ತಟ್ಟೆಯನ್ನು ತುಟಿಯವರೆಗೆ ತಂದು, ಅದರೊಳಗಿನ ನುಚ್ಚು ಮಜ್ಜಿಗೆಯನ್ನು ಕುಡಿಯಲು ಮನಸ್ಸಾಗದೆ ಹಾಗೇ ಕೆಳಗಿರಿಸಿದ ಲಿಂಗಣ್ಣ. ಮಧ್ಯಾಹ್ನದ ಹೊತ್ತು. ಬೆಳಗಿನಿಂದ ಹೊಲದಲ್ಲಿ ಕೆಲಸಮಾಡಿ ಆಗತಾನೆ ಮನೆಗೆ ಬಂದಿದ್ದ. ವಿಪರೀತ ಹಸಿವೆಯಾಗಿದ್ದರೂ ಅವನಿಗೆ ನುಚ್ಚು ಉಣ್ಣುವ ಮನಸ್ಸಾಗಲಿಲ್ಲ.

ಎದುರಿಗಿನ ಕೊಟ್ಟಿಗೆಯಲ್ಲಿ ದನಗಳು ಮೆಲಕುಹಾಕುತ್ತ ಮಲಗಿದ್ದುವು. ಎರಡು ಎಮ್ಮೆ, ಒಂದು ಹಸು, ನಾಲ್ಕು ಕರುಗಳು, ಒಂದು ಹೋರಿ. ಅವುಗಳ ಕಡೆಗೆ ದೃಷ್ಟಿ ಹೋದಾಗಲೆಲ್ಲ ಅಭಿಮಾನ ಆನಂದಗಳಿಂದ ಉಕ್ಕೇರುತ್ತಿದ್ದ ಲಿಂಗಣ್ಣನ ಹೃದಯ ಇಂದು ಕಳವಳದಿಂದ ಭಾರವಾಗತೊಡಗಿತು. ಹೊಲದಲ್ಲಿ ಕಟ್ಟಿದ್ದ ಎರಡು ಎತ್ತುಗಳೂ ಅವನ ಬಗೆಗಣ್ಣಿನ ಎದುರಿಗೆ ಬಂದು ನಿಂತಂತಾಯಿತು. ಎಷ್ಟು ಪ್ರೀತಿಯಿಂದ, ಎಷ್ಟು ಆತ್ಮೀಯತೆಯಿಂದ ಅವನು ಅವುಗಳನ್ನೆಲ್ಲ ಸಾಕಿ ಬೆಳೆಯಿಸಿದ್ದ ! ಹಸಿರು ಹುಲ್ಲು, ಗರಿಕೆ, ಜೋಳದ ದಂಟು, ಹುರುಳಿ— ಯಾವುದಕ್ಕೂ ಕಡಿಮೆ ಮಾಡಿರಲಿಲ್ಲ. ತನ್ನ ಮಕ್ಕಳ ಮೇಲೆ ಎಂಥ ಪ್ರೀತಿಯಿತ್ತೋ ಅದಕ್ಕೂ ಹೆಚ್ಚಿನ ಪ್ರೀತಿ ಅವುಗಳ ಮೇಲಿತ್ತು. ಅವನ್ನು ಬಿಟ್ಟರೆ ಬೇರಾವ ಆಸ್ತಿಯೂ ಅವನಿಗಿರಲಿಲ್ಲ. ಸ್ವಂತ ಹೊಲವಂತೂ ಇರಲೇ ಇಲ್ಲ. ಇದ್ದುದು ಅದೊಂದು ಮನೆ, ಈ ದನಕರುಗಳು, ಕೃಷಿಯ ಸಾಮಗ್ರಿಗಳು–ರಂಟೆ, ನೇಗಿಲು, ಬಂಡಿ—ಅಷ್ಟೆ.

ಅರವತ್ತು ಎಪ್ಪತ್ತು ವರ್ಷಗಳಿಂದ ತಾವು ಹರಗಿ ಬಿತ್ತಿದ ಆ ಹೊಲ ! ಅದಕ್ಕಾಗಿ ತನ್ನ ಅಜ್ಜ, ತನ್ನ ತಂದೆ, ತನ್ನ ತಾಯಿ, ತಾನು, ತನ್ನ ಹೆಂಡರು ಮಕ್ಕಳು ಎಷ್ಟು ಬೆವರು ಸುರಿಸಲಿಲ್ಲ. ಮಳೆಯ ನೀರಿಗೆ ಸರಿಸಮನಾಗಿ ತಮ್ಮ ಬೆವರಿನ ನೀರು ಇಳಿದಿದ್ದರೂ ಇದ್ದೀತು. ಬಂಜರುಭೂಮಿಯಾಗಿ ಬಿದ್ದುದನ್ನು ತಮ್ಮ ದುಡಿತದಿಂದ ಫಲವತ್ತಾದ ಹೊಲವಾಗಿ ಮಾರ್ಪಡಿಸಿಯಾಗಿದ್ದಿತು. ದೇವರ ದಯೆಯಿಂದ ಕಾಲಕ್ಕೆ ಸರಿಯಾಗಿ ಮಳೆ ಬಂದರೆ ಚೆನ್ನ ಬೆಳೆದ ಹಾಗೆ

ಬೆಳೆ ಬರುತ್ತಿತ್ತು. ಮೂರು ನಾಲ್ಕು ವರ್ಷಗಳಿಂದ ಮಳೆ ಬರಲಿಲ್ಲ. ಬೆಳೆ ಬರಲಿಲ್ಲ. ಮನೆಯವರೆಲ್ಲ ಬೆವರಿಳಿಸಿ ದುಡಿದದ್ದೂ ವ್ಯರ್ಥವಾಗಿತ್ತು. ಬಂದ ಕಾಳು ಹೊಟ್ಟೆಗೇ ಸಾಲುವಂತಿರಲಿಲ್ಲ. ಇನ್ನು ಲಾವಣಿ ಹಣ ಕೊಡುವುದು ಹೇಗೆ ಸಾಧ್ಯವಾದೀತು? ಕೊಡುವ ಬಾಕಿ ಉಳಿಯಿತು, ಬೆಳೆಯಿತು. ದೇಸಾಯರು ಒಳ್ಳೆಯವರು. ಕಷ್ಟಕಾಲದಲ್ಲಿ ಕೇಳಲಿಕ್ಕಿಲ್ಲವೆಂಬ ಭರವಸೆಯ ಮೇಲೆ ಕಾಲ ತಳ್ಳಿದ್ದಾಯಿತು. ಈಗ ಒಮ್ಮೆಲೆ ಎಲ್ಲ ಬಾಕಿಯನ್ನೂ ತೀರಿಸಬೇಕೆಂದು ಒತ್ತಾಯ ಬಂದಿದೆ.

ಐದೂವರೆ ನೂರು ರೂಪಾಯಿ!

ಎಲ್ಲಿಂದ ತರುವುದು ಅಷ್ಟು ರೂಪಾಯಿಗಳನ್ನು?

ಸಾಲವನ್ನಾದರೂ ಮಾಡಿ ತರಬೇಕೆಂದರೆ ಅಷ್ಟು ಹಣವನ್ನು ಕೊಡುವಂಥವರಾದರೂ ಯಾರಿದಾರೆ ಈ ಊರಿನಲ್ಲಿ? ಸಾಲ ತರುವುದಾದರೂ ಯಾವ ಆಧಾರದ ಮೇಲೆ? ಒಂದು ಒಡವೆಯೆ, ವಸ್ತುವೆ, ಬಂಗಾರವೆ, ಬೆಳ್ಳಿಯೆ? ಆಧಾರವಾಗಿ ಇರಿಸಲಿಕ್ಕೆ ಏನಿದೆ?

ಹಣ ಕೊಡದಿದ್ದರೆ ನಾಳೆ ಅವರು ಬಂದೇ ಬರುತ್ತಾರೆ—ಜಪ್ತಿಗೆ ದನಕರುಗಳನ್ನು, ಕೃಷಿಯ ಸಾಮಗ್ರಿಗಳನ್ನೂ ತೆಗೆದುಕೊಂಡು ಹೋಗುತ್ತಾರೆ ಹೊಲವೂ ಜಪ್ತಿಯಾಗುತ್ತದೆ. ಕೈಗೆ ಬರಲಿರುವ ಬೆಳೆಯೂ ಹೋಗುತ್ತದೆ. ಮುಂದೆ? ಮಾಡಲು ಹೊಲವಿಲ್ಲ. ಹೊಲ ಸಿಕ್ಕರೂ ದನಕರುಗಳಿಲ್ಲ. ಎತ್ತುಗಳಿಲ್ಲ, ರಂಟೆ ಕುಂಟೆಗಳಿಲ್ಲ. ಅವನೆದುರಿಗೆ ದೊಡ್ಡ ಸಂಕಟವೇ ಎದ್ದು ನಿಂತಿತ್ತು. ಇಂಥ ಮನಃಸ್ಥಿತಿಯಲ್ಲಿ ನುಚ್ಚು ಹೇಗೆ ಇಳಿದೀತು, ಅವನ ಗಂಟಲಲ್ಲಿ?

ಅಡಿಗೆಯ ಮನೆಯಲ್ಲಿ ಮೊಮ್ಮಕ್ಕಳಿಗೆ ಊಟ ಮಾಡಿಸುತ್ತಿದ್ದ ಪಾರ್ವತಮ್ಮ ಕೂಗಿ ಕೇಳಿದಳು—"ನುಚ್ಚು ಬೇಕೆನಪ್ಪಾ ಇನ್ನಿಷ್ಟು?"

ಯಾವುದೋ ಬೇರೆ ಜಗತ್ತಿನಿಂದ ಬಂದ ಧ್ವನಿಯ ಹಾಗೆ ಲಿಂಗಣ್ಣನಿಗೆ ಆ ಮಾತು ಕೇಳಿಸಿತು.

"ನುಚ್ಚು ಮುಗಿಸಿದೆಯೇನೋ ಲಿಂಗಣ್ಣಾ?" ಎಂದು ಮತ್ತೆ ತಾಯಿ ಕೂಗಿದಳು.

ಆದರೂ ಲಿಂಗಣ್ಣ ಉತ್ತರವೀಯಲಿಲ್ಲ. ನೆಟ್ಟದೃಷ್ಟಿಯಿಂದ ದನಗಳನ್ನು ನಿರುಕಿಸುತ್ತ ಮೌನವಾಗಿ ಕುಳಿತಿದ್ದ.

ಕಿರಿಯ ಮೊಮ್ಮಗನನ್ನು ಕಂಕುಳಲ್ಲೆತ್ತಿಕೊಂಡು ಪಾರ್ವತಮ್ಮ ಹೊರಗೆ ಬಂದಳು. ತುಂಬಿದ ನುಚ್ಚಿನೊಂದಿಗೆ ಹಾಗೇ ಇದ್ದ ತಟ್ಟೆಯನ್ನೂ-ಚಿಂತಾಕ್ರಾಂತನಾಗಿ ಕುಳಿತ ಮಗನನ್ನೂ ಕಂಡಾಗ ಆಕೆಗೂ ಮರುದಿನ ಸಂಕಟ ನೆನಪಾಗದಿರಲಿಲ್ಲ. ಬರಲಿರುವ ಸಂಕಟವನ್ನು ನೆನೆದು ಉಣ್ಣುವುದನ್ನೂ ಬಿಟ್ಟು ಕುಳಿತ ಮಗನನ್ನು ನೋಡಿ ಕಳವಳವಾಗದಿರಲಿಲ್ಲ. ಆದರೂ ಧೈರ್ಯ ತಂದುಕೊಂಡು ಅವನಲ್ಲಿ ಉತ್ಸಾಹವನ್ನು ಹುಟ್ಟಿಸುವ ದನಿಯಲ್ಲಿ—

"ಹೀಂಗ್ಯಾಕ ಕುಂತುಬಿಟ್ಟಿಯಪ್ಪಾ ಉಣ್ಣೂದನ್ನ ಬಿಟ್ಟು? ಛೀ ಹುಚ್ಚ ನನ್ನ ಮಗನೇ! ಮೊದಲು ಊಟಾ ಮಾಡು. ಆಮ್ಯಾಲ ಬೇಕಾದರ ಚಿಂತೀ ಮಾಡು" ಎಂದಳು.

ಚಿಂತೆಯಿಂದ ಕಳವಳದಿಂದ ಕುಂದಿದ್ದ ಮುಖವನ್ನು ತಾಯಿಯ ಕಡೆಗೆ ಹೊರಳಿಸಿದ ಲಿಂಗಣ್ಣ. ಅಂಥ ಸಂದರ್ಭದಲ್ಲೂ ಅವಳ ಮುಖದ ಮೇಲೆ ಧೈರ್ಯದ ನಗೆ ಹೊರಸೂಸುತ್ತಿದ್ದಿತು. ಶಾಂತವೂ ಸ್ಥಿರವೂ ಆದ ಆ ದೃಷ್ಟಿ! ಎಂಥ ಸಂಕಟ ಸಮಯದಲ್ಲೂ ಧೈರ್ಯಗೆಡೆದೆ ಮುಂದುವರಿಯಬೇಕೆಂಬ ಸಂದೇಶ ಬೀರುವ ಆ ದೃಷ್ಟಿ! ಲಿಂಗಣ್ಣನಿಗೆ ಎಷ್ಟೊ ಹಗುರಾದ ಹಾಗಾಯಿತು.

ಪಾರ್ವತಮ್ಮ ಅವನ ಹತ್ತಿರ ಕುಳಿತುಕೊಂಡು ತಟ್ಟೆಯನ್ನು ಮುಟ್ಟಿ ನೋಡಿದಳು. ಎಲ್ಲವೂ ಆರಿ ತಣ್ಣಗಾಗಿದ್ದಿತು. "ಬ್ಯಾರೆ ನುಚ್ಚು ಕೊಡು ಗೌರವ್ವ. ತಣ್ಣಗಿಂದು ಏನು ಉಣ್ಣತಾನ?" ಎಂದಳು ಸೊಸೆಗೆ.

"ಏನೂ ಬ್ಯಾಡ ಬಿಡವ್ವ. ಏನು ಉಣ್ಣೂದೊ! ಗಂಟಲಾಗ ಇಳೀಲೊಲ್ಲದು ಏನೂ!" ಎಂದ ಲಿಂಗಣ್ಣ.

"ಹಾಂಗ್ಯಾಕ ಮಾಡ್ತೀಯೊ! ಏನು ಮನೆಯವರೆಲ್ಲಾ ಸತ್ತಾಂಗ ಮಾಡ್ತೀಯಲ್ಲ! ಉಣ್ಣು ಮೊದಲು. ಕಷ್ಟ ನಮಗೇನು ಹೊಸದೇನು? ಇಂಥಾವು ಬೇಕಾದಷ್ಟು ಬಂದಾವ...."

"ಇಂಥಾವು ಬಂದಿರಲಿಕ್ಕಿಲ್ಲ ಅವ್ವಾ. ನಾಳೆ ರೂಪಾಯಿ ಕೊಡದಿದ್ದರ ನಮ್ಮ ಸರ್ವನಾಶ ಆಗಿಹೋಗುತ್ತೈತೀ. ಈ ದನಾ, ಈ ಕರಾ, ಆ ಎತ್ತು, ನೇಗಿಲು, ಬಂಡಿ, ಬೆಳೆ....ಎಲ್ಲಾ...."

"ಹೋದರ ಹೋಗಲೇಳು ಶಿವನ ಮನಸ್ಸಿನಾಗ ಇದ್ದಂಗ ಆಗಲಿ. ಅದಕ್ಕ ಅಂಜಬೇಕ್ಯಾಕ? ಏನು ಹೋದರೂ ಈ ತೋಳು ಹೋಗುವುದಿಲ್ಲವಲ್ಲ? ಶಿವ

ರಟ್ಟೆಯೊಳಗ ಶಕ್ತಿ ಇರೂತನಕ ಯಾವುದಕ್ಕ ಯಾಕ ಅಂಜಬೇಕು? ಮೂರು ಮಂದಿ ದುಡಿಯುವವರಿದ್ದೀವಿ. ಯಾರಾದರೂ ಹೊಲದಾಗ ಕೂಲೀ ಮಾಡಿದರಾಯ್ತು. ಉಣ್ಣು ಮೊದಲು" ಎಂದು ಗದರಿಸಿದಳು, ತಾಯಿ.

ಬೇರೆ ನುಚ್ಚು ತಂದು ಪತಿಯ ಮುಂದೆ ಇರಿಸುತ್ತ ಗೌರವ್ವನೂ ಹೇಳಿದಳು: "ನಾಲ್ಕೈದು ದಿನದಿಂದ ಹೀಂಗs ಮಾಡುತಾ ಇದ್ದಾರವ್ವ. ಏನೋ ಬಂದದ್ದು ಬಂದೀತು, ಅದಕ್ಕ ಊಟಾ ಬಿಟ್ಟರ ಹ್ಯಾಂಗ? ಏನು ಹೋದರೂ ಈ ಮನಿ ಒಂದಾದರೂ ಉಳೀತೈತಲ್ಲ? ಅಷ್ಟs ಸಾಕು. ಕೂಲೀ ಕುಂಬಳೀ ಮಾಡಿ ಬದುಕಿದರಾಯ್ತು."

ಲಿಂಗಣ್ಣನಿಗೆ ತುಸು ಸಮಾಧಾನವಾದಂತಾಯಿತು. ನುಚ್ಚು ಕುಡಿಯುತ್ತ ನುಡಿದ: "ಸುಗ್ಗಿ ಒಂದು ಆಗಿ ಹೋಯ್ತುಂದರ ಮುಂದೆ ಕೂಲಿ ಆದರೂ ಎಲ್ಲಿ ಸಿಗತೈತಿ?"

"ಎಲ್ಲಿ ಸಿಕ್ಕಲ್ಲಿಗೆ ಹೋದರಾಯ್ತೇಳು. ನಾಳಿನ ಮಾತು ನಾಳೆ. ಇಲ್ಲೆಲ್ಲೂ ಕೂಲಿ ಸಿಗದಿದ್ದರ ಹುಬ್ಬಳ್ಳಿಗೆ ಹೋದರಾದೀತು ಗಿರಣಿಗೆ...." ಎಂದಳು ಪಾರ್ವತಮ್ಮ.

ಆ ಸಮಯಕ್ಕೆ ಲಿಂಗಣ್ಣನಿಗೆ ಸಮಾಧಾನವುಂಟಾಯಿತಾದರೂ ಅದು ಬಹಳ ಹೊತ್ತು ಉಳಿಯಲಿಲ್ಲ. ಆ ರಾತ್ರಿಯೆಲ್ಲ ಅವನಿಗೆ ನಿದ್ರೆ ಹತ್ತಲಿಲ್ಲ. ಬೆಳಗಾದರೆ ಜಪ್ತಿ. ದನಕರುಗಳು ಹೋಗುವವು, ಸಾಮಾನು ಹೋಗುವವು. ....ಫಾಸೀ ಶಿಕ್ಷೆಗಾಗಿ ಕಾಯುತ್ತಿದ್ದ ಅಪರಾಧಿಯಂತೆ ಲಿಂಗಣ್ಣ ಆ ಇರುಳನ್ನು ಕಳೆಯಬೇಕಾಯಿತು.

ಬೆಳಗಾಗಲು ಇನ್ನೂ ಎರಡು ತಾಸುಗಳಿದ್ದಾಗ ಅವನಿಗೆ ಕೊಂಚ ಜೊಂಪು ಹತ್ತಿದ ಹಾಗಾಯಿತು. ಆ ಅರನಿದ್ರೆಯಲ್ಲಿಯೂ ತನ್ನ ಪ್ರೀತಿಯ ದನಕರುಗಳೇ ಅವನ ಕನಸಿನಲ್ಲೂ ಬಂದಂತಾಯಿತು. ಆ ಮಗ್ಗುಲಿನಿಂದ ಈ ಮಗ್ಗುಲಿಗೆ ಹೊರಳಿದ. ಮತ್ತೆ ನಿದ್ರೆ ಮಾಯವಾಯಿತು.

ಅಷ್ಟರಲ್ಲಿ ಬಾಗಿಲಿನ ಮೇಲೆ ಯಾರೋ ತಟ್ಟುತ್ತಿದ್ದ ಹಾಗೆ ಕೇಳಿಬಂದಿತು. ಎಚ್ಚರವಾಗಿಯೆ ಇದ್ದ ಲಿಂಗಣ್ಣ—"ಯಾರಪಾ ಅವರು?" ಎಂದ.

"ಬಾಗಿಲಾ ತಗೀ ಲಿಂಗಣ್ಣ."

ಲಿಂಗಣ್ಣ ಎದ್ದು ದೀಪ ಹೊತ್ತಿಸಿ ಬಾಗಿಲು ತೆರೆದಾಗ ಕಾಣಿಸಿದ ಮುಖ

ವನ್ನು ಕಂಡು ಅವನಿಗೆ ವಿಸ್ಮಯವಾಗದಿರಲಿಲ್ಲ. ಆಶ್ಚರ್ಯದ ದನಿಯಲ್ಲಿ—
"ಯಾರು? ನೀನು? ಸಂಗಣ್ಣ?" ಎಂದ.

"ಶ್ಯೂ! ಒದರಿ ಮಾತಾಡಬ್ಯಾಡ. ಊರಾಗ ಸಿ. ಐ. ಡಿ. ಗಳಿದ್ದಂಗ ಕಾಣಿಸ್ತೈತಿ" ಎಂದು ಪಿಸುದನಿಯಲ್ಲಿ ಹೇಳುತ್ತಾ ಸಂಗಣ್ಣ ಬಾಗಿಲನ್ನು ಭದ್ರವಾಗಿ ಮುಚ್ಚಿ ಅಗಳಿ ಹಾಕಿದ. ಬಾಗಿಲು ತೆರೆದು ಹಾಕಿದ ಸಪ್ಪಳ ಪಾರ್ವತಮ್ಮನನ್ನೂ ಎಚ್ಚರಗೊಳಿಸಿರಬೇಕು. ಆಕೆಯೂ ಎದ್ದು ಬಂದಳು.

"ಯಾವಾಗ ಬಂದಿ ಸಂಗಣ್ಣ?"

"ರಾತ್ರೀನೇ ಬಂದಿದ್ದೆನವ್ವ. ಮನಿಯ ಸುದ್ದಿ ತಿಳಿದು ಓಡಿಬರ ಬೇಕಾಯ್ತು. ಹಾಂಗಽ ನಿಮ್ಮ ಕೆಲಸಾನೂ ಆದಂಗಾಯ್ತು."

"ಪಾಪ! ನಿಮ್ಮವ್ವಗ ಬಹಳ ಜ್ವರ ಬರ್ತಾ ಇದಾವ. ನಿನ್ನೆ ಸಂಜೀಕ ನಾ ಹೋಗಿದ್ದೆ. ಮೈಯಾಗ ಏನೂ ಉಳಿದಿಲ್ಲ ಆಕೆಗೆ. ಬರೀ ನಿನ್ನ ನೆನಸಿ ನೆನಸಿ ಹಲುಬುತಿದ್ದಳು. ಹೆತ್ತ ತಾಯಿಾ ಕರುಳಪ್ಪ. ಅದರಾಗ ನೀ ಒಬ್ಬನಽ ಮಗಾ ಆಕೆಗೆ. ಹೀಂಗ ಎಂದೂ ತಿರುಗಿದಾಂವಲ್ಲ ಆಕೀನ್ನ ಬಿಟ್ಟು. ಅದನ್ನಽ ಮನಸ್ಸಿಗೆ ಹಚ್ಚಿಕೊಂಡ್ಹಾಂಗ ಕಾಣಿಸತೈತಿ ಮುದುಕಿ...." ಎಂದಳು ಪಾರ್ವತಮ್ಮ.

"ಒಬ್ಬನಽ ಮಗಾ ಆದರೇನಾಯ್ತವ್ವಾ? ಬ್ಯಾರೆ ಯಾರಿಗೂ ಒಬ್ಬೊಬ್ಬರಽ ಮಕ್ಕಳು ಇರೂದಿಲ್ಲೇನು? ಅವರ ಮಕ್ಕಳೂ ಚಳವಳಿಯೊಳಗ ಬಿದ್ದಿಲ್ಲೇನು? ನಮ್ಮವ್ವಗ ಏನೂ ತಿಳಿಯೂದಿಲ್ಲ. ಏನ್ಮಾಡೂದು ಹೇಳು. ನಿನ್ನಂಗ ಧೈರ್ಯದ ಹೆಣ್ಣುಮಗಳಲ್ಲವ್ವ ಆಕೆ. ಆಕಿಗಿಂತ ನವ್ಮಾಕೀನೇ ನೆಟ್ಟಗಂತ ಹೇಳಬಹುದು. ಆರು ತಿಂಗಳ ಬಸುರಿ. ಆದರೂ ಒಂದಿನ ಕೂಡಾ ಕಣ್ಣಾಗ ನೀರು ಹಾಕಲಿಲ್ಲ. 'ಹೋಗಬ್ಯಾಡ್ರಿ' ಅಂತ ಹೇಳಲಿಲ್ಲ."

"ಗೋಕಾವಿಯ ಹುಡುಗಿ ಅಪ್ಪಾ, ಆಕೆ. ಕುಂದರನಾಡಿನ ಮಗಳು. ಗಟ್ಟಿ ಆದಾಳ. ನಿಮ್ಮ ಅವ್ವ ಬಯಲು ಸೀಮಿಯವಳು. ಅದಕ್ಕ ಹಾಂಗ ಆದಾಳೊ ಏನೊ. ಎಲ್ಲಾರೂ ಒಂದಽ ತರಹಾ ಎಲ್ಲಿರತಾರ ಪರಪಂಚದಾಗ? ಹೋಗಲಿ ಬಿಡು. ನೀ ಒಂದು ನಾಲ್ಕು ದಿನ ಇರಲಾ ಇಲ್ಲೇ. ಅಂದರ ನೆಟ್ಟ ಗಾದಾಳು...."

"ಛೆ! ಎಂಥಾ ಮಾತವ್ವಾ ಇದು! ನಾಳೆ ಮುಂಜಾನೆ ಆದ್ರ ಹೋಗಿ ಬಿಡಬೇಕು. ಪೋಲೀಸರು ಬ್ಯಾರೆ ನನ್ಮನ್ನ ಕಣ್ಣಾಗ ಎಣ್ಣೀ ಹಾಕಿಕೊಂಡು

ಕಾಯ್ತಾ ಇದ್ದಾರ. ನಮ್ಮ ಗುಂಪನ್ನೆಲ್ಲಾ ಹಿಡೀಬೇಕು ಅಂತ ಪಣಾ ಮಾಡಿ ಬಂದಾನಂತ ಒಬ್ಬ ಸಿ. ಐ. ಡಿ. ಇನಸ್ಪೆಕ್ಟರ್. ಈ ಊರಾಗೂ ಸಿ. ಐ. ಡಿ. ಗಳಿದ್ದಾರ ಅಂತ ಸುದ್ದಿ ಐತಿ. ಆ ರಂಗಪ್ಪ ಬ್ಯಾರೆ ಶಕುನಿಯ ಹಾಂಗ ನಮ್ಮ ವ್ಯಾಲ ಕುನಸು ಇಟ್ಟು ಕುಂತಾನ. ನಾವು ಮಾಡುವ ಕೆಲಸಾನ್ನೋ ಇನ್ನೂ ಬೇಕಾದಷ್ಟಿದಾವೆ. ಇಲ್ಲಿ ಕೂತು ನಡಿಯೂ ಹಾಂಗಿಲ್ಲವ್ವ. ಅಲ್ಲಿ ಆ ಊರ ಮಠದಾಗ ಶೇಕ್ರಣ್ಣ ನನ್ನ ಹಾದೀ ನೋಡ್ತಾ ಕೂತಾನ."

"ಸ್ವಾಮಿಗಳೂ ಚಳವಳಿಯೊಳಗಿದಾರೇನಪ್ಪ?" ಎಂದು ಆಶ್ಚರ್ಯದಿಂದ ಕೇಳಿದಳು ಪಾರ್ವತಮ್ಮ.

"ನಮ್ಮ ಹಾಂಗ ಹೊರೆಗ ಬರದಿದ್ದರೂ ಅಲ್ಲೇ ಇದ್ದುಕೊಂಡು ಸಹಾಯ ಮಾಡ್ತಾರವ್ವ ಬೇಕಾದ್ದು. ಈಗ ನಿಮ್ಮ ವ್ಯಾಲ ಆ ರಂಗಪ್ಪ ತಂದಿಟ್ಟಿದ್ದ ಸಂಕಟಾನೆಲ್ಲಾ ಅವರೇ ದೂರ ಮಾಡ್ಯಾರವ್ವ."

ಲಿಂಗಣ್ಣ ಆತುರಗೊಂಡು ಕೇಳಿದ: "ಏನಂದಿ? ಏನ ಮಾಡಿದಾರ?"

"ಏನು ಮಾಡಿದರೋ ನಮಗೂ ಗೊತ್ತಿಲ್ಲ. ಅಂತೂ ನಿಮ್ಮ ಹೊಲಾನೂ ಉಳೀತೈತಿ, ಬೆಳೀನೂ ಉಳೀತೈತಿ...."

"ಲಾವಣಿಯ ರೂಪಾಯಿ....?"

"ಅದಕ್ಕೂ ಚಿಂತೀ ಮಾಡಬಾರದು ಅಂತ ಹೇಳಿದ್ದಾರ. ದೇಸಾಯರಿಗೆ ಹೇಳಿ ಕಳಿಸಿರಬೇಕು ಸ್ವಾಮಿಗಳು. ಅವರ ವ್ಯಾಲ ಬಹಳ ಭಕ್ತಿ ಬಾಬಾ ಸಾಹೇಬರದು. ಸ್ವಾಮಿಗಳ ಮಾತು ಮೀರತಾರೇನು ಅವರು?"

ಲಿಂಗಣ್ಣನ ಹೃದಯವನ್ನು ಹಿಂಡುತ್ತಿದ್ದ ಕರಾಳ ಕೈ ಒಮ್ಮೆಲೆ ಅದೃಶ್ಯ ವಾದಂತಾಯಿತು. ಅವನೆದೆಯನ್ನು ಆವರಿಸಿಕೊಂಡಿದ್ದ ಶೋಕ, ನಿರಾಶೆ, ಅಶಾಂತಿ, ಅಸಮಾಧಾನಗಳೆಲ್ಲವೂ ಮಾಯವಾದುವು. ಮ ನ ಸ್ಸಿ ನ ಲ್ಲಿ ಯೆ ಸ್ವಾಮೀಜಿಯವರ ಮೂರ್ತಿಯನ್ನು ಕಲ್ಪಿಸಿಕೊಂಡು ನೂರು ಸಲ ನಮಸ್ಕಾರ ಹಾಕಿದ. "ಬದುಕಿದಂಗಾಯ್ತಪ್ಪ ಅವರ ಪುಣ್ಯದಿಂದ," ಎಂದ.

"ನಮ್ಮ ಸ್ವಾ ಮಿ ಗ ಳಂ ಥಾ ದೊಡ್ಡ ಮನುಷ್ಯರು ಈ ನಾಡಿನಾಗ ಇನ್ನೊಬ್ಬರು ಆದಾರೋ ಇಲ್ಲೋ! ಅವರ ಹೊಟ್ಟಿ ತಣ್ಣಗಿರಲಿ," ಎಂದಳು ಪಾರ್ವತಮ್ಮ.

"ನೀವು ಬಹಳ ಚಿಂತೀ ಮಾಡತಿರಬಹುದು ಅಂತ ತಿಳಿದೇ ನನ್ನ

ಕಳಿಸಿದರವ್ವಾ ಇಲ್ಲಿಗೆ, ಈ ಸುದ್ದೀ ತಿಳಿಸೂದಕ್ಕೆ. ಇನ್ನೇನೂ ಚಿಂತಿ ಮಾಡದೆ ಆರಾಮಾಗಿ ಇರ್ರಿ. ನಾ ಹೋಗ್ತೀನಿ ಮನಿಗೆ. ಅವ್ವಗ ಹೇಳಿ ಹೊರಟ ಬಿಡ್ತೀನಿ."

"ರಂಗಪ್ಪ ಮತ್ತೇನಾರ ಆಟಾ ಹೂಡಿದರಽ?" ಎಂದ ಲಿಂಗಣ್ಣ.

"ಮತ್ತೇನ ಹೂಡತಾನವ? ಜಪ್ತಿ ಅಂತೂ ಅವನ ಕೈಯಾಗಿಂದಲ್ಲ. ದೇಸಾಯರು ನಿಮ್ಮ ಮ್ಯಾಲ ದಾವೆ ಹೂಡಿದರೂ ಅದು ಕೋರ್ಟಿಗೆ ಹೋಗಿ ಅಲ್ಲಿ ನಿಕಾಲಿ ಆಗಿ ಎಲ್ಲಾ ಮುಗಿದು, ನೀವು ರೂಪಾಯಿ ತುಂಬಬೇಕಾದರೆ ನಾಲ್ಕೈದು ತಿಂಗಳಾಗುತ್ತೈತಿ. ಜಪ್ತಿ ಅಂದರೇನು ಹುಡುಗಾಟ ಅಂತ ತಿಳದಾನೇನವ? ಕೋರ್ಟಿನವರು ಬರಬೇಕಾಗುತ್ತೈತಿ ಇಲ್ಲಿಗೆ ಜಪ್ತಿ ಮಾಡೂದಕ್ಕ."

"ಹೀಂಗೇನು? ನಾಳೆ ಬಂದು ಜಪ್ತಿ ಮಾಡುತೀನಿ ಅಂತ ನಿನ್ನೆ ಬೆದರಿಸಿದ್ದ ಅವ...."

"ಏನೂ ಗೊತ್ತಿಲ್ಲದ ಮಂದೀ ಮುಂದ ಯಾವಾಗಲೂ ಜಬರದಸ್ತೀನೇ ಅವನದು. ಮತ್ತೊಮ್ಮೆ ಏನಾರೆ ಅಂದ ಅಂದರಽ ಸುಮ್ಮನ ಬಾಯಿಮುಚ್ಚಿಕೊಂಡು ಹೋಗು ಅಂತ-ಹೇಳಿಬಿಡ್ರಿ. ನಾವು ಮ್ಯಾಲ ಮ್ಯಾಲ ಊರಿಗೆ ಬರೂದು ಶಕ್ಯ ಇಲ್ಲ ಅಂತ ಇಷ್ಟು ಸೊಕ್ಕು ಮಾಡ್ತಾನಂತ ಕಾಣಿಸ್ತೈತಿ. ಈಗಲೂ ನೀ ಒಂದು ಮಾತು ಹೇಳಿದರ ಅವಗ ಬುದ್ಧೀ ಕಲಿಸಿ ಹೋಗ್ತೀನವ್ವ. ಅವಗ ಕೈಹಚ್ಚಬ್ಯಾಡ್ರಿ ಅಂತ ನೀ ಹೇಳಿದಕ್ಕ ಸುಮ್ಮನೆ ಬಿಟ್ಟೇನಿ."

"ಆ ಗೋದವ್ವನ ಮಾರೀ ನೋಡಿ ಅಯ್ಯೋ ಅನಿಸುತ್ತೈತಿ. ಮಕ್ಕಳು ಮರಿ ಬ್ಯಾರೆ ಅದಾವ, ಪಾಪ! ಇವ ಒಬ್ಬಾವ ಇಂಥಾವ ಇದ್ದರ ಅವರೆಲ್ಲ ಏನು ಮಾಡಿಯಾರು ಪಾಪ! ಅವಗ ಏನೂ ಮಾಡಾಕ ಹೋಗಬ್ಯಾಡ್ರಿ...." ಎಂದಳು ಪಾರ್ವತಮ್ಮ.

ಅಲ್ಲಿಂದ ಹೊರಟು ಆತ ತಮ್ಮ ಮನೆಗೆ ಬಂದು ಬಾಗಿಲು ತಟ್ಟಿದಾಗ ಅವನ ಪತ್ನಿ ಸಿದ್ದವ್ವನೇ ಬಂದು ಬಾಗಿಲು ತೆಗೆದಳು. ಎದುರಿಗಿದ್ದ ಪಡಸಾಲೆಯಲ್ಲಿಯೆ ತಾಯಿ ಸಾತವ್ವ ಕೌದಿಯನ್ನು ಹೊದೆದುಕೊಂಡು ಮಲಗಿದ್ದಳು, ಹಾಸಿಗೆಯ ಮೇಲೆ. ಒಂದು ಚಿಕ್ಕ ಮಾಡದಲ್ಲಿ ಹಣತೆಯೊಂದು ಮಂದವಾಗಿ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ ಆಕೆಯ ಮುಖ ಬೆಳ್ಳಗೆ ಬಿಳಿಚಿಕೊಂಡ ಹಾಗೆ ತೋರುತ್ತಿತ್ತು. ರಾತ್ರಿಯೆಲ್ಲ ನರಳುತ್ತಿದ್ದ ಮುದುಕಿಗೆ ಆಗತಾನೆ ನಿದ್ದೆ

ಹತ್ತಿದ ಹಾಗಿದ್ದಿತು. ಮೂಳೆಗಳನ್ನು ತೆರೆದು ತೋರಿಸುತ್ತಿದ್ದ ಎಡಗೈಯನ್ನು ಎದೆಯ ಮೇಲೊರಗಿಸಿಕೊಂಡು ಆಕೆ ಮಲಗಿಕೊಂಡಿದ್ದಳು.

ಗಂಡಹೆಂಡಿರಿಬ್ಬರೂ ಅಡಿಗಳ ಸದ್ದಾಗದಂತೆ ನಡೆದು ಬಂದು ತಮ್ಮ ಕೋಟಡಿಯನ್ನು ಸೇರಿದರು. "ಇದೇ ಈಗ ನಿದ್ದಿ ಹತ್ತಿದಾಂಗ ಕಾಣತೈತಿ. ಆದೂ ನೆಟ್ಟಗಾತು ಅನ್ನು. ಆಕೆ ಎಚ್ಚರಿರುವಾಗ ಹೊರಟುಬಿಡೂದು ಬಹಳ ತ್ರಾಸ ಆಗತಿತ್ತು," ಎಂದ ಸಂಗಣ್ಣ, ತನ್ನ ಕಂಬಳಿಯನ್ನು ಎತ್ತಿಕೊಳ್ಳುತ್ತ.

"ಅಂದರs? ಈಗs ಹೋಗುವವರೇನು?" ಮೂಗಿನ ಮೇಲೆ ಬೆರಳನ್ನಿರಿಸಿಕೊಂಡು ಸಿದ್ದವ್ವ ಕೇಳಿದಳು.

"ಹೂಂ. ಹೋಗಾಕಬೇಕು. ಕೆಲಸ ಬಹಳ ಅದಾವೆ."

"ಇದೊಂದಿನಾ ಆದ್ರೂ ಇದ್ದು ಹೋಗಬಾರದೇ? ನೀವು ಹೋದದ್ದು ಗೊತ್ತಾದ ವ್ಯಾಲ ಆತ್ತೆ ಎದೀನs ಒಡಕೊಂತಾಳ. ಮೈಯಾಗ ಜ್ವರಾ ಬ್ಯಾರೆ. ಇಂಥಾದರಾಗ ನೀವು ಹೋಗಿಬಿಟ್ಟರ ಮುಗೀತು. ಈಗ ನೀವು ಬಂದಿರಿ ಅಂತ ಸ್ವಲ್ಪ ಹುಷಾರಾಗಿದ್ದಾಳ. ಅಂತೇ ಎಂದೂ ಇಲ್ಲದೆ ಇಂದು ನಿದ್ದಿ ಹತ್ತ್ಯೈತಿ. ಇಂದು ಹೋಗಬಾಡ್ರಿ," ಎಂದಳು ಸಿದ್ದವ್ವ. ಅವಳ ಕಣ್ಣುಗಳಲ್ಲಿ ನೀರೂರಿತ್ತು.

ಪತ್ನಿಯನ್ನು ಪ್ರೀತಿಯಿಂದಲೂ ಕನಿಕರದಿಂದಲೂ ಸಿರುಕಿಸುತ್ತ ಸಂಗಣ್ಣನೆಂದ: "ಏನ್ಮಾಡೂದು ಹೇಳು. ಇಲ್ಲಿರೂದು ಅಂದರ ಯಾವಾಗ ಪೋಲೀಸರು ಬರ್ತಾರೋ ನೇಮ ಇಲ್ಲ. ಚಳವಳಿಯ ಕೆಲಸ ಬ್ಯಾರೆ ಬಹಾಳ ಅದಾವ. ಅಂಥಾದ್ದರಾಗ ನಾ ಇಲ್ಲಿ ಕೂತುಬಿಟ್ಟರ ಪೋಲೀಸರ ಕೈಯಾಗ ಸಿಕ್ಕಹಾಂಗs ಅನ್ನು."

"ಅವರಿಗೆ ಹ್ಯಾಂಗ ಗೊತ್ತಾಗತೈತಿ ನೀವಿಲ್ಲಿ ಇರೂದು?"

"ನಮ್ಮನ್ನ ಹಿಡೀಲಿಕ್ಕಂತ ಕಣ್ಣಾಗ ಎಣ್ಣೀ ಹಾಕ್ಕೊಂಡು ಕಾಯ್ತಾ ಇದ್ದಾರ. ಈ ಊರಾಗೂ ಸಿ. ಐ ಡಿ. ಗಳನ್ನ ಇಟ್ಟಾರಂತ. ನಮ್ಮನ್ನ ಹಿಡಿದು ಕೊಟ್ಟವರಿಗೆ ಐದ್ನೈದು ನೂರು ರೂಪಾಯಿ ಇನಾಮೂ ಇಟ್ಟಾರ. ಇನ್ನು ಗೊತ್ತಾಗದಿರತ್ತೈತೇನು?"

"ಆ ರೂಪಾಯಿನ ಆಸೇಕ್ಕ ನಿಮ್ಮನ್ನ ಹಿಡಕೊಡುವಂಥವರು ಯಾರಿದಾರ ಈ ಊರಾಗ?"

"ಯಾರೂ ಇಲ್ಲ. ಆದ್ರೂ ರಂಗಪ್ಪ ಇದ್ದಾನಲ್ಲ—ನಮ್ಮ ಪಾಲಿನ ಶನಿ ಇದ್ದಾಂಗ. ಅವ ಯಾವಾಗ ಏನು ಘಾತ ಮಾಡಿಯಾನು ಅನ್ನೂದನ್ನ ಹೇಳೂದಕ್ಕಾಗೂದಿಲ್ಲ. ಅದಕ್ಕs, ನ್ಯೆಯೆಲ್ಲಾ ಕಣ್ಣಾಗಿ ಬಹಳ ಎಚ್ಚರಿಕೆ ಯಿಂದ ಇರಬೇಕಾಗ್ಯೆತಿ ನಾವೆಲ್ಲಾ...." ಸಂಗಣ್ಣ ಇನ್ನೂ ಮಾತು ಮುಗಿಸಿರಲಿಲ್ಲ. ಅಷ್ಟರಲ್ಲೇ ಬಾಗಿಲಿನ ಮೇಲೆ ಸದ್ದಾದ ಹಾಗೆ ಕೇಳಿಬರುತ್ತಲೂ ಆತ ಬೆಚ್ಚಿಬಿದ್ದು, ತೀರ ಮೆಲುದನಿಯಲ್ಲಿ—"ಯಾರೋ ಬಾಗಿಲಾ ಬಡಿದಂಗಾಯ್ತಲ್ಲ. ಕೇಳಿಸಿ ತೇನು ?" ಎಂದ.

ಸಿದ್ದವ್ವನಿಗೂ ಕೇಳಿಸಿತ್ತು ಸದ್ದು. ಆಕೆ ಗಾಬರಿಕೊಂಡು ಪತಿಯನ್ನು ತಬ್ಬಿಕೊಂಡಳು. ಅದುವರೆಗೆ ಧೈರ್ಯದಿಂದ ತಡೆಹಿಡಿದಿದ್ದ ಅಳುವೂ ಒಮ್ಮೆಲೆ ಉಕ್ಕಿಬಂದಿತು. ಆವನ ಎದೆಯ ಮೇಲೆ ತಲೆಯನ್ನೊರಗಿಸಿ ಬಿಕ್ಕುತ್ತ ಬಿಕ್ಕುತ್ತ "ಅವ್ವಯ್ಯ, ಪೋಲೀಸರೇ ಬಂದರೇನೋ ! ಇನ್ನ್ಯಾಂಗ ಮಾಡೂದು ?" ಎಂದಳು.

"ಅಳಬ್ಯಾಡ, ಸುಮ್ಮನಿರು. ಬಾಯಿ ಮಾಡಬೇಡ. ಅವರಿಗೆ ಕೇಳಿಸೀತು. ಇನ್ನು ಅವರ ಕೈಯಾಗಿಂದ ಪಾರಾಗಿ ಹೋಗೂದು ಶಕ್ಯ ಇಲ್ಲಂತ ಕಾಣಿಸ್ತೈತಿ. ಏನಾದರೂ ಹಂಚಿಕೆ ಹಾಕಿದರ ಪಾರಾಗಬಹುದೋ ಏನೋ. ನಾ ಈ ಕೋಣೆಯೊಳಗs ಇರ್ತೀನಿ. ನೀ ಹೊರಗ ಹೋಗಿ ಕದಾ ಹಾಕ್ಕೊ. ಪೋಲೀಸರು ಬಂದಿದ್ದರs ನಾನಿಲ್ಲಿ ಇಲ್ಲ ಅಂತ ಹೇಳಿಬಿಡು. ಒಳಗೆ ಕೋಣೆಯೊಳಗ ನೋಡ ಬೇಕಂತ ಅವರು ಅಂದರ, ಇಲ್ಲಿ ನನ್ನ ತಂಗೆವ್ವ ಹಡದು ಮಲಗಿದ್ದಾಳಂತ ಹೇಳು. ಒಳಗ ಬಿಡಬ್ಯಾಡ," ಎಂದು ಹೇಳಿ ಅವಳ ಕಂಬನಿಗಳನ್ನೊರೆಸಿ ಹೊರಕ್ಕೆ ಕಳುಹಿಸಿದ. ಉಕ್ಕಿ ಬರುತ್ತಿದ್ದ ದುಃಖವನ್ನು ಹೇಗೋ ಹತ್ತಿಕ್ಕಿ ಕೊಂಡು ಸಿದ್ದವ್ವ ಹೊರನಡೆದು ಕೋಣೆಯ ಬಾಗಿಲು ಹಾಕಿಕೊಂಡಳು. ಪೋಲೀಸರ ಕೈಯಿಂದ ಗಂಡನನ್ನು ಉಳಿಸುವುದೊಂದೇ ಆಗ ಆಕೆಯ ಯೋಚನೆ ಯಾಗಿತ್ತು.

ಬಾಗಿಲಿನ ಮೇಲೆ ಸಪ್ಪಳಾಗುತ್ತಲೇ ಇತ್ತು. ಸಿದ್ದವ್ವ ಮುದುಕಿಯ ಬಳಿ ಬಂದು ಆಕೆಯ ಎದೆಯ ಮೇಲೆ ಕೈಯಿರಿಸಿ ಆಕೆಯನ್ನು ಎಚ್ಚರಗೊಳಿಸಿದಳು. ಮುದುಕಿ ಕಣ್ಣು ತೆರೆಯುತ್ತಲೂ ಅವಳ ಕಿವಿಯ ಹತ್ತಿರ ಮುಖ ಒಯ್ದು ಲಗು ಬಗೆಯಿಂದ ಕೆಲವು ಪಿಸುಮಾತನಾಡಿದಳು. ಅಷ್ಟು ಹೊತ್ತಿಗೆ ದೂರ ಮಲಗಿ

ಕೊಂಡಿದ್ದ ಕರಿಯಪ್ಪ–ಅವಳ ಮಾವ–ನೂ ಎದ್ದುಬಿಟ್ಟಿದ್ದ. "ಯಾರೋ ಅವರು ಬಾಗಿಲಾ ಬಡಿಯುವವರು?" ಎಂದು ಆತ ಕೂಗುತ್ತಿದ್ದ ಹಾಗೇ ಸಿದ್ದವ್ವ ಅವನ ಹತ್ತಿರವೂ ಓಡಿಹೋಗಿ ವಿಷಯವನ್ನೆಲ್ಲ ತಿಳಿಸಿದಳು. ಅನಂತರ ಬಾಗಿಲು ತೆರೆಯಲು ಮಾವನಿಗೆ ತಿಳಿಸಿ, ತಾನು ಅತ್ತೆಯ ಹಾಸಿಗೆಯ ಬಳಿಯಲ್ಲಿ ಕುಳಿತುಕೊಂಡು ಅವಳ ಕಾಲುಗಳನ್ನು ಹಿಸುಕತೊಡಗಿದಳು. ಮುದುಕಿಯ ನರಳುವಿಕೆ ಪುನಃ ಪ್ರಾರಂಭವಾಗಿದ್ದಿತು.

ಕರಿಯಪ್ಪ ಬಾಗಿಲು ತೆರೆದೊಡನೆ ಎಂಟು ಹತ್ತು ಜನ ಪೋಲೀಸರು ಒಮ್ಮೆಲೆ ಒಳ ನುಗ್ಗಿದರು. ಜತೆಗೆ ಒಬ್ಬರು ಫೌಜದಾರರೂ ಇದ್ದರು. ಒಂದೆರಡು ಕ್ಷಣಗಳೊಳಗಾಗಿ ಮನೆಯ ಎಲ್ಲ ಭಾಗಗಳ ಮೇಲೂ ದೃಷ್ಟಿಯೋಡಿಸಿ ಫೌಜದಾರರೆಂದರು—"ಎಲ್ಲಿದಾನಪಾ ನಿನ್ನ ಮಗ?"

ಮುದುಕ ಕರಿಯಪ್ಪ ಕೈಗಳನ್ನು ಜೋಡಿಸಿಕೊಂಡು ದೈನ್ಯಪೂರ್ಣ ದನಿಯಲ್ಲಿ—"ಒಂದು ತಿಂಗಳಾತು ಸಾಹೇಬರs, ಅವನ ಮಾರೀ ಕಂಡಿಲ್ಲ ನಾವು. ಮಗನ್ನ ನೋಡಬೇಕು ಅಂತ ಈ ಮುದುಕಿ ಹಗಲೂ ರಾತ್ರಿ ಕನವರಿಸ್ತಾ ಬಿದ್ದೈತಿ, ಅವನ ಧ್ಯಾಸ ಹಿಡಕೊಂಡು ಗಂಜೀ ಕೂಡಾ ಕುಡೀದs ಸಾಯ್ತಾ ಬಿದ್ದೈತಿ. ಅವಗ ಅರಿವಿಲ್ಲರಿ ಸಾಹೇಬರs....ಎಲ್ಲಿ ಇದ್ದಾನೋ ಏನೊ!" ಎಂದ.

"ಏ! ಮುದುಕಾ! ಸುಳ್ಳು ಬೊಗಳಬ್ಯಾಡೋ. ನಮ್ಮ ಮುಂದ ನಾಟಕಾ ಮಾಡ್ತೀಯೇನು? ಅವ ನಿನ್ನೆ ರಾತ್ರಿ ಇಲ್ಲಿಗೆ ಬಂದದ್ದನ್ನ ನಮ್ಮ ಮಂದಿ ಕಣ್ಣಾರೆ ನೋಡ್ಯಾರ. ನಮ್ಮನ್ನ ಮೋಸಮಾಡಬೇಕಂತ ಮಾಡೀರೇನು? ಹೇಳು. ಎಲ್ಲಿದ್ದಾನ ಅವ?" ಎಂದು ಗದರಿಸಿ ಫೌಜದಾರರು ಪೋಲೀಸರ ಕಡೆ ತಿರುಗಿ "ಹುಡುಕಿರೋ ಮನೀ ಎಲ್ಲಾ. ಎಲ್ಲಿ ಹೋಗ್ತಾನ ಅವ? ಇಲ್ಲೇ ಎಲ್ಲಾದರೂ ಅಡಗಿ ಕೂತಿದ್ದಾನು," ಎಂದು ಆಜ್ಞಾಪಿಸಿದರು. ಅಕಸ್ಮಾತ್ತಾಗಿ ಅವರ ದೃಷ್ಟಿ ಮೂಲೆಯಲ್ಲಿದ್ದ ಕೋಣೆಯ ಕಡೆಗೆ ಹೊರಳಿತು. ಆ ಕಡೆಗೆ ಅಡಿಯಿರಿಸುತ್ತ—"ಯಾರಿದಾರ ಅಲ್ಲಿ?" ಎಂದು ಕೇಳಿದರು.

ಅತ್ತೆಯ ಕಾಲುಗಳನ್ನು ಹಿಸುಕುತ್ತ ಫೌಜದಾರನ ಚಲನವಲನಗಳನ್ನೆಲ್ಲ ಕಳ್ಳದೃಷ್ಟಿಯಿಂದ ನಿರುಕಿಸುತ್ತಿದ್ದ ಸಿದ್ದವ್ವನಿಗೆ ಅವರು ಕೊಟಡಿಯ ಕಡೆಗೆ ಹೊರಟದ್ದನ್ನು ನೋಡುತ್ತಲೂ ಎದೆ ಧಡಧಡಿಸತೊಡಗಿತು. ಕಾಲು ಹಿಸುಕುವು

ದನ್ನು ನಿಲ್ಲಿಸಿಬಿಟ್ಟು, ಆಕೆ ಒಡನೆಯೆ ಎದ್ದು ಆ ಕೊಟಡಿಗೆ ಅಡ್ಡವಾಗಿ ನಿಂತು ಕೊಂಡು—“ಇಲ್ಲಿ ನಮ್ಮ ನಾದಿನಿ ಮಲಗ್ಯಾಳ್ರಪ್ಪ. ಹಡೆದ ಬಾಣಂತಿ....” ಎಂದಳು.

ಅವಳು ಹಠಾತ್ತಾಗಿ ಎದ್ದುಬಂದುದನ್ನೂ ಕೊಟಡಿಗೆ ಅಡ್ಡವಾಗಿ ನಿಂತುದನ್ನೂ ಕಂಡು, ಅವಳ ಮೊಗದ ಮೇಲೆ ಸ್ಪಷ್ಟವಾಗಿ ಮೂಡಿದ್ದ ಭೀತಿ ಯನ್ನು ಗುರುತಿಸಿ, ಫೌಜದಾರರಿಗೆ ಸಂದೇಹವೇ ಉಳಿಯಲಿಲ್ಲ. ಸಂಗಣ್ಣ ಅದೇ ಕೊಟಡಿಯಲ್ಲಿ ಅವಿತುಕೊಂಡಿರಬೇಕೆಂದು ಅವರ ಚಾಣಾಕ್ಷ ಬುದ್ಧಿಗೆ ಹೊಳೆಯದಿರಲಿಲ್ಲ. “ನಾದಿನಿ? ಬಾಣಂತಿ ನಾದಿನಿ? ನಿಮ್ಮ ನಾದಿನಿಗೆ ಮಿಸೆ ಬಂದಿರಬೇಕಲ್ಲ ಮೂಗಿನ ಕೆಳಗ? ಸರಿ, ಅತ್ತ ಸರಿ. ಬಾಣಂತಿ ಇರಲಿ, ಯಾರೇ ಇರಲಿ, ನಾವು ನೋಡಾಕ ಬೇಕು....” ಎನ್ನುತ್ತಾ ಆತ ಮುಂದು ವರಿಯತೊಡಗಿದ.

ನರಳುತ್ತ ಬಿದ್ದುಕೊಂಡಿದ್ದ ಮುದುಕಿಗೂ ಇನ್ನು ತಡೆಯಲಾಗಲಿಲ್ಲ. ಕೊಂಚವೂ ಶಕ್ತಿಯಿಲ್ಲದಿದ್ದರೂ ಆಗ ಆಕೆಯ ಶರೀರದಲ್ಲಿ ಆವೇಶ ಬಂದಂತಾ ಯಿತು. ದಿಗ್ಗನೆ ಹಾಸಿಗೆಯಿಂದೆದ್ದು ಫೌಜದಾರನಿಗೆ ಅಡ್ಡವಾಗಿ ತನ್ನ ಮೂಳೆಯ ದೇಹವನ್ನು ನಿಲ್ಲಿಸಿ, ನಡುಗುವ ದನಿಯಲ್ಲಿ ನುಡಿದಳು: “ನನ್ನ ಪ್ರಾಣದಾಗ ತ್ರಾಣ ಇರೂತನಕಾ ಆ ಕೋಣೆಯೊಳಗ ನಿನಗ ಹೋಗಾಕ ಕೊಡಾಕಿಲ್ಲ. ಸುಮ್ಮನ ಹೋಗ್ರೋ ಮೂಳಾ!”

ಫೌಜದಾರರು ಒಂದು ನಿಮಿಷ ನಿಂತಲ್ಲಿಯೆ ನಿಂತುಕೊಂಡಿದ್ದರು. ಈಗಲೋ ಇನ್ನೊಂದು ಗಳಿಗೆಗೋ ಕೊನೆಯುಸಿರು ಹಾಕುವ ಹಾಗಿದ್ದ ಆ ಜರ್ಜರಿತ ಶರೀರ ದಲ್ಲೂ ಎಂಥ ಶಕ್ತಿ ಸಂಚರಿಸಿತ್ತು ಆಗ! ತಾಯ ಕರುಳೇ ಆ ಅಸ್ಥಿಪಂಜರದ ರೂಪದಲ್ಲಿ ಹೊರಗೆ ಬಂದು ತನ್ನೆದುರು ನಿಂತುಕೊಂಡ ಹಾಗೆ ತೋರುತ್ತಿತ್ತು. ಮೂರು ಲೋಕಗಳನ್ನೂ ನಡುಗಿಸುವ ಹಾಗೆ ಅಕಟೋವಿಕಟವಾಗಿ ನರ್ತನ ಗೈಯುವ ಮಹಾಕಾಳಿಯ ಹಾಗೆ ನಿಂತಿತ್ತು ಆ ಮುದುಕಿ. ಬೆಳ್ಳಗೆ ಬಿಳಿಚಿ ಕೊಂಡ ಆ ತೆಳ್ಳಗಿನ ಮುಖದಲ್ಲಿ ಕೆಂಡದ ಹಾಗೆ ಹೊಳೆಯುತ್ತಿದ್ದ ಅವಳ ಕಣ್ಣುಗಳು—! “ಮುಂದಕ್ಕೆ ಕಾಲನ್ನಾದರೂ ಇಡು, ನಿನ್ನನ್ನು ಸುಟ್ಟುಬಿಟ್ಟೇನು!” ಎಂದು ಅವು ಎಚ್ಚರಿಸುತ್ತಿರುವ ಹಾಗೆ ಭಾಸವಾಯಿತು.

"ಏ, ಹಿಡೀರ್ರ್ಯೋ ಈ ಮುದುಕಿಯನ್ನ. ಆ ಕಡೆ ಎಳೆದೊಯ್ಯಿರಿ!" ಎಂದು ಫೌಜದಾರರು ಆಜ್ಞಾಪಿಸಿದರು.

"ಯಾವನೋ ಗಂಡಸು ನನ್ನ ಹಿಡಿಯುವವ? ಮೈಗೆ ಕೈಹಚ್ಚಿದರ ಕೊಂದುಬಿಟ್ಟೇನು!" ಎಂದು ಕರ್ಕಶವಾಗಿ ಮುದುಕಿ ಕೂಗುತ್ತಿದ್ದ ಹಾಗೇ ಇಬ್ಬರು ಪೋಲೀಸರು ಮುಂದೆ ಬಂದು ಅವಳನ್ನು ಹಿಡಿದು ಎಳೆಯತೊಡಗಿದರು. ಇನ್ನಿಬ್ಬರು ಸಿದ್ದವ್ವನನ್ನೂ ಒತ್ತಾಯದಿಂದ ಎಳೆದೊಯ್ದರು. ಕರಿಯಪ್ಪನನ್ನು ಹಿಡಿದುಕೊಂಡು ಬಾಗಿಲಿನ ಹೊರಗಡೆ ದೂಡಿದ್ದರು.

"ಏ, ನನ್ನ ಮುಟ್ಟಬ್ಯಾಡ್ರೋ ಮಂಗ್ಯಾ ಸೂಳೀ ಮಕ್ಕಳಿರಾ! ನಿಮ್ಮ ಮನಿ ಹಾಳಾಗಲಿ. ನನ್ನ ಮಗನ್ನ ಒಯ್ಯಬ್ಯಾಡ್ರೋ!" ಎಂದು ಮುದುಕಿ ಆಕ್ರೋಶ ಮಾಡುತ್ತಿದ್ದ ಹಾಗೇ ಕೊಟಡಿಯ ಬಾಗಿಲು ಮೆಲ್ಲನೆ ತೆರೆದುಕೊಂಡಿತು. ಹೊರಗಡೆ ನಡೆಯುತ್ತಿದ್ದುದೆಲ್ಲವನ್ನೂ ಕೇಳಿ ತಿಳಿಯುತ್ತಿದ್ದ ಸಂಗಣ್ಣನಿಗೆ ತಾಯಿಯ ಆಕ್ರೋಶವನ್ನು ಕೇಳಿ ತಡೆಯಲಾಗಲಿಲ್ಲವೇನೊ—ಆತ ಬಾಗಿಲನ್ನು ಸ್ವಲ್ಪ ಮಾತ್ರ ತೆರೆದು, ಪಿಸ್ತೂಲನ್ನು ಅದರೊಳಗಿನಿಂದ ಗುರಿಯಿಟ್ಟು, ಗಂಭೀರವಾದ ಸ್ವರದಲ್ಲಿ ನುಡಿದ: "ಇವೊತ್ತು ನೀವೇನು ಮಾಡಿದರೂ ನನ್ನ ಹಿಡಿಯೂದು ಶಕ್ಯ ಇಲ್ಲ, ಫೌಜದಾರರೆ. ನಿಮ್ಮ ಪ್ರಾಣ ಬೇಕಾಗಿದ್ದರ ಸುಮ್ಮನೆ ಹೋಗ್ರಿ. ನಮ್ಮ ಅವ್ವನ್ನ ಬಿಡ್ರಿ ಮೊದಲು. ಎಲ್ಲರನ್ನೂ ಬಿಡ್ರಿ....ಇಲ್ಲಾಂದರ ಹಾರಿಸ್ತೀನಿ...."

ಪಿಸ್ತೂಲಿನ ತುದಿಯು ದರ್ಶನವಾಗುತ್ತಲೂ ಫೌಜುದಾರರೂ ತಮ್ಮ ಪಿಸ್ತೂಲನ್ನು ತೆಗೆದು ಕೈಲಿ ಹಿಡಿದಿದ್ದರು. ಅದನ್ನು ಬಾಗಿಲಿನ ಕಡೆಗೆ ಗುರಿ ಹಿಡಿದು ಅವರೆಂದರು: "ಪಿಸ್ತೂಲು ಉಪಯೋಗ ಮಾಡೂದನ್ನ ಎಂದಿನಿಂದ ಕಲಿತಿ, ಸಂಗಣ್ಣಾ? ನಿನಗೇನು ಬಂದೀತು ಗುಂಡು ಹೊಡಿಯೂದು, ಕುಸ್ತೀ ಹಿಡಿಯುವವಗ? ಸುಮ್ಮನ ಪ್ರಾಣಾ ಕಳಕೋಬ್ಯಾಡ. ಹೊರಗ ಬಾ."

"ನನಗ ಪಿಸ್ತೂಲು ಹಾರಿಸೂದಕ್ಕ ಬರತೈತೋ ಇಲ್ಲೋ ಅನ್ನೂದು ಗೊತ್ತಾಗತೈತಿ ನಿಮಗ. ಮೊದಲು ನಮ್ಮ ಅವ್ವನ್ನ ಬಿಡ್ರಿ....ಇಲ್ಲಾ-ಹಾರಿಸ್ತೀನಿ" ಎಂದ ಸಂಗಣ್ಣ.

"ನಿಮ್ಮ ಅವ್ವನ್ನ ಹೊಡೀಬೇಕು ಅಂತಿದ್ದರ ಹಾರಿಸು. ನಾವ್ಯಾರೂ ಸಿಗೂದಿಲ್ಲ ನಿನ್ನ ಗುಂಡಿಗೆ...." ಎಂದು ನುಡಿದು ಫೌಜದಾರರು ತಮ್ಮ ಪಿಸ್ತೂಲ ನೈತ್ರಿ ನಳಿಗೆಯನ್ನೊತ್ತುತ್ತಿದ್ದ ಹಾಗೇ ಮುದುಕಿಯ ಮೈಯಲ್ಲಿ ಅದ್ಭುತವಾದ

ಆವೇಶ ಬಂದಂತಾಯಿತು. ಇನ್ನು ತನ್ನ ಮಗನನ್ನು ಗುಂಡು ಹಾಕಿ ಕೊಲ್ಲುವ ರೆಂದು ಆಕೆಗೆನ್ನಿಸುತ್ತಲೂ ಆಕೆ ಹುಚ್ಚು ಹಿಡಿದವರ ಹಾಗೆ ಅರಚಿಕೊಂಡು ತನ್ನನ್ನು ಹಿಡಿದು ನಿಂತಿದ್ದ ಪೋಲೀಸರನ್ನು ಕೊಡವಿ ರಭಸದಿಂದ ನುಗ್ಗಿದಳು. ಗುಂಡು ಹಾಕಿ ಸಂಗಣ್ಣನ ಕೈಯಲ್ಲಿದ್ದ ಪಿಸ್ತೂಲನ್ನು ಕೆಳಕ್ಕೆ ಕೆಡಹಬೇಕೆಂದು ಫೌಜದಾರರು ನಳಿಗೆಯನ್ನೊತ್ತುತ್ತಲೂ ಅಡ್ಡ ಬಂದ ಮುದುಕಿಯ ಬಲಗಡೆಯ ಎದೆಯ ಮೇಲೆ ಗುಂಡು ತಾಕಿತು. ತನಗೆ ಗುಂಡು ಹೊಡೆದುದೂ ಆಕೆಗೆ ಒಮ್ಮೆಲೆ ತಿಳಿಯಲಿಲ್ಲ. "ಅಯ್ಯೊ, ನನ್ನ ಮಗನ್ನ ಕೊಂದರೇನೋ ಈ ರಾಕ್ಷಸರು!" ಎಂದು ಕಿರಿಚಿಕೊಂಡು ಆಕೆ ನೆಲಕ್ಕುರುಳಿದಳು.

ಅಕಸ್ಮಾತ್ತಾಗಿ ಬದಲಾದ ಸನ್ನಿವೇಶವನ್ನು ಕಂಡು ಸಂಗಣ್ಣನ ಮೈಮೇಲಿನ ಎಚ್ಚರ ತಪ್ಪಿಹೋದಂತಾಯಿತು. ಅವನಿಗರಿಯದಂತೆಯೆ ಅವನ ಕೈಲಿಂದ ಪಿಸ್ತೂಲು ಕಳಚಿ ಕೆಳಗೆ ಬಿದ್ದಿತು. ಬಾಗಿಲನ್ನು ದೂಡಿ ಹೊರಕ್ಕೆ ಬಂದು ಆತ ತಾಯಿಯ ಶರೀರವನ್ನು ಎತ್ತಿ ತೊಡೆಯ ಮೇಲೆ ಹಾಕಿಕೊಂಡ. "ಅಯ್ಯೋ ಅವ್ವಾ, ಏನು ಹುಚ್ಚು ಕೆಲಸಾ ಮಾಡಿದೆಯವ್ವಾ! ನೀನ್ಯಾಕ ಬಂದಿ ನಡುವೆ? ಅಯ್ಯೋ...." ಎನ್ನುತ್ತಾ ಆಕೆಯ ತಲೆಯ ಮೇಲೆ ಮುಖವನ್ನಿರಿಸಿ ಹಸುಮಗುವಿ ನಂತೆ ಬಿಕ್ಕತೊಡಗಿದ.

"ನನ್ನ ಮಗನೇ, ಸಂಗಾ, ಸಂಗಣ್ಣಾ, ಅಂತೂ ನೀ ಉಳಿದೆಲ್ಲ—ಅಷ್ಟs ಸಾಕಪ್ಪಾ ಕಂದಾ, ನಾ ಏನು ಇಂದು ನಾಳೆ ಹೋಗುವಾಕೇ ಇದ್ದೆ. ಇಂದs ಹೋಗ್ತೀನಿ. ನೀ ಉಳಿನೆಲ್ಲ....ಸಾಕು. ಸಿದ್ದವ್ವ....ಬಸುರಿ....ಮೊಮ್ಮಗನ ನೋಡಿ ಕಣ್ಮುಚ್ಚಬೇಕಂತಿದ್ದೆ....ಆಗಲಿಲ್ಲ....ಸಂಗಾ....ಸಂಗಣ್ಣಾ...." ಎಂದು ಮುದುಕಿ ತೊದಲುತ್ತಿದ್ದಂತೆಯೆ ನಾಲಗೆ ನಿಂತುಬಿಟ್ಟಿತು. ಒಂದೆರಡು ಕ್ಷಣಗಳ ಕಾಲ ಅವಳ ಕಣ್ಣ ಬೊಂಬೆಗಳೆರಡೂ ಗರಗರನೆ ತಿರುಗಿ ಅನಂತರ ಸ್ಥಿರವಾಗಿ, ಶೂನ್ಯವಾಗಿ ನಿಂತುಬಿಟ್ಟವು. "ಅಯ್ಯೋ ಅವ್ವಾ, ಅಯ್ಯೋ...." ಎಂದು ಸಂಗಣ್ಣ ದನಿ ತೆಗೆದು ಅಳತೊಡಗಿದ. "ನನ್ನ ಉಳಿಸಬೇಕಂತ ನೀ ಪ್ರಾಣ ಕೊಟ್ಟೆಯಲ್ಲ ನನ್ನವ್ವಾ! ಅಯ್ಯೋ, ನನ್ನ ಅವ್ವನ್ನ ಗುಂಡು ಹಾಕಿ ಕೊಂದರಲ್ಲೋ ....ಈ ಪೋಲೀಸರು....ಈ ಫೌಜದಾರ....ಈ ಸರಕಾರ....ನನ್ನ ಅವ್ವ....ನನ್ನ ಮುದುಕಿ ಅವ್ವ....ಜ್ವರಾ ಬಂದು ನರಳತಾ ಬಿದ್ದಿದ್ದ ನನ್ನ ಅವ್ವ....ನನ್ನ ನೋಡಿ

ದಳು....ನೋಡಿ ಕಣ್ಣು ಮುಚ್ಚಿದಳು....ಇಲ್ಲ....ಆಕೆ ಸಾಯಲಿಲ್ಲ. ಈ ಫೌಜದಾರ ಕೊಂದ ನನ್ನವ್ವನ್ನ....ಗುಂಡು ಹಾಕಿ ಕೊಂದ....ಅಯ್ಯೋ...."

ಎಲ್ಲವೂ ಮಿಂಚಿದ ಹಾಗೆ ನಡೆದುಹೋಗಿತ್ತು. ಮುದುಕಿ ಅಡ್ಡವಾಗ ಬಹುದೆಂದು ಫೌಜದಾರರು ಭಾವಿಸಿರಲಿಲ್ಲ. ಯಾರನ್ನಾದರೂ ಹೊಡೆಯಬೇಕೆಂಬ ಉದ್ದೇಶವೂ ಅವರದಾಗಿರಲಿಲ್ಲ. ಅಕಸ್ಮಾತ್ತಾಗಿ ಆಗಬಾರದ ಘಟನೆ ಆಗಿ ಹೋಗಿತ್ತು. ಅದಕ್ಕಾಗಿ ಅವರಿಗೂ ವಿಷಾದವಾಗದಿರಲಿಲ್ಲ. ಸಂಗಣ್ಣನ ತಂದೆಯನ್ನೂ ಪತ್ನಿಯನ್ನೂ ಬಿಟ್ಟುಬಿಡುವಂತೆ ಪೋಲೀಸರಿಗೆ ತಿಳಿಸಿ, ಸಂಗಣ್ಣನ ಹತ್ತಿರ ಬಂದು ಅವನ ಮೈದಡವುತ್ತ—"ಏಳು ಸಂಗಣ್ಣಾ, ಆಗಬಾರದ್ದು ಆಗಿ ಹೋಯ್ತು. ನಿಮ್ಮ ತಾಯಿ ಒಮ್ಮೆಲೆ ಅಡ್ಡಬಂದಾಳಂತ ನನಗನ್ನಿಸಿರಲಿಲ್ಲ. ನೀ ಪೀಸ್ತೂಲು ತೆಗೆಯದಿದ್ದರೆ ಈ ಅನರ್ಥ ಏನೂ ಆಗ್ತಿರಲಿಲ್ಲ. ಆದದ್ದು ಆಗಿ ಹೋಯ್ತು. ಏಳು...." ಎಂದರು.

ಅಂಗಿಯ ತೋಳಿನಿಂದ ಕಂಬನಿಗಳನ್ನೊರಸಿಕೊಂಡು ಸಂಗಣ್ಣ ಎದ್ದು ನಿಂತ. ಒಂದು ಸಲ ತಾಯಿಯ ಕಳೇಬರವನ್ನೂ ಬೋರಾಡಿ ಅಳುತ್ತಿದ್ದ ಪತ್ನಿಯನ್ನೂ ನಿಟ್ಟಿಸಿದ. ಅನಂತರ ತಂದೆಯ ಕಡೆಗೆ ತಿರುಗಿ—"ಈಕೀನ್ನ ನಾಳೆ ಗೋಕಾವಿಗೆ ಕಳಿಸಿಬಿಡಪ್ಪ. ನಾ ಹೋಗಿಬರ್ತೀನಿ," ಎಂದು ಫೌಜದಾರರ ಕಡೆಗೆ ಹೊರಳಿ ಗಂಭೀರವಾದ ದನಿಯಲ್ಲಿ ಹೇಳಿದ—"ಅಂತೂ ನೀವಽ ಗೆದ್ದಿರಿ ಸಾಹೇಬರಽ. ಈಗಲಾದರೂ ಸಮಾಧಾನ ಆತೇನು ನಿಮಗ? ನಡೀರಿ. ನಾ ತಯಾರಾಗಿದ್ದೀನಿ."

"ಮಣ್ಣುಗೂಡುವ ತನಕ ನಿನ್ನ ಬಿಡತೇವಪ್ಪ. ಅಲ್ಲಿಯ ತನಕಾ ಒಯ್ಯುವದಿಲ್ಲ. ಹಾಂಗೇನೂ ತಿಳಿದುಕೋಬ್ಯಾಡ...." ಎಂದು ಫೌಜದಾರರು ಹೇಳುತ್ತಿದ್ದಂತೆಯೆ ಸಂಗಣ್ಣ ಅವರನ್ನು ಕ್ರೂರವಾಗಿ ದೃಷ್ಟಿಸುತ್ತ—"ನಡೀರಿ. ಎಲ್ಲಾ ಮುಗಿದಽ ಹೋಯ್ತು. ಇನ್ನೇನು ಮಣ್ಣು ಕೊಡೂದು, ಮಣ್ಣು!" ಎಂದ.

## ೨೦

ಬಲಗೈಯ ಬೆರಳುಗಳಿಗೆ ಎಡಗೈಯ ಬೆರಳುಗಳನ್ನು ಹೆಣೆದು ಎರಡು ಕೈಗಳನ್ನೂ ಮೇಲಕ್ಕೆತ್ತಿ ಒಂದು ಸಲ ಆಕಳಿಸಿದಳು ಹೇಮಾ.

ಸೈಕ್ಲೊಸ್ಟೈಲ್ ಯಂತ್ರಕ್ಕೆ ಮಸಿ ಹಚ್ಚುವ ತನ್ನ ಕಾಯಕವನ್ನು ನಿಲ್ಲಿಸಿ.
ಪಕ್ಕದಲ್ಲಿ ಬಿದ್ದುಕೊಂಡಿದ್ದ ಕಾಗದದ ತುಂಡಿನಿಂದ ಕೈಗಳನ್ನೊರೆಸಿಕೊಂಡು
ವಿಶ್ವನಾಥ ಜತೆಗಾತಿಯ ಕಡೆಗೆ ಹೊರಳಿ ನೋಡಿದ. ಕಾಗದ ಹಾಕಿ ಹಾಕಿ,
ಯಂತ್ರದ ಮುಚ್ಚಳವನ್ನೆತ್ತಿ ಇಳಿಸಿ ಅವಳ ಕೈಗಳೆರಡೂ ಸೋತುಹೋಗಿದ್ದುವು.
ರಾತ್ರಿಯೆಲ್ಲ ನಿದ್ರೆಯಿಲ್ಲದೆ ದುಡಿದುದರಿಂದ ಅವಳ ಕಣ್ಣುಗಳೆರಡೂ ಕೆಂಪ
ಗಾಗಿದ್ದುವು. ಹಲವಾರು ಗಂಟೆಗಳ ಸತತ ಶ್ರಮದಿಂದಾಗಿ ಅವಳ ಮುಖ
ಕೆಂಪೇರಿದ್ದಿತು.

ಪೆಟ್ಟಿಗೆಯಲ್ಲಿನ ಕೊನೆಯ ಸಿಗರೇಟನ್ನು ಹೊತ್ತಿಸುತ್ತ ಆತ ಅವಳನ್ನು
ಅಕ್ಕರೆಯಿಂದ ನಿಟ್ಟಿಸಿ ನೋಡಿದ. ನೋಡಿದ ಹಾಗೆಲ್ಲ ಅವಳ ಬಗೆಗೆ ಅಭಿಮಾನ
ತುಂಬಿ ಬರುತ್ತಿತ್ತು. ಕಳೆದ ತಿಂಗಳು ಬೆಳಗಾವಿಯನ್ನು ಬಿಟ್ಟು ತಮ್ಮ ತಂಡ
ವನ್ನು ಕೂಡಿಕೊಂಡಂದಿನಿಂದ ಎಷ್ಟು ಉತ್ಸಾಹದಿಂದ ದುಡಿಯುತ್ತಿದ್ದಳಾಕೆ?
ಕರಪತ್ರಗಳನ್ನು ಹೊರಡಿಸುವುದಕ್ಕಾಗಿಯೆ ಇಲ್ಲಿ–ಅಡವಿಯೊಳಗಿನ ಲಂಬಾಣಿಗಳ
ತಾಂಡೆಯಲ್ಲಿ– ಅವರ ನೆರವಿನಿಂದ ಒಂದು ಗುಡಿಸಲನ್ನು ತೆಗೆದುಕೊಂಡು ಬೀಡು
ಬಿಟ್ಟಂದಿನಿಂದ ಹೇಮಾ ಹಗಲಿರುಳೂ ಕೆಲಸ ಮಾಡುತ್ತ ಬಂದಿದ್ದಳು. ತಂಡ
ದವರು ದಿನವೂ ನಡೆಸುತ್ತಿದ್ದ ಕಾರ್ಯಕಲಾಪಗಳ ಅದ್ಭುತ ಕತೆಯನ್ನೆಲ್ಲ ಆತ
ಬರೆದು ತೆಗೆಯುತ್ತಿದ್ದ. ಅನಂತರ ಪ್ರತಿ ತೆಗೆಯುವ ಕಾರ್ಯ. ದಿನವೂ ಸಾವಿರಾರು
ಪ್ರತಿಗಳನ್ನು ತೆಗೆಯಬೇಕಾಗುತ್ತಿತ್ತು. ಕಟ್ಟಿಗೆ ಹೊರೆ ಹೊತ್ತು ಊರೂರು
ತಿರುಗುವ ನಂಬಿಕೆಯ ಲಂಬಾಣಿಗಳೊಂದಿಗೆ ಅವುಗಳನ್ನು ಕಳುಹಿಸಿಕೊಡ
ಬೇಕಾಗುತ್ತಿತ್ತು.

ಬಾಳಪ್ಪ, ಸಂಗಣ್ಣ ಸೆರೆಮನೆಗೆ ಹೋದರೂ ಗುಂಪಿನ ಬಲವೇನೂ ಕಡಮೆ
ಯಾಗಿರಲಿಲ್ಲ. ದಿನ ಕಳೆದಂತೆಲ್ಲ ಹೊಸ ಹೊಸ ಜನ ಬಂದು ಸೇರಿಕೊಳ್ಳುತ್ತಿತ್ತು.
ಲ್ಲಾಪುರದ ಸೀಮೆಯಲ್ಲಿ ಪೋಲೀಸರ ಕಾವಲು ಬಲಗೊಂಡಿದ್ದರಿಂದಾಗಿ ಗುಂಪು
ಈಗ ಪಶ್ಚಿಮಕ್ಕೆ ತಿರುಗಿ ಈ ತಾಲೂಕಿನಲ್ಲಿ ಕಾರ್ಯ ಸಾಗಿಸಿದ್ದಿತು. ತಾವು ಈ
ಕಡೆಗೆ ಬರುವುದಕ್ಕೆ ಮೊದಲೇ ಇಲ್ಲಿ ಕೆಲಸ ಸಾಗಿಸಿದ್ದ ಹುರುಪಿನ ಬಂಟರನೇಕರು
ತಮ್ಮನ್ನು ಕೂಡಿಕೊಂಡಿದ್ದರು. ಒಂದು ತಿಂಗಳಿನ ಅವಧಿಯಲ್ಲಿ ನೂರಾರು
ಕಾರ್ಯಗಳನ್ನು ಮಾಡಿ ಮುಗಿಸಲಾಗಿದ್ದಿತು. ಹಳ್ಳಿ ಹಳ್ಳಿಗಳನ್ನು ಸುತ್ತಿ,

ಚಾವಡಿಗಳನ್ನು ಸುಟ್ಟು. ಗೌಡ ಕುಲಕರ್ಣಿಯರ ದಪ್ತರುಗಳನ್ನು ನಾಶಗೊಳಿಸ
ಲಾಗಿದ್ದಿತು. ಅನೇಕ ಕಡೆಗಳಲ್ಲಿ ಕತ್ತಿ ಮೊದಲಾದ ಆಯುಧಗಳನ್ನೂ ಕಸಿದು
ಕೊಳ್ಳಲಾಗಿದ್ದಿತು. ಅಂಚೆಯ ಕಚೇರಿಗಳನ್ನು ಸುಡಲಾಗಿದ್ದಿತು. ಸರಕಾರದ
ಯಂತ್ರವನ್ನು ಸುತ್ತುಕಡೆಯಿಂದಲೂ ಮುರಿದುಹಾಕಲು ಭೀಕರ ಹೋರಾಟ
ನಡೆದಿತ್ತು.

ಆ ಹೋರಾಟದಲ್ಲಿ ಸಹಾಯಕವಾಗುವ ಹಾಗೆ ತಾವು ಕರಪತ್ರಗಳನ್ನು
ಹೊರಡಿಸಬೇಕಾಗಿದ್ದಿತು. ಆಗಸ್ಟ್ ತಿಂಗಳಿನಲ್ಲಿ ಚಳವಳಿಯ ಬಗ್ಗೆ ಜನತೆಯಲ್ಲಿ
ಎಂಥ ಉತ್ಸಾಹವಿದ್ದಿತೋ ಅದೇ ಕೊನೆಯವರೆಗೂ ಉಳಿಯುವಂತೆ ಮಾಡಲು
ಈ ಬಗೆಯ ಪ್ರಚಾರಕಾರ್ಯ ಅಗತ್ಯವಾಗಿದ್ದಿತು. ನಲವತ್ತು ಐವತ್ತು ಜನರ
ನ್ನೊಳಗೊಂಡ ಆ ಗುಂಪಿನಲ್ಲೆಲ್ಲ ಹೆಚ್ಚಾಗಿ ಓದಿದವರೆಂದರೆ ತಾವಿಬ್ಬರೇ. ಮಿಕ್ಕವ
ರೆಲ್ಲ ಹಳ್ಳಿಯವರು, ಹೊಲದಲ್ಲಿ ದುಡಿಯುವ ರೈತರು. ಅವರ ಉತ್ಸಾಹ
ಉಕ್ಕೇರುವಂತೆ ಮಾಡಲು, ಚಳವಳಿಗಾರರಿಗೆ ಜನತೆಯಿಂದ ಸಕಲ ವಿಧದ
ಸಹಾಯ ದೊರೆಯುವಂತೆ ಮಾಡಲು ತಾವಿಬ್ಬರೂ ದುಡಿಯಬೇಕಾಗಿತ್ತು.
ಪ್ರತ್ಯಕ್ಷವಾಗಿ ರಣರಂಗಕ್ಕೆ ಧುಮುಕಿ, ಕಾಡು ಬೆಟ್ಟಗಳನ್ನು ಸುತ್ತುತ್ತ ಹೋರಾಟ
ಸಾಗಿಸುವುದು ಹೆಂಗುಸಾದ ತನಗೆ ಸಾಧ್ಯವಾಗದಿದ್ದರೂ ಆ ಕೆಲಸ ಮಾಡುವವರಿಗೆ
ಸಹಾಯವಾಗುವಂಥ ಈ ಕೆಲಸ ಮಾಡುವ ಸಂಧಿಯಾದರೂ ದೊರೆಯಿತಲ್ಲ
ಎಂದು ಹೇಮಾವತಿಗೆ ಹರ್ಷವಾಗಿದ್ದಿತು. ಪಟ್ಟಣದಲ್ಲಿ ಬೆಳೆದು, ಪುಣೆಯಂಥ
ಮಹಾ ನಗರದಲ್ಲಿ ಕಾಲೇಜಿನಲ್ಲಿ ಕಲಿಯುತ್ತಿದ್ದ ಯುವತಿಯಾದರೂ ಆಕೆಗೆ ಈ
ಲಂಬಾಣಿ ತಾಂಡೆಯಲ್ಲಿನ ವಿಲಕ್ಷಣ ಜೀವನ ಕೊಂಚವೂ ಬೇಸರವನ್ನುಂಟು
ಮಾಡಲಿಲ್ಲ. ಪೋಲೀಸರಿಗೆ ಸಂದೇಹ ಬರದಿರುವಂತೆ ಆ ಕೆಲಸ ಸಾಗಿಸಬೇಕಾದರೆ
ಇಂಥ ಸುರಕ್ಷಿತವಾದ ಸ್ಥಳ ಇನ್ನೊಂದು ಸಿಕ್ಕುವುದು ಸಾಧ್ಯವಿರಲಿಲ್ಲವೆಂದೇ ಆ
ತಾಂಡೆಯನ್ನು ಆರಿಸಲಾಗಿದ್ದಿತು. ಅದರ ಮುಖಂಡನಾದ ಭೀಮಸಿಂಗನೂ
ಶೇಖರನ ಗುಂಪಿನವರಲ್ಲೊಬ್ಬನಾಗಿದ್ದು ಅವರಿಗೆ ಎಲ್ಲ ರೀತಿಯಲ್ಲೂ ನೆರವಾಗು
ತ್ತಿದ್ದುದರಿಂದ ಅಲ್ಲಿ ಕರಪತ್ರದ ಕಚೇರಿಯನ್ನೇರ್ಪಡಿಸಲೂ ಅನುಕೂಲವಾಗಿ
ದ್ದಿತು. ಅವನ ಹೇಳಿಕೆಯ ಮೇರೆಗೆ ಆಕೆಯೂ ಲಂಬಾಣಿ ಹೆಂಗುಸರಂಥ ವೇಷ
ವನ್ನೇ ಧರಿಸಬೇಕಾಗಿ ಬಂದಿತ್ತು. ಬಣ್ಣಬಣ್ಣಗಳ ಬಟ್ಟೆಗಳಿಂದ ಸಿದ್ಧವಾದ ಆ
ನಿಲುವಂಗಿ! ಅಗಲವಾದ ದಂತದ ಕೈಬಳೆ! ಮೊದಲಿನ ನಾಲ್ಕೈದು ದಿನ ಆ

ವೇಷ ವಿಚಿತ್ರವೆನ್ನಿಸಿದರೂ ಮುಂದೆ ಅದೂ ಅಭ್ಯಾಸವಾಗಿದ್ದಿತು. ತಮ್ಮ ವೇಷ ಧಾರಣೆ ಮಾಡುವ ಈ ಸುಶಿಕ್ಷಿತ ಯುವತಿಯ ಬಗ್ಗೆ ಲಂಬಾಣಿ ಹೆಂಗುಸರಿಗೆಲ್ಲ ಆತ್ಮೀಯತೆ ಹುಟ್ಟಿಕೊಂಡಿದ್ದಿತು. ಒಂದು ತಿಂಗಳಿನ ವಸತಿಯಿಂದಾಗಿ ಹೇಮಾವತಿಗೂ ಆ ಜನರ ಬಗ್ಗೆ ಆತ್ಮೀಯತೆಯುಂಟಾಗಿದ್ದಿತು.

ಅಡವಿಯಲ್ಲಿ ವಾಸಿಸುವ ಆ ಲಂಬಾಣಿಗಳೊಂದಿಗೆ ಹೇಮಾವತಿ ಅಷ್ಟು ಬೇಗ ಸಮರಸಳಾಗಿ ಹೋದುದು ವಿಶ್ವನಾಥನಿಗೆ ಆಶ್ಚರ್ಯವನ್ನುಂಟುಮಾಡದಿರಲಿಲ್ಲ. ಪುಣೆಯಲ್ಲಿ ಪಾತರಗಿತ್ತಿಯಂತೆ ಮೆರೆದ ಆ ಕಾಲೇಜುಕುಮಾರಿ ಲಂಬಾಣಿಗಳ ಈ ತಂಡದಲ್ಲಿ ಅವರ ಒರಟು ಬಟ್ಟೆ ಹಾಕಿಕೊಂಡು ಅವರೊಂದಿಗೆ ಬೆರೆತು ಉತ್ಸಾಹದಿಂದ ದಿನಗಳೆಯುತ್ತಿರುವುದೊಂದು ಅದ್ಭುತದ ವಿಷಯವಾಗಿತ್ತು ಅವನಿಗೆ. ಮೊದಲಿನಿಂದಲೂ ಆಕೆಯ ಬಗ್ಗೆ ಅವನಲ್ಲಿದ್ದ ಅಭಿಮಾನ ಒಂದು ತಿಂಗಳಿನ ಸತತ ಸಹವಾಸದಿಂದ ಗಾಢವಾದ ವಿಶ್ವಾಸಕ್ಕೆ ತಿರುಗಿದ್ದಿತು.

ಸಿಗರೇಟಿನ ಹೊಗೆಯನ್ನುಗುಳುತ್ತ ಆತ ಗುಡಿಸಲಿನ ಹುಲ್ಲಿನ ಗೋಡೆಗೊರಗಿ ಕುಳಿತುಕೊಂಡ. ಅವನೆದುರಿಗಿನ ಗೋಡೆಗೆ ತಲೆಯನ್ನೊರಗಿಸಿ ಆಕಳಿಸುತ್ತಿದ್ದಳು ಹೇಮಾ. ಅವಳ ದಣಿವನ್ನು ಗುರುತಿಸಿದಾಗ ವಿಶ್ವನಾಥನಿಗೆ ಕಳವಳ ಉಂಟಾಗದಿರಲಿಲ್ಲ.

"ನಿದ್ದೆ ಬಂತೇ ಹೇಮಾ?" ಎಂದನಾತ, ಪ್ರೀತಿಯಿಂದ ಅವಳನ್ನು ನಿಟ್ಟಿಸುತ್ತ.

ತುಂಬ ದಣಿವಾಗಿದ್ದರೂ ಅವಳ ಮುಖದ ಮೇಲಿನ ಮೋಹಕ ಮುಗುಳುನಗೆ ಮಾಯವಾಗಿರಲಿಲ್ಲ. ಕೊರಳನ್ನು ಒಂದು ಸಲ 'ಲಟಕ್' ಎಂದು ಹೊರಳಿಸಿ ಆಕೆ ಕೇಳಿದಳು: "ನಿನಗೆ ಬಂದಿಲ್ಲವೇ?"

"ನಾಲ್ಕು ರಾತ್ರಿ ನಿದ್ದೆಯಿಲ್ಲದಿದ್ದರೂ ನೀನು–ಹುಡುಗಿ–ಹೀಗೆ ಕೆಲಸ ಮಾಡ್ತಾ ಇರುವಾಗ ನನಗೆ ಹ್ಯಾಗೆ ನಿದ್ದೆ ಬಂದೀತು ಹೇಮಾ?"

"ನೀನಾದರೂ ಗಂಡಸಪ್ಪ. ಸಿಗರೇಟಿನಿಂದ ನಿದ್ದೆಯನ್ನು ಓಡಿಸಿಬಿಡುತ್ತೀ. ನಾನೋ ಹೆಂಗಸು–ಸಿಗರೇಟು ಮುಟ್ಟುವವಳಲ್ಲ. ಈ ನಿದ್ದೆ ಅನ್ನೋದು ಮನುಷ್ಯರಿಗಿರದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅಂತ...."

"ವಿಚಿತ್ರ ಹುಡುಗಿ ನೀನು ಹೇಮಾ! ಅಲ್ಲ, ನಿದ್ದೆ ಇರದಿದ್ದರ ವಿಶ್ರಾಂತಿ ಹ್ಯಾಗೆ ಸಿಗತಿತ್ತು ದಣಿದವರಿಗೆ—?"

"ದಣಿವೂ ಇರಬಾರದು ಅಂದರ ನೆಟ್ಟಗಾಗುತಿತ್ತು...." ಎಂದು ನುಡಿದು ಹೇಮಾ ಅಚ್ಚಾಗಿ ಬಿದ್ದಿದ್ದ ಹಾಳೆಗಳನ್ನು ಒಂದುಗೂಡಿಸತೊಡಗಿದಳು.

ಪಕ್ಕದಲ್ಲಿದ್ದ ಟ್ರಂಕಿನ ಮೇಲಿದ್ದ ಗಡಿಯಾರದಲ್ಲಿ ಗಂಟೆಯ ಮುಳ್ಳು ಮೂರರ ಅಂಕಿಯನ್ನು ದಾಟಿಹೋಗಿತ್ತು. ಇನ್ನು ಮೂರು ಗಂಟೆಗಳವರೆಗಾದರೂ ನಿದ್ರೆ ಮಾಡಬೇಕು ಎಂದುಕೊಂಡು ವಿಶ್ವನಾಥ ಸೈಕ್ಲೊಸ್ಟೈಲ್ ಯಂತ್ರವನ್ನು ಮುಚ್ಚಿ ಬದಿಗೆ ಸರಿಸಿ ಮೂಲೆಯಲ್ಲಿದ್ದ ಕಂಬಳಿಯನ್ನೆತ್ತಿಕೊಂಡು ಹೊರಡಲಣಿಯಾದ.

"ಇಷ್ಟು ಲಗೂ ನಿದ್ದೆ ಬಂತೇನೋ?" ಎಂದಳು ಹೇಮಾ, ತನ್ನ ಹಾಸಿಗೆಯ ಮೇಲೆ ಒರಗಿಕೊಳ್ಳುತ್ತ.

"ನನಗಾಗಿ ಅಲ್ಲದಿದ್ದರೂ ನಿನಗಾಗಿ ಆದರೂ ಮಲಗಬೇಕು ಈಗ, ಹೇಮಾ. ನೀ ಬಹಳ ದಣಿದುಹೋಗಿದ್ದೀ. ನಾಲ್ಕು ರಾತ್ರಿ ಕಣ್ಣಿಗೆ ಕಣ್ಣು ಹಚ್ಚಿಲ್ಲ. ಹೀಗೆ ಕೆಲಸ ಮಾಡಿದರೆ ಪ್ರಕೃತಿ ಕೆಟ್ಟು ಜಡ್ಡು ಬಂದೀತು. ಮೊದಲೇ ಕೋಮಲ ಶರೀರ. ಇಂದು ಇಷ್ಟೇ ಸಾಕು. ಮಲಗಿಕೋ."

"ಕೋಮಲ ಶರೀರ ಆದರೇನಂತೆ ವಿಶ್ವನಾಥ? ಎಲ್ಲ ಕೋಮಲ ಶರೀರದವರ ಹಾಗೆ ನಾನೂ ಕೋಮಲ ಮನಸ್ಸಿನವಳಾಗಿದ್ದರ ಹೀಗೆ ನಿಮ್ಮ ಸಂಗಡ ಚಳವಳಿಯೊಳಗ ಬರ್ತಿದ್ದೆನೇನು? ಇಂಥ ಗುಡಿಸಿಲದಾಗ ಹಗಲು ರಾತ್ರಿ ನಿನ್ನ ಕೂಡ ದುಡೀತಿದ್ದೆನೇನು? ಕೋಮಲ ಅಂತೆ ಕೋಮಲ! ಇನ್ನೊಮ್ಮೆ ಆ ಶಬ್ದ ತಗೀಬ್ಯಾಡ. ನನಗ ಸಿಟ್ಟು ಬರುತದ. ಸಿಟ್ಟು ಬಂದರ ಬಹಳ ಕೆಟ್ಟವಳು ನಾನು!" ಎಂದು ಹೇಮಾ ನಗತೊಡಗಿದಳು.

"ಹೌದು. ಬಹಳ ಕೆಟ್ಟ ಹುಡುಗಿ ನೀನು. ನನಗ ನಿದ್ದೀ ಕೂಡ ಮಾಡಗೊಡುವದಿಲ್ಲ!" ಎಂದು ನಗುತ್ತ ನುಡಿದು ವಿಶ್ವನಾಥ ಗುಡಿಸಲಿನಿಂದ ಹೊರಬಿದ್ದು, ಬಾಗಿಲಿನ ಚಿಲಕ ಹಾಕಿ, ತನ್ನ ಗುಡಿಸಲಿಗೆ ನಡೆದ.

ಬಾಗಿಲು ತೆರೆದು ಗುಡಿಸಲಿನ ಒಳಗೆ ಬಂದು ಚಿಮಣಿಯನ್ನು ಹತ್ತಿಸಿ, ಹಾಸಿಗೆಯ ಮೇಲೆ ಶರೀರವನ್ನೊರಗಿಸಿದ. ಕಂಬಳಿಯನ್ನು ಮುಖದವರೆಗೂ ಎಳೆದುಕೊಂಡು ಕಣ್ಣುಗಳನ್ನು ಮುಚ್ಚಿಕೊಂಡ. ಡಿಸೆಂಬರ್ ತಿಂಗಳಿನ ಅಂತ್ಯಕಾಲವಾದುದರಿಂದ ಚಳಿ ವಿಪರೀತವಾಗಿತ್ತು. ಹುಲ್ಲಿನ ಕಟ್ಟುಗಳ ಮಧ್ಯೆ ಅಲ್ಲಲ್ಲಿ ಇದ್ದ ಬಿರುಕುಗಳಿಂದ ತಣ್ಣನೆಯ ಗಾಳಿ ಬೀಸಿ ಬರುತ್ತಿತ್ತು. ಕಣ್ಣು

ಮುಚ್ಚಿದರೂ ನಿದ್ರೆ ಬರುವಂತೆ ತೋರಲಿಲ್ಲ. ಆ ಚಳಿಗಾಳಿಗೆ ಒಂದು ಕಂಬಳಿ ಸಾಲದೆಂಬುದು ಸ್ಪಷ್ಟವಾಗಿದ್ದಿತು. ತನಗೇ ಇಷ್ಟು ಚಳಿಯೆನ್ನಿಸುತ್ತಿರುವಾಗ ಹೇಮಾಗೆ ಎಷ್ಟು ಕಷ್ಟವಾಗುತ್ತಿರಬಹುದೋ ಎಂದುಕೊಂಡಾಗ ಅವನಿಗೆ ಕಳವಳ ವಾಗದಿರಲಿಲ್ಲ. ತನ್ನ ಕಂಬಳಿಯನ್ನೂ ಅವಳಿಗೇ ಕೊಟ್ಟು ಬರಲೇ ಎಂದುಕೊಂಡ. ಆದರೆ ಆಗತಾನೆ ಅಲ್ಲಿಂದ ಹೊರಟುಬಂದಿರುವಾಗ ಇಷ್ಟು ಬೇಗ ಮತ್ತೆ ಅಲ್ಲಿಗೆ ಹೋದರೆ ಆಕೆ ಏನು ತಿಳಿದುಕೊಳ್ಳುವಳೋ ಎಂದು ಯೋಚಿಸಿ ಆ ವಿಚಾರವನ್ನು ತೆಗೆದುಹಾಕಿದ. ಕಂಬಳಿಯನ್ನು ಮುಖದ ಮೇಲೂ ಎಳೆದುಕೊಂಡು ಬಲಮಗ್ಗು ಲಾಗಿ ಮಲಗಿ ನಿದ್ರಿಸಲು ಪ್ರಯತ್ನಿಸಿದ.

ಆ ಪ್ರಯತ್ನವೇನೂ ಫಲದಾಯಕವಾಗುವಂತಿರಲಿಲ್ಲ.

ಕಣ್ಣು ಮುಚ್ಚಿದ್ದರೂ ಕಣ್ಣಬೊಂಬೆಗಳೆದುರಿಗೆ ಹೇಮಾವತಿಯ ಮುಖವೇ ಮೂಡಿದಂತಾಗುತ್ತಿತ್ತು. ಅವಳ ಇನಿದನಿ ಮತ್ತೆ ಮತ್ತೆ ಕಿವಿಗಳಿಗೆ ಸೇರಿದಂತೆ ಭಾಸವಾಗುತ್ತಿತ್ತು. ತಾವಿಬ್ಬರೂ ಕೂಡಿ ಕಳೆದ ಈ ಒಂದು ತಿಂಗಳಿನ ಅವಧಿ ಯಲ್ಲಿ ಅವಳ ಬಗ್ಗೆ ಅವನಲ್ಲಿ ಗಾಢ ಅನುರಾಗ ಬೆಳೆದುಬಿಟ್ಟಿತ್ತು. ತನ್ನ ಹಾಗೇ ಅವಳಲ್ಲಿಯೂ ತನ್ನ ಬಗ್ಗೆ ಅನುರಾಗ ಹುಟ್ಟಿರಬಹುದೇ ಎಂದು ಆತ ಯೋಚಿಸಿ ಯೋಚಿಸಿ ಬಳಲಿದ ದಿನಗಳೂ ಇದ್ದುವು. ಹೇಮಾ ಅವನೊಂದಿಗೆ ತುಂಬ ಸಲುಗೆಯಿಂದ ವರ್ತಿಸುವಳು. ಪರಸ್ಪರರನ್ನು ಸಂಬೋಧಿಸುವಾಗ ಏಕವಚನ ವನ್ನುಪಯೋಗಿಸುವುದಂತೂ ಎಂದೋ ಆರಂಭವಾಗಿಹೋಗಿತ್ತು. ಯಾವ ಬಗೆಯ ಸಂಕೋಚಕ್ಕೂ ಆಸ್ಪದ ಕೊಡದೆ ಆಕೆ ಅವನೊಂದಿಗೆ ಮುಕ್ತವಾಗಿ ವರ್ತಿಸುತ್ತಿದ್ದಳು–ಒಡಹುಟ್ಟಿದ ಸೋದರನೊಂದಿಗೆ ತಂಗಿ ವರ್ತಿಸುವ ಸ್ವಚ್ಛಂದದ ರೀತಿಯವಳದು. ಒಂದು ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಬೇರೆ ರೀತಿ ಯನ್ನು ಸೂಚಿಸಿರಲಿಲ್ಲ. ಅಂತೆಯೇ, ಆತ ಸಂದೇಹದ ಸುಳಿಗೆ ಸಿಲುಕಿಕೊಂಡಿದ್ದ.

ಸ್ವಾತಂತ್ರ್ಯಕ್ಕಾಗಿ ಕೊನೆಯ ಹೋರಾಟ ನಡೆದಿರುವ ಈ ಸಂದರ್ಭದಲ್ಲಿ, ದೇಶದಲ್ಲೆಲ್ಲ ಸಾವಿರಾರು ವೀರರು ಪ್ರಾಣಾರ್ಪಣೆ ಮಾಡುತ್ತಿದ್ದ ಸಮಯದಲ್ಲಿ ತನ್ನೆಲ್ಲ ಶಕ್ತಿಯನ್ನೂ ಬುದ್ಧಿಯನ್ನೂ ಹೋರಾಟಕ್ಕಾಗಿಯೆ ವಿನಿಯೋಗಿಸುವುದು ತನ್ನ ಕರ್ತವ್ಯವಾಗಿರುವಾಗ ತಾನು ಹೇಮಾವತಿಯ ಬಗ್ಗೆ ಈ ರೀತಿ ಯೋಚಿಸುತ್ತ ಕುಳಿತಿರುವುದು ಉಚಿತವಲ್ಲ ಎಂದು ಅವನಿಗೆ ಎನಿಸಿದ್ದಿತು. ಹೇಮಾವತಿಯೂ ಅದೇ ಅಭಿಪ್ರಾಯವುಳ್ಳವಳಾಗಿದ್ದುದೂ ಒಂದು ಸಲ ತಿಳಿದುಬಂದಿದ್ದಿತು. ಅಂದು–

ಎಂಟು ದಿನಗಳಿಗೆ ಹಿಂದೆ ತಮ್ಮಿಬ್ಬರಲ್ಲಿ ಆ ಬಗ್ಗೆ ನಡೆದ ಮಾತುಕತೆಯೆಲ್ಲ ಮತ್ತೆ ಅವನಿಗೆ ನೆನಪಾಯಿತು.

ರಾತ್ರಿ ಹನ್ನೊಂದು ಹನ್ನೊಂದೂವರೆ ಗಂಟೆ ಆಗಿರಬಹುದು ಆಗ. ಸುಮಾರು ಎರಡು ನೂರು ಕರಪತ್ರಗಳನ್ನು ಅಚ್ಚುಮಾಡಿ ಮುಗಿಸಿ ಆಗಿತ್ತು. ನಡುವೆ ಕೊಂಚ ವಿರಾಮ ತೆಗೆದುಕೊಳ್ಳಲೆಂದು ತಾನು ಒಂದು ಸಿಗರೇಟು ಹೊತ್ತಿಸಿ ಸೇದುತ್ತಿದ್ದ. ಆಕೆ ಗೋಡೆಗೊರಗಿ ಕೈ ಗ ಳ ನ್ನು ಹಿಸುಕಿಕೊಳ್ಳುತ್ತಿದ್ದಳು. ಅಕಸ್ಮಾತ್ತಾಗಿ ತಾನು ಪ್ರಶ್ನೆ ಮಾಡಿದ್ದ :

" ನಿನಗೆ ವಯಸ್ಸೆಷ್ಟು ಹೇಮಾ, ಈಗ ?" .

ತನ್ನ ಪ್ರಶ್ನೆಯಿಂದ ಆಕೆಗೆ ನಗು ಬಂದುಬಿಟ್ಟಿತ್ತು. ಆಕೆ ತುಂಟತನದಿಂದ ನಗುತ್ತ—" ಯಾಕೆ ? ಸಿನಿಮಾ ನಟಿಯರಿಗೆ ಕೇಳುವ ಹಾಗೆ ಕೇಳ್ತೀಯಲ್ಲ ? ನನ್ನ ವಯಸ್ಸು ತಗೊಂಡೇನು ಮಾಡ್ತೀ ನೀನು ?" ಎಂದಿದ್ದಳು.

" ಏನಿಲ್ಲ. ಸುಮ್ಮನೆ ಕೇಳಿದೆ ?"

" ಇರಬಹುದು. ಹದಿನೆಂಟು ಆಗಿರಬಹುದು."

" ಈ ವಯಸ್ಸಿನಾಗ ಇಂಥಾ ಜಾಗದೊಳಗ, ಇಂಥಾ ರಾತ್ರಿಯೊಳಗ ನನ್ನಂಥ ಹುಡುಗನ ಸಂಗಡ ಕೆಲಸ ಮಾಡ್ತಾ ಇರುವಾಗ ನಿನಗ ಏನೂ ಅನ್ನಿಸು ವದಿಲ್ಲೇನು ?" ಎಂದು ಹೆದರುತ್ತ ಹೆದರುತ್ತಲೇ ತಾನು ಕೇಳಿದ್ದ.

ಅವಳ ಮುಖದಲ್ಲಿ ನಗೆ ಕ್ಷಣಕಾಲ ಮಾಯವಾಗಿ ಅದರ ಸ್ಥಳವನ್ನು ಗಾಂಭೀರ್ಯ ಆಕ್ರಮಿಸಿಕೊಂಡಂತೆ ತೋರಿಬಂದಿತ್ತು. ಸ್ವಲ್ಪಹೊತ್ತು ಸುಮ್ಮ ನಿದ್ದು ಆಕೆಯೆಂದಿದ್ದಳು.

" ನೀ ಕೇಳೂದು ನನಗರ್ಥ ಆಯ್ತು, ವಿಶ್ವನಾಥ. ಆದರೆ ನನ್ನ ವಯಸ್ಸಿನ ಬೇರೆ ಹುಡುಗಿಯರಿಗೂ ನನಗೂ ಇರುವ ಭೇದವನ್ನು ನೀ ಮರೀ ಬಾರದು ನನ್ನ ವಯಸ್ಸಿನ ಎಷ್ಟು ಜನ ಹುಡುಗಿಯರು, ಅದರಲ್ಲೂ ಕಾಲೇಜು ಕುಮಾರಿಯರು ಚಳವಳಿಯೊಳಗ ಬಿದ್ದು ಕೆಲಸ ಮಾಡ್ತಾ ಇದಾರೆ ಹೇಳು. ಮೆರವಣಿಗೆ ಸಭೆ ಗಳೊಳಗ ಭಾಗವಹಿಸಿ ಎಷ್ಟೋ ಮಂದಿ ಜೇಲಿಗೆ ಹೋಗಿದ್ದಾರ, ನಿಜ. ಆದರೆ ಜೇಲಿಗೆ ಹೋಗಿ ಸುಮ್ಮನೆ ಬೀಳೂದು ನನ್ನ ಮನಸ್ಸಿಗೊಪ್ಪಲಿಲ್ಲ. ನನಗ ಚಟು ವಟಿಕೆ ಅಂದರ ಪ್ರೀತಿ. ಮಾಡೂದಕ್ಕ ಏನಾದರೂ ಕೆಲಸ ಇರದಿದ್ದರ ನನ್ನ ಜೀವ ರಮಿಸುವುದಿಲ್ಲ. ಅಂತೇ ನಾ ಜೇಲಿಗೆ ಹೋಗಲಿಲ್ಲ. ಜೇಲಿಗೆ ಹೋಗದೆ, ನಿಮ್ಮಂಥ

ರರ ಸಂಗಡ ಸೇರಿ ಕಡೆಯತನಕ ದುಡಿಯಬೇಕಂತ ನಾ ಇಲ್ಲಿಗೆ ಬಂದೆ. ನೀವು-
ಗಂಡಸರು ಗುಡ್ಡಾ ಬೆಟ್ಟಾ ತಿರುಗಿ ಉಪವಾಸ ವನವಾಸ ಸಹಿಸಿ ಗಂಡಾಂತರದ
ಬಾಯೊಳಗs ಬಿದ್ದಿರುವಾಗ ನಾವು ಹೆಂಗಸರು ಮಾತ್ರ ಆರಾಮಾಗಿ ಮನೆಯೊಳಗ
ಕುಲಗಿದರ ಹ್ಯಾಗೆ? ನಲವತ್ತೆರಡರ ಚಳವಳಿ ಅಂದರ ಅಂಥಿಂಥಾ ಚಳವಳಿ
ಅಲ್ಲ, ವಿಶ್ವನಾಥ. ಬ್ರಿಟಿಷ್ ಸರಕಾರವನ್ನ ತೊಲಗಿಸಬೆ ನಿಲ್ಲುವ ಹಾಗಿಲ್ಲ ಈ
ಚಳವಳಿ. ಇದರೊಳಗ ನಮ್ಮ ನಾಡಿನೊಳಗ ಹೆಂಗಸರೊಬ್ಬರೂ ಕೆಲಸ ಮಾಡಿಲ್ಲ
ಅಂತಾದರ ನಮಗೆಷ್ಟು ಅವಮಾನ ಅದು! ನಾಳೆ ಈ ಚಳವಳಿಯ ಇತಿಹಾಸ
ಬರೆಯುವವರು ನಮ್ಮ ಹೆಣ್ಣು ಜಾತಿಯನ್ನೇ ಕೀಳಾಗಿ ಕಾಣಿಸಬಾರದು! ನನ್ನ
ಮಟ್ಟಿಗೆ ಹೇಳಬೇಕಾದರ, ಈ ಚಳವಳಿಯೊಳಗ ಇರೂತನಕ ನಾ ಹೆಣ್ಣು
ಅನ್ನೂದನ್ನೇ ಮರೆತು ಇರ್ತೀನಿ. ಈಗ ನನ್ನ ಕಣ್ಣಿಗೆ ನೀನು ಬರೀ ಗಂಡಸಲ್ಲ,
ನಾನು ಬರೀ ಹೆಂಗುಸಲ್ಲ. ಈಗ ನಡದಿರೂದು ಯುದ್ಧ. ಈ ಯುದ್ಧದಾಗ
ಭಾಗವಹಿಸಿದವರು ನಾವಿಬ್ಬರು ಸೈನಿಕರು. ಅಷ್ಟೇ. ಅರ್ಥ ಆಯ್ತೋ ಇಲ್ಲೋ
ನಿನಗೆ?"

ಇಲ್ಲ. ತನಗೆ ಆಗಲೂ ಅರ್ಥವಾಗಿರಲಿಲ್ಲ.

"ಸೈನಿಕರಾದರೇನಾಯ್ತು ಹೇಮಾ? ಸೈನಿಕರಿಗೂ ಮನಸ್ಸು ಇರುವ
ದಿಲ್ಲೇನು?" ಎಂದು ತಾನು ಕೇಳಿದ್ದ.

"ಇರ್ತದ ಅನ್ನೂದು ನಿಜ. ಆದರs ಆ ಮನಸ್ಸು ಪೂರಾ ಯುದ್ಧದ
ವಿಚಾರದೊಳಗs ತೊಡಗಿದ್ದರೆ ಹೆಣ್ಣು ಗಂಡು ಅನ್ನೋ ವಿಚಾರ ಬರುವುದಕ್ಕೆ
ಹೊತ್ತೆಲ್ಲಿಯದು? ನನಗಂತೂ ಅಂಥಾ ವಿಚಾರ ಕನಸಿನೊಳಗೂ ಬರೂದಿಲ್ಲ."

ಆ ಮಾತಿನಿಂದ ತನಗೆ ಆಶ್ಚರ್ಯವುಂಟಾಗಿದ್ದಿತು. ನಗುನಗುತ್ತಾ ಕೇಳಿದ್ದ:
"ಏನೋ ವಿಚಿತ್ರ ಎಲ್ಲಾ ಮಾತಾಡುತೀ ಹೇಮಾ. ನಿನ್ನ ಮಾತು ನನಗೇನೂ
ನಂಬಿಕೆಯಾಗುವದಿಲ್ಲ. ನೀ ಹೇಳೋದೆಲ್ಲಾ ನಿಸರ್ಗಕ್ಕೆ ವಿರುದ್ಧ...."

"ನಿಸರ್ಗಕ್ಕೆ ವಿರುದ್ಧ ಅಂದರೇನು? ನಾವಿಟ್ಟುಕೊಂಡ ಹಾಗೆ ಇರ್ತದ
ನಿಸರ್ಗ. ನಾವು ಅದರ ದಾಸರಾಗಬಾರದು. ಅದೇ ನಮ್ಮ ದಾಸನಂತಾಗಬೇಕು.
ನಮ್ಮ ಬುದ್ಧಿಯನ್ನ ನಮ್ಮ ಹಿಡಿತದೊಳಗಿಟ್ಟುಕೊಂಡಿದ್ದರ ಯಾವ ನಿಸರ್ಗ
ಏನು ಮಾಡೀತು? ನನಗಂತೂ ಕೆಲಸ ಇದ್ದುಬಿಟ್ಟರಾಯ್ತು, ಮೈ ಮನಸು
ಎರಡೂ ಅದರೊಳಗs ತುಂಬಿಕೊಂತಾವೆ. ಬೇರೆ ವಿಚಾರದ ಗಂಧವೂ ಇರೋ

ದಿಲ್ಲ...." ಎಂದು ನುಡಿದು ಆಕೆ ಮತ್ತೆ ಯಂತ್ರವನ್ನು ಕೈಗೆ ತೆಗೆದುಕೊಂಡು ಯಾಂತ್ರಿಕವಾಗಿಯೆ ಕೆಲಸವನ್ನು ಮುಂದುವರಿಸಿದ್ದಳು. ಆಮೇಲೆ ತಾನೂ ಹೆಚ್ಚು ಮಾತನಾಡಲು ಹೋಗಿರಲಿಲ್ಲ. ಆ ವಿಚಾರವನ್ನು ಅಷ್ಟಕ್ಕೇ ಬಿಟ್ಟು ಬಿಟ್ಟಿದ್ದ. ಆದರೂ ಆಗಾಗ ಮತ್ತೆ ಮತ್ತೆ ಅದು ತನ್ನೆದೆಯಲ್ಲಿ ಬಿರುಗಾಳಿಯನ್ನು ಹುಟ್ಟಿಸದಿರುತ್ತಿರಲಿಲ್ಲ.

ಅಂಥ ಸಂದರ್ಭದಲ್ಲಿ ಹೇಮಾವತಿಯ ಚಾರಿತ್ರ್ಯವನ್ನು ನೆನೆದೊಡನೆ ತನಗೆ ಅಚ್ಚರಿಯಾಗದಿರುತ್ತಿರಲಿಲ್ಲ. ಹಾಗೆ ನೋಡಿದರೆ, ಸ್ತ್ರೀಯರ ಸ್ವಭಾವ ತನಗೆ ಅಪರಿಚಿತವಾದುದೇನೂ ಅಲ್ಲ. ತಾನು ಬೆಳಗಾವಿಯ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ತನ್ನ ವರ್ಗದಲ್ಲಿದ್ದ ಆ ಪುಷ್ಪಾ! ಹದಿನೈದು ವರ್ಷ ವಯಸ್ಸಿನ ಹುಡುಗಿಯಾದರೂ ಪ್ರಣಯದ ವಿಚಾರಗಳಲ್ಲಿ ಸ್ವಚ್ಛಂದವಾಗಿ ವರ್ತಿಸುತ್ತಿದ್ದಳು. ಸಿರಿವಂತರಾದ ವಕೀಲರ ಮಗಳು. ರಾಜಕುಮಾರಿಯಂತೆ ಬೆಳೆದವಳು. ನಾಲ್ಕಾರು ತಿಂಗಳುಗಳ ಕಾಲ ತನ್ನೊಂದಿಗೆ ಎಂಥ ಸ್ನೇಹ ಕಟ್ಟಿಕೊಂಡಿದ್ದಳು! ಆಕಸ್ಮಾತ್ತಾಗಿ ಅವಳಿಗೆ ಮದುವೆ ಗೊತ್ತಾದಾಗ ತನಗೆಷ್ಟು ದುಃಖವಾಗಿದ್ದಿತು! ಅವಳಿಗೂ ವ್ಯಥೆಯಾಗಿದ್ದಿತೆಂಬುದು ಆಗಿನ ಅವಳ ಮಾತುಗಳಿಂದ ವ್ಯಕ್ತವಾಗಿದ್ದಿತು. ಪುಣೆಯಲ್ಲಿ ಕಾಲೇಜಿನಲ್ಲಿ ತನ್ನೊಂದಿಗೆ ಓದುತ್ತಿದ್ದ ಆ ಮರಾಠೀ ಹುಡುಗಿಯರು! ತಾನು ದೇಸಾಯರ ಏಕಮಾತ್ರ ಪುತ್ರನೆಂಬುದು ತಿಳಿದು ತ್ತಲೂ ತನ್ನ ಸುತ್ತುಮುತ್ತು ಹಾಡುತ್ತ ತನ್ನನ್ನು ಆಕರ್ಷಿಸಲು ಪ್ರಯತ್ನಿಸುತ್ತಿದ್ದ ಆ ಪಾತರಗಿತ್ತಿಗಳು! ಹೇಮಾವತಿಯೂ ಅಂಥವರಲ್ಲೊಬ್ಬಳಾಗಿರಬಹುದೆಂದು ತಾನು ಆಗ ಭಾವಿಸಿದ್ದ. ಅಂತೆಯೆ ಅವಳ ಬಗ್ಗೆ ವಿಶೇಷ ಆಸಕ್ತಿಯನ್ನಿಟ್ಟು ಕೊಳ್ಳದೆ ದೂರವಿದ್ದುಬಿಟ್ಟಿದ್ದ. ಮನುಷ್ಯನ ಬುದ್ಧಿ ಇಷ್ಟು ಅಂಧವಾಗಿರುವುದೆಂಬುದು ತನಗಾಗ ತಿಳಿದಿರಲಿಲ್ಲ. ಬಣ್ಣಬಣ್ಣದ ಪತ್ತಲುಗಳನ್ನುಟ್ಟುಕೊಂಡು ಕೈ ಬೀಸುತ್ತ ತಿರುಗುತ್ತಿದ್ದ ಈ ನಾಜೂಕು ಯುವತಿ ಇಂಥ ದೃಢಚಾರಿತ್ರ್ಯವನ್ನುಳ್ಳವಳಾಗಿರಬಹುದೆಂದು ತನಗಾಗ ಎಲ್ಲಿ ತಿಳಿದಿದ್ದಿತು! ಅಂದು ಅವಳನ್ನು ಕಂಡರೆ ನಿರ್ಲಕ್ಷ್ಯದಿಂದಿರುತ್ತಿದ್ದ ತಾನೇ ಇಂದು ಅವಳಲ್ಲಿ ಅನುರಕ್ತನಾಗಿದ್ದಾನೆ! ಅಂತೂ ನಿಸರ್ಗದ ಲೀಲೆ ವಿಚಿತ್ರವೆನ್ನುವುದೇನೂ ಸುಳ್ಳಲ್ಲ ಹಾಗಾದರೆ....!

....ಆ ಪಕ್ಕದಿಂದ ಈ ಪಕ್ಕಕ್ಕೆ ತಿರುಗಿ ಕಂಬಳಿಯನ್ನು ಗಟ್ಟಿಯಾಗಿ

ಮುಖದ ಮೇಲೆ ಹೊದೆದುಕೊಂಡ ವಿಶ್ವನಾಥ. ನಿದ್ರೆ ಬರುವುದು ಸಾಧ್ಯವಿರಲಿಲ್ಲ! ಅವನ ಎದೆಯಲ್ಲಿ ಭೀಕರವಾದ ಕೋಲಾಹಲಕ್ಕಾರಂಭವಾಯಿತು.

"ಈ ಹೇಮಾ ಬೆಳಗಾವಿಯನ್ನು ಬಿಟ್ಟು ಏತಕ್ಕಾದರೂ ಬಂದಳೋ ನಮ್ಮ ಗುಂಪಿನಲ್ಲಿ! ಅವಳು ಬಂದಿರದಿದ್ದರೆ ಇಂಥ ಸಂಕಟ ನನಗೆ ಬರುತ್ತಿರಲಿಲ್ಲ!" ಎಂದು ಒಂದು ಮನಸ್ಸು ಕೂಗಿಕೊಂಡ ಹಾಗಾಯಿತು.

ಕೂಡಲೆ ಇನ್ನೊಂದು ಮನಸ್ಸು ಸಿಡಿದೆದ್ದು—"ಸಾಕು ಮಾಡು ನಿನ್ನ ವಲ್ಗನೆಯನ್ನ! ಅವಳೆಂದು ಬರುತ್ತಾಳೋ ಎಂದು ಅಂದಿನಿಂದ ಹಂಬಲಿಸುತ್ತಿರಲಿಲ್ಲವೇ ನೀನು? ಈ ಚಳವಳಿಗೆ ನೀನು ಸೇರುವುದಕ್ಕೂ ಸಹ ಅವಳ ಸಹವಾಸದಾಸೆಯೇ ಕಾರಣವಲ್ಲವೇ?" ಎಂದು ಗದರಿಸಿತು.

"ಅಂ? ಏನು ಹೇಳುತ್ತೀ? ಅಲ್ಲದ ಸಲ್ಲದ ಆರೋಪ ಮಾಡಬೇಡ."

"ನಿನ್ನ ಅಂತರಂಗದಲ್ಲಿ ಏನಿದೆಯೋ ಅದನ್ನೇ ಬಿಚ್ಚಿ ಹೇಳುತ್ತಿದೇನೆ ನಾನು. ಸಿಟ್ಟೇಕೆ? ಅಂದು ನೀನು ರೈಲಿನಲ್ಲಿ ಬರುತ್ತಿರುವಾಗ ದಾರಿಯಲ್ಲಿ ಆಕೆಯ ಭೆಟ್ಟಿಯಾಗದಿದ್ದರೆ ನೀನೇನು ಮಾಡುತ್ತಿದ್ದೆ ಹೇಳುತೀಯಾ?"

"ಏನೋ, ಯಾವುದನ್ನೂ ನಿರ್ಧರಿಸಿರಲಿಲ್ಲ."

"ಹೂಂ! ಹೀಗೆ ಹಾದಿಗೆ ಬಾ. ಕಾಲೇಜು ಮುಚ್ಚಿದ ಮೇಲೆ ಎಲ್ಲ ವಿದ್ಯಾರ್ಥಿಗಳ ಹಾಗೆ ನೀನೂ ಊರಿಗೆ ಹೊರಟಿದ್ದೆ. ಚಳವಳಿಗೆ ಸೇರಬೇಕೆಂಬ ವಿಚಾರವೇನೂ ನಿನ್ನಲ್ಲಿರಲಿಲ್ಲ. ದಾರಿಯಲ್ಲಿ ಆಕೆಯ ಭೆಟ್ಟಿಯಾಗದಿದ್ದರೆ ಬಹುಶಃ ನೀನು ನೆಟ್ಟಗೆ ಊರಿಗೆ ಬಂದು, ಪುನಃ ಕಾಲೇಜು ಪ್ರಾರಂಭವಾಗುವವರೆಗೂ ಮನೆಯಲ್ಲಿ ಸುಖವಾಗಿ ಉಣ್ಣುತ್ತ ಕುಳಿತುಕೊಳ್ಳುತ್ತಿದ್ದೆ. ಹೌದೋ, ಅಲ್ಲವೋ?"

"ಇರಬಹುದು. ನಾನೇನೂ ಯೋಚಿಸಿರಲಿಲ್ಲ...."

"ಯಾವುದನ್ನೂ ಯೋಚಿಸದೆ ಗಾಳಿ ಬಂದತ್ತ ಹೋಗುತ್ತಿದ್ದೆ ನೀನು. ದೇಶದ ಬಗ್ಗೆ ನಿನಗಿರುವ ಕರ್ತವ್ಯವೇನೆಂಬುದನ್ನು ಮರೆತುಬಿಟ್ಟಿದ್ದೆ. ಅಂಥ ಸಮಯದಲ್ಲಿ ರೈಲಿನಲ್ಲಿ ಹೇಮಾಳ ಮುಖ ಕಂಡಿತು ನಿನಗೆ. ಅಂದು ರಾತ್ರಿ ನಿನಗೆ ನಿದ್ರೆ ಬರುತ್ತಿರಲಿಲ್ಲ. ಡಬ್ಬಿಯಲ್ಲಿ ನೀನೊಬ್ಬನೇ ಇದ್ದುದರಿಂದ ಬಹಳ ಬೇಸರವೂ ಬಂದಿತ್ತು. ಅಂತೆಯೇ, ಪರಿಚಿತಳೂ ಸುಂದರಿಯೂ ಆದ ಯುವತಿಯೊಬ್ಬಳು ಆ ಪ್ರವಾಸ ಕಾಲದಲ್ಲಿ ಭೆಟ್ಟಿಯಾದಾಗ ನಿನಗೆ ಬಹಳ ಸಂತೋಷವಾಗಿತ್ತು. ಅವಳೊಂದಿಗೆ ಮಾತನಾಡುತ್ತ ಬೆಳಗಾವಿಯವರೆಗೂ ಹೋಗ

ಬೇಕೆಂದು ನಿನ್ನ ಮನಸ್ಸಿನಲ್ಲಿತ್ತು. ಆಕಸ್ಮಾತ್ತಾಗಿ ಚಳವಳಿಯ ವಿಚಾರ ಬಂದಾಗ ಆಕೆ ತಾನೂ ಹೋರಾಟಕ್ಕೆ ಸೇರುವ ನಿರ್ಧಾರವನ್ನು ತಿಳಿಸಿದ್ದಳು. ಆಗ ನೀನು ಹೇಳಿದೆ ಗೊತ್ತೇನು? ನನಗೂ ವಿಚಾರ ಬಂದಿತ್ತು—ಎಂದು ಸುಳ್ಳು ಹೇಳಿದೆ. ನಿನಗೆ ಅಂಥ ವಿಚಾರ ಆ ಮೊದಲೆಂದೂ ಬಂದಿರಲಿಲ್ಲ. ಆದರೂ ಆ ಸಂದರ್ಭದಲ್ಲಿ ಆಕೆಯ ಮೇಲೆ ಪ್ರಭಾವ ಬೀರುವುದಕ್ಕಾಗಿ ಆ ಬಗೆಯಾಗಿ ಸುಳ್ಳು ಹೇಳಿದೆ. ಮುಂದೆ ಮಾತಿಗೆ ಮಾತು ಬೆಳೆದಾಗ ನಿನ್ನ ಸುಳ್ಳಿನ ಬಲೆಯಲ್ಲಿ ನೀನೇ ಸಿಲುಕಿಕೊಂಡುಬಿಟ್ಟೆ. ನಿನ್ನ ಸ್ವಾಭಿಮಾನಕ್ಕೆ ಆಘಾತವನ್ನುಂಟು ಮಾಡುವ ಮಾತೊಂದನ್ನು ಆಕೆ ಆಡಿದುದೇ ಅದಕ್ಕೆ ಕಾರಣವಾಯಿತು. ಅಲ್ಲದೆ, ಚಳವಳಿಯಲ್ಲಿ ಆಕೆಯೂ ಇರುವುದರಿಂದ ಅವಳ ಸಹವಾಸದಲ್ಲಿ ಸುಖವಾಗಿ ಕೆಲಸ ಮಾಡಬಹುದೆಂಬ ಆಸೆಯೂ ನಿನಗಿದ್ದಿತು...."

"ಸುಳ್ಳು....ಸುಳ್ಳು....ಅಂಥ ಸ್ವಾರ್ಥ ವಿಚಾರ ಸಹ ನನಗೆ ಬಂದಿರಲಿಲ್ಲ...."

"ನೀನು ಯಾರನ್ನು ಮೋಸಗೊಳಿಸಿದರೂ ನನ್ನನ್ನು ಮೋಸಗೊಳಿಸಲಾರೆ. ಕಲ್ಲಾಪುರಕ್ಕೆ ಬಂದ ಮೇಲೆ ಆಕೆ ಬೇಗನೆ ಇಲ್ಲಿಗೆ ಬರುವಂತೆ ಮಾಡಲು ನೀನೆಷ್ಟು ಬಗೆಯಾಗಿ ಯತ್ನಿಸಲಿಲ್ಲ! ಈ ತಾಂಡೆಯಲ್ಲಿ ವಸತಿಯ ಏರ್ಪಾಟಾದಾಗ ನಿನಗೆಷ್ಟು ಸಂತೋಷವಾಗಿರಲಿಲ್ಲ! ಕರಪತ್ರ ಅಚ್ಚುಮಾಡುವ ಕೆಲಸವನ್ನು ಬಿಟ್ಟು ನೀನೆಷ್ಟು ಸಲ ಅವಳ ಮುಖವನ್ನೇ ದಿಟ್ಟಿಸುತ್ತ ಕುಳಿತುಕೊಂಡಿಲ್ಲ!"

"ಇಷ್ಟಕ್ಕೆಲ್ಲ ಯಾಕೆ ಜಗಳ ತೆಗೆಯುತ್ತೀ! ತಾರುಣ್ಯದಲ್ಲಿ ಇದೆಲ್ಲ ಸಾಭಾವಿಕ, ನೈಸರ್ಗಿಕ."

"ನೈಸರ್ಗಿಕ ಎಂದು ಹೇಳಿ ನಿನ್ನನ್ನು ನೀನೇ ವಂಚಿಸಿಕೊಳ್ಳಬೇಡ. ತನ್ನ ವಿಚಾರಗಳನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲಾರದ, ಇಂದ್ರಿಯಗಳನ್ನು ಜಯಿಸಲಾರದ ಹೇಡಿ ತನ್ನ ದೌರ್ಬಲ್ಯದ ಕೃತ್ಯಗಳನ್ನೆಲ್ಲ 'ನಿಸರ್ಗದ ಲೀಲೆ' ಎಂಬ ಬಣ್ಣದ ಮಾತುಗಳಿಂದ ಮರೆಯಿಸಲು ಪ್ರಯತ್ನಿಸುತ್ತಾನೆ. ಹೇಮಾ ಬಲು ಒಳ್ಳೆಯ ಹುಡುಗಿ. ಸರಲ ಸ್ವಭಾವದ, ವಿಶುದ್ಧ ಚಾರಿತ್ರ್ಯದ ಕುವರಿ. ದೇಶಕ್ಕಾಗಿ ತಾನೂ ಏನನ್ನಾದರೂ ಸೇವೆ ಸಲ್ಲಿಸಬೇಕೆಂಬ ಉತ್ಸಾಹದಿಂದ ನಿಮ್ಮೊಂದಿಗೆ ಬಂದಿದ್ದಾಳೆ. ಅವಳನ್ನು ಸರಲತನದಿಂದ, ಅಶುದ್ಧ ದೃಷ್ಟಿಯಿಂದ ನೋಡ

ಬೇಕಾದುದು ನಿನ್ನ ಕರ್ತವ್ಯ. ನೀವಿಬ್ಬರೂ ಮಾಡುತ್ತಿರುವ ಕೆಲಸ ಪವಿತ್ರವಾದ ಕೆಲಸ. ಅದರಲ್ಲಿ ನಿನ್ನ ಮೋಹದ ವಿಷಗಾಳಿಯನ್ನು ಬೆರಸಬೇಡ...."

'ಕುಕ್ಕೊ, ಕುಕೂಕೂ' ಎಂದು ಬೆಳಗಿನ ಕೋಳಿ ಉದಯರಾಗಕ್ಕಾರಂಭಿಸಿತು. ವಿಶ್ವನಾಥ ಕಂಬಳಿಯನ್ನು ತೆಗೆದೊಗೆದು ಮೇಲಕ್ಕೆದ್ದ. ರಾತ್ರಿಯೆಲ್ಲ ನಿದ್ರೆಯಿರಲಿಲ್ಲವಾದುದರಿಂದಲೂ ವಿಚಾರಗಳ ಹೊಯ್ದಾಟದಿಂದಲೂ ಅವನ ತಲೆ ಸಿಡಿಯತೊಡಗಿದ್ದಿತು. ಎಡಗೈಯಿಂದ ಹಣೆಯನ್ನು ಹಿಸುಕಿಕೊಳ್ಳುತ್ತ ಗುಡಿಸಲಿನ ಬಾಗಿಲನ್ನು ತೆರೆದು ಹೊರಕ್ಕೆ ಬಂದ. ಎಡಗಡೆಗೆ ಮೂಡಲ ದಿಶೆಯಲ್ಲಿ ಬೆಳಕಿನ ಶಿಶು ಮೆಲ್ಲಮೆಲ್ಲನೆ ತಾಯ ಗರ್ಭದಿಂದ ಹೊರಬೀಳುತ್ತಿತ್ತು. ಅದನ್ನು ಸ್ವಾಗತಿಸುವುದಕ್ಕಾಗಿಯೋ ಎಂಬಂತೆ ಆಗಸದಲ್ಲಿ ಚಿಕ್ಕೆಗಳ ಬಳಗ ಕುಲುಕುಲು ಮಿನುಗುತ್ತಿತ್ತು. ಸುದೂರದಲ್ಲಿ ಬೆಟ್ಟಗಳ ಗುಂಪು ಆ ಮಬ್ಬು ಬೆಳಕಿನಲ್ಲಿ ಮೋಹಕವಾಗಿ ತಲೆಯೆತ್ತಿ ನಿಂತುಕೊಂಡಿತ್ತು. ಪಡುವಣ ದಿಕ್ಕಿನಿಂದ ಬೀಸಿ ಬರುತ್ತಿದ್ದ ತಣ್ಣನೆಯ ಗಾಳಿ ಮೈ ಕೊರೆಯುತ್ತ ಮುಂದೆ ಸಾಗುತ್ತಿದ್ದರೂ ವಿಶ್ವನಾಥನಿಗೆ ಅದರ ಅರಿವು ಇರಲಿಲ್ಲ. ನಸು ದೂರದಲ್ಲಿ ಮಬ್ಬು ಬೆಳಕಿನಲ್ಲಿ ಅಸ್ಫುಟವಾಗಿ ತೋರುತ್ತಿದ್ದ ಆ ಗುಡಿಸಲನ್ನು—ಹೇಮಾ ಮಲಗಿದ್ದ ಆ ಗುಡಿಸಲನ್ನು—ಶೂನ್ಯ ದೃಷ್ಟಿಯಿಂದ ನಿರುಕಿಸುತ್ತ, ಹಾಗೇ ಕೆಲಕಾಲ ನಿಂತುಕೊಂಡ. "ಹೇಮಾ, ನೀನೇಕೆ ಬಂದೆ ನನ್ನ ಬಾಳಿನಲ್ಲಿ? ದೂರ ಎಲ್ಲಾದರೂ ಇರಬಾರದಾಗಿದ್ದಿತೇ?" ಎಂದು ಅಂದುಕೊಂಡ.

ಸೂರ್ಯೋದಯವಾಗುವವರೆಗೂ ಹೊಲಗಳಲ್ಲಿ ಅಲೆದು ಬಂದರೆ ತಲೆ ಸಿಡಿಯುವುದು ನಿಲ್ಲಬಹುದೆಂದು ಯೋಚಿಸಿ ಆತ ಗುಡಿಸಲನ್ನು ಬಿಟ್ಟು ಹೊರಟ. ಹೇಮಾವತಿಯ ಗುಡಿಸಲಿನ ಎದುರಿನಿಂದ ಹಾಯ್ದು ಹೋಗುತ್ತಿದ್ದ ಹಾಗೆ ಸಹಜವಾಗಿಯೆ ಅವನ ದೃಷ್ಟಿ ಅತ್ತ ಹೊರಳಿತು. ಗುಡಿಸಲಿನ ಬಿರುಕುಗಳೊಳಗಿನಿಂದ ದೀಪದ ಬೆಳಕು ಕಾಣಿಸುತ್ತಿತ್ತು. ಅವನಿಗೆ ಆಶ್ಚರ್ಯವಾಗದಿರಲಿಲ್ಲ. ತನ್ನಂತೆಯೆ ಆಕೆಗೂ ನಿದ್ರೆ ಬರಲಿಲ್ಲವೊ ಏನೊ, ಆಕೆಯೂ ತನ್ನ ಹಾಗೆಯೆ ವಿಚಾರಸಾಗರದಲ್ಲಿ ಮುಳುಗುತ್ತಿರುವಳೋ ಏನೊ ಎಂದುಕೊಂಡು ಗುಡಿಸಲಿನ ಬಾಗಿಲಿನ ಬಳಿ ನಿಂತುಕೊಂಡು ಒಂದು ಬಿರುಕಿನೊಳಗಿನಿಂದ ದೃಷ್ಟಿಯನ್ನು ಬಿಟ್ಟು ನೋಡಿದ. ಅವನ ಊಹೆ ಅರ್ಧ ನಿಜವಾಗಿತ್ತು. ಹೇಮಾ ನಿದ್ರೆ ಮಾಡುತ್ತಿರಲಿಲ್ಲ. ಕುಳಿತುಕೊಂಡಿದ್ದಳು ಆದರೆ ಅವನು ಯೋಚಿಸಿದ ಹಾಗೆ ಸುಮ್ಮನೆ ಕುಳಿತುಕೊಂಡು

ವಿಚಾರಸಾಗರದಲ್ಲಿ ಮಾತ್ರ ಮುಳುಗಿರಲಿಲ್ಲ. ತಾನೊಬ್ಬಳೇ ಕುಳಿತುಕೊಂಡು ಕರಪತ್ರಗಳನ್ನು ತೆಗೆಯುವ ಕಾಯಕ ನಡೆಸಿದ್ದಳು.

ಅವಳ ಬಗೆಗೆ ಅಪಾರವಾದ ಮೆಚ್ಚುಗೆ ತುಂಬಿ ಬಂದು ವಿಶ್ವನಾಥನ ಹೃದಯ ಪುಲಕಿತವಾಯಿತು. ಮೆಲ್ಲನೆ ಕದವನ್ನು ದೂಡಿ ಒಳಕ್ಕೆ ಬಂದು, ಅವಳ ಹತ್ತಿರ ಕುಳಿತುಕೊಂಡು ಕಳವಳ ತುಂಬಿದ ಸ್ವರದಲ್ಲಿ ನುಡಿದ : "ಅಂತೂ ನೀ ಮಲಗಲೇ ಇಲ್ಲ, ಹೌದಲ್ಲೋ? ನನ್ನನ್ನು ಕಳಿಸಿಬಿಟ್ಟು ನೀನೊಬ್ಬಳೇ ಕೆಲಸ ಮಾಡುತ್ತಿದ್ದೀಯಾ? ನಿದ್ದೆ ಹತ್ತಲೇ ಇಲ್ಲೇನು?"

"ಸ್ವಲ್ಪ ಮಲಗಿದೆನಪ್ಪ. ಅಷ್ಟೊತ್ತಿಗೇ ಕೋಳಿ ಕೂಗಿತು. ಎಚ್ಚರಾಯ್ತು. ಇನ್ನೇನು ಮಲಗೋದು ಅಂತ ಎದ್ದುಬಿಟ್ಟು, ಇದೇ ಈಗ ಸುರುಮಾಡಿದೆ."

"ಸುಳ್ಳು. ಪೂರಾ ಸುಳ್ಳು. ಸ್ವಲ್ಪ ಕೂಡಾ ಮಲಗಿಲ್ಲ ನೀನು. ನಿನ್ನ ಮುಖ ನೋಡಿದರ ತಿಳಿಯೂದಿಲ್ಲವೇನು? ಕಣ್ಣು ಅಂತೂ ಪೂರಾ ಕೆಂಪ ಆಗಿ ಹೋಗಿದಾವ. ಇನ್ನು ಮಲಗಿಕೊ ಹೇಮಾ. ಹೀಗೆ ನಿದ್ದೆ ಇಲ್ಲದೆ ಕೆಲಸ ಮಾಡೋದು ನೆಟ್ಟಗಲ್ಲ...."

ಯಂತ್ರಕ್ಕೆ ಮಸಿ ಸವರುತ್ತ ಹೇಮಾ ನಸುನಗೆಯೊಂದಿಗೆ ಕೇಳಿದಳು : "ನಿನಗೆ ನಿದ್ದೆ ಬಂದಿತ್ತೊ ಇಲ್ಲವೋ?"

"ಇಲ್ಲ, ಹಾಳಾದ ನಿದ್ದೆ! ಕರೆದರೆ ಬರುವುದೇ ಅದು?"

"ಹಾಗಾದರೆ ನೀನೂ ಎಚ್ಚರವಾಗೇ ಇದ್ದೀ ಅನ್ನು...."

"ಇನ್ನೇನು ಮಾಡೂದು? ಹೊರಳಾಡಿ ಹೊರಳಾಡಿ ಮೈ ನೋಯಿಸ ಹತ್ತಿತು. ತಲೆ ಸಿಡಿಯುತೊಡಗಿತು. ಅದಕ್ಕೇ ಸ್ವಲ್ಪ ತಿರುಗಾಡಿ ಬರೋಣ ಅಂತ ಹೊರಬಿದ್ದೆ. ಇಲ್ಲಿ ಬೆಳಕು ನೋಡಿ ಬಂದೆ...." ಎಂದು ನುಡಿದು ಆತ ಮತ್ತೊಂದು ಸಲ ಹಣೆಯನ್ನು ಹಿಸುಕಿಕೊಂಡ.

ಕೆಲಸವನ್ನು ನಿಲ್ಲಿಸಿ ಹೇಮಾ ತನ್ನ ಬಲಗೈಯನ್ನು ಅವನ ಹಣೆಯ ಮೇಲಿರಿಸಿದಳು. ಜ್ವರವೇರಿದವರಂತೆ ಅದು ಕಾಯ್ದು ಹೋಗಿತ್ತು. ಅವನಿಗೆ ಜ್ವರವೇನೂ ಬಂದಿರಲಾರದಷ್ಟೆ? ಎಂದು ಆಕೆಗೆ ಭಯವಾಗದಿರಲಿಲ್ಲ. "ಯಾಕಪ್ಪ, ಬಹಳ ಕಾದಿದೆ ಹಣೆ? ಜ್ವರ ಗಿರ ಬಂದಿತೇನು? ಹೀಗಲ್ಲಾ ಹೊರಗ ಥಂಡಿಯೊಳಗ ತಿರುಗಬ್ಯಾಡ. ಮಲಕ್ಕೊ. ನಿನಗ ವಿಶ್ರಾಂತಿ ಬೇಕು" ಎಂದಳು.

ವಿಶ್ವನಾಥ ನಕ್ಕು ನುಡಿದ: "ಒಳ್ಳೆ ಜಾಣೆ ನೀನು ಮಾತಿನೊಳಗ,

ಹೇಮಾ. ವಿಶ್ರಾಂತಿ ಬೇಕಾಗಿರೂದು ನನಗಲ್ಲ—ನಿನಗೆ. ಜ್ವರ ಏನು ಬರತದ ನನಗೆ? ಸುಮ್ಮನೆ ತಲೆ ಕಾಯುತ್ತಿದ್ದೀತು, ಅಷ್ಟೆ. ನಿದ್ದೆಯಿಲ್ಲದ್ದಕ್ಕ ಹಾಂಗಾಗುತದ."

"ಆದರೂ ಅದನ್ನ ಹಾಗೆ ಅಲಕ್ಷ್ಯ ಮಾಡಬಾರದಪ್ಪ. ವಿಶ್ರಾಂತಿ ತಗೋಬೇಕು."

"ನಿದ್ದೀನಽ ಬರದಿದ್ದರ ವಿಶ್ರಾಂತಿ ಎಲ್ಲಿಂದ ಬಂದೀತು?"

"ನಿದ್ದೆ ಯಾಕ ಬರಲೊಲ್ಲದು?" ಎಂದು ಹುಬ್ಬುಗಳನ್ನೇರಿಸಿ ಕೇಳಿದಳು.

"ಯಾಕೋ ಏನೋ! ಅಂತೂ ಬರಲೊಲ್ಲದು. ಈ ಕರಪತ್ರ ಹೊರಡಿಸುವ ಕೆಲಸವನ್ನ ನೀನೊಬ್ಬಳೇ ಮಾಡಬಹುದು. ನಾನೂ ಯಾಕೆ ಇಲ್ಲಿ ಕೂತಿರ ಬೇಕು? ಒಬ್ಬರು ಮಾಡುವ ಕೆಲಸಕ್ಕ ಇಬ್ಬರ್ಯಾತಕ್ಕೆ? ಇಲ್ಲಿಂದ ಹೊರಟು ಬಿಟ್ಟು ಗುಂಪಿನ ಸಂಗಡ ಕೂಡಿಕೊಂಡು ಕೆಲಸ ಮಾಡಬೇಕಂತ ಅನ್ನಿಸುತದ ಹೇಮಾ!" ಎಂದು ಹೇಳಿ ಆತ ಹಾಸಿಗೆಯ ಮೇಲೊರಗಿಕೊಂಡ.

ಹೇಮಾ ಅವನ ಬಳಿ ಬಂದು ಮಮತೆಯಿಂದ ಅವನ ಹಣೆಯ ಮೇಲೆ ಕೈಯನ್ನಾಡಿಸುತ್ತ—"ಯಾಕಪ್ಪಾ? ನನ್ನ ಸಂಗಡ ಕೆಲಸಮಾಡೂದಕ್ಕ ಬೇಸರ ಬಂತೇನು ನಿನಗ?" ಎಂದಳು.

ತನ್ನ ಹಣೆಯ ಮೇಲೆ ಓಡಾಡುತ್ತಿದ್ದ ಅವಳ ಕೈಯನ್ನು ಹಿಡಿದುಕೊಂಡು ವಿಶ್ವನಾಥನೆಂದ: "ಇದೇನು ಮಾತೇ, ಹೇಮಾ? ನಿನ್ನ ಸಹವಾಸ ನನಗ ಬೇಸರವಾದೀತೇ?"

"ಮತ್ತ್ಯಾಕೆ ಹೊರಟುಹೋಗುವ ಮಾತು ಆಡುತ್ತೀ?"

"ಹೀಗೆ ಒಂದು ಕಡೆ ಕೂತು ಕೆಲಸ ಮಾಡೂದು ನನ್ನ ಸ್ವಭಾವಕ್ಕಽ ವಿರುದ್ಧ ಅಂತ ಕಾಣಿಸುತದ. ಅದಕ್ಕಽ ಬೇಸರಾಗುತ್ತೈತೋ ಏನೋ...."

"ನಿದ್ದೆ ಯಾಕೆ ಬರೋದಿಲ್ಲ? ಕಾಲೇಜಿನ ನೆನಪಾಗುತ್ತೈತೋ ಏನು ಮತ್ತೆ?"

"ಥೂ! ಆ ಹಾಳು ಕಾಲೇಜು ಯಾರಿಗೆ ಬೇಕಾಗಿದೆ ಈಗ!"

"ಮತ್ತೇನಪ್ಪಾ ವಿಚಾರ ಹಾಗಾದರ? ನಿಮ್ಮ ತಂದೆಯ ನೆನಪು ಬರುತ್ತೈತೇನು?"

"ಇಲ್ಲ. ಏನೂ ಇಲ್ಲ ಹೇಮಾ. ಏನೋ ಹೀಗೆ ಬೇಸರು ಬಂದಿತ್ತು, ಅಷ್ಟೆ....ಹೋಗಲಿ ಬಿಡು. ಈಗ ಬೆಳಗಾಗ್ತಾ ಬಂತು. ಕೆಲಸ ಸುರು ಮಾಡೋಣ ಇಬ್ಬರೂ...." ಎಂದು ನುಡಿದು ಆತ ಏಳತೊಡಗಿದ. ಆದರಾಕೆ ಅವನನ್ನು ಏಳಗೊಡಲಿಲ್ಲ. "ನೀನೀಗ ಏಳಬೇಡ. ಮಲಗಿಕೋ. ನಾ ಹೇಳುವ ಮಾತು ಕೇಳು. ನಿನಗೆ ನಿದ್ದೆ ಬೇಕು. ಇಲ್ಲಾಂದರೆ ಜಡ್ಡು ಬಂದೀತು...." ಎಂದಳು.

"ನಿದ್ದೀನs ಬರದಿದ್ದರ ಏನ್ಮಾಡಲಿ, ಹೇಮಾ?"

"ಮತ್ತೇನು ಜೋಗುಳ ಹಾಡಬೇಕೇನೋ ನಿನಗ ನಿದ್ದೆ ಬರಬೇಕಾದರ?" ಎಂದು ನಗುತ್ತ ನುಡಿದು ಹೇಮಾ ಮೆಲುದನಿಯಲ್ಲಿ ರಾಗ ತೆಗೆದಳು: "ಜೋ ಜೋ, ಜ್ಯೋತಿಯ ಕುವರಾ, ಜೋ ಜೋ...."

ಅವಳ ಅಕ್ಕರೆಯ ವರ್ತನೆ, ಮಮತೆ ಬೆರೆತ ಮಾತು, ಮಾಧುರ್ಯ ಬೆರೆತ ಹಾಡಿನ ಪಲ್ಲವಿ ಅವನ ಬೇಸರವನ್ನೆಲ್ಲ ದೂರಗೊಳಿಸಿತು. ಪ್ರೀತಿಯಿಂದ ಅವಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು ಭಾವನಾವೇಶದಿಂದ ಕಂಪಿಸುವ ದನಿಯಲ್ಲಿ ಆತನೆಂದ:

"ಹೇಮಾ...."

"ಏನೂ ಮಗೂ!" ಎಂದಳಾಗ ತುಂಟತನದಿಂದ ನಗುತ್ತ.

"ನಿನ್ನಲ್ಲಿ ಇಂಥಾ ಅದ್ಭುತ ಅಕ್ಕರತೆ ಎಲ್ಲಿಂದ ಬಂತೇ, ಹೇಮಾ? ಹಿಂದಿನ ಜನ್ಮದಲ್ಲಿ ನೀನು ನನಗೇನಾಗಿದ್ದೆಯೊ!"

ಆತ ಭಾವನಾವಶನಾಗಿದ್ದುದನ್ನು ಆಕೆ ಗುರುತಿಸಿಕೊಂಡಿದ್ದಳೊ ಏನೊ. ಅವನನ್ನು ಸಂತವಿಸುವ ಮೆಲುದನಿಯಲ್ಲಿ—"ಹಿಂದಿನ ಜನ್ಮದ ಮಾತ್ಯಾಕೆ ವಿಶ್ವನಾಥ? ಈಗಲಾದರೂ ಏನು ಕಡಿಮೆಯಾಗಿದೆ? ಅಣ್ಣ ತಂಗಿ ಇದ್ದಂತೆ ಇದ್ದೇವಲ್ಲ ಇಬ್ಬರೂ...." ಎಂದಳು. "ಮಲಗಿಕೋ ಮಗು, ಮಧ್ಯಾಹ್ನ ಎಬ್ಬಿಸುತ್ತೇನೆ ಊಟಕ್ಕೆ. ಜೋ ಜೋ ಜೋ...." ಎಂದು ರಾಗ ತೆಗೆಯುತ್ತ ಅವನ ಹಣೆಯನ್ನು ಮೆಲ್ಲನೆ ತಟ್ಟತೊಡಗಿದಳು. ವಿಶ್ವನಾಥನ ಎದೆಯಲ್ಲಿನ ಹೊಯ್ದಾಟವೆಲ್ಲ ನಿಂತುಹೋಗಿ ಅಪೂರ್ವ ಶಾಂತತೆ ಅವನ ಚಿತ್ತವನ್ನಾವರಿಸಿದಂತಾಯಿತು. ತನ್ನ ಸ್ವಂತ ತಾಯಿಯೆ ತನ್ನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಜೋಗುಳ ಹಾಡುತ್ತಿರುವಳೇನೋ ಎಂದು ಭಾಸವಾಯಿತು.

ಶಾಂತಿದೇವಿಯ ಹಿಂದೆ ಹಿಂದೆಯೆ ನಿದ್ರಾದೇವಿಯೂ ಬಂದಿರಬೇಕು; ತನಗರಿಯದಂತೆಯೆ ಆತ ಅವಳ ತೋಳಸೆರೆಯಲ್ಲಿ ಸಿಲುಕಿಕೊಂಡು ಕಣ್ಣು ಮುಚ್ಚಿದ.

೨೧

ಮುಚ್ಚಿದ ಕಣ್ಣುಗಳನ್ನು ಶೇಖರಪ್ಪ ಮೆಲ್ಲನೆ ತೆರೆದು ಮಾಸ್ತರರ ಕಡೆಗೆ ಹೊರಳಿದ.

"ಇವೊತ್ತು ಬೆಳಗಾವಿಗೆ ಗವರ್ನರ್ ಬರುತಾನಂತೆ ಶೇಕ್ರಣ್ಣ...." ಎಂದರು ಮಾಸ್ತರರು.

"ಇಂಥಾ ಪರಿಸ್ಥಿತಿಯೊಳಗ ಯಾತಕ್ಕ ಬರ್ತಾನವ ಅಲ್ಲಿಗೆ?"

"ಅವಗ ಸತ್ಕಾರಕೂಟ ಇಟ್ಟಾರಂತೆ ಬೆಳಗಾವಿಯೊಳಗ!"

"ಗಾಂಧಿ ನೆಹ್ರೂ ಎಲ್ಲರೂ ಜೇಲಿನೊಳಗ ಕೊಳೀತಿರುವಾಗ ಈ ಗವರ್ನರನ್ನ ಕರೆಸಿ ಸತ್ಕಾರ ಮಾಡುವ ಈ ಜನ ಆದರೂ ಯಾರು?"

"ಯಾರೋ ಗೊತ್ತಿಲ್ಲ. ಅಂತೂ ಪಾರ್ಟಿ ಐತಂತೆ ಇವೊತ್ತು!"

ಎದುರಿಗಿನ ಗೋಡೆಗೊರಗಿ ಕುಳಿತು ಬೀಡಿಯ ಹೊಗೆಯನ್ನೆಳೆಯುತ್ತಿದ್ದ ಬಸವಣ್ಣೆಪ್ಪ ಬೀಡಿಯ ಬೂದಿಯನ್ನು ಕೊಡಹುತ್ತಾ ಮಾತನಾಡಿದ. "ಆ ಕೆಂಪು ಮಾರೀ ಸಾಹೇಬಗ ಚಲೋ ಪಾರ್ಟಿ ಕೊಡೋಣ ನಾವು ಇವೊತ್ತು!"

ಶೇಖರನ ಗುಂಪಿಗೆ ಹೊಸದಾಗಿ ಸೇರಿದ ಹುರುಪಿನ ಯುವಕರಲ್ಲಿ ಬಸವಣ್ಣೆಪ್ಪನೂ ಒಬ್ಬ. ಆತನಿಗೆ ಸುಮಾರು ಮೂವತ್ತು ವರ್ಷ ವಯಸ್ಸಿರ ಬಹುದು. ಹಳ್ಳಿಯೂರಿನಲ್ಲಿ ಜೇಸಾಯ ಮಾಡುತ್ತ ಜೀವನ ಸಾಗಿಸುತ್ತಿದ್ದವ ಚಳವಳಿಗಳಲ್ಲಿಯೂ ಭಾಗವಹಿಸುತ್ತಿದ್ದು ಮೂರು ನಾಲ್ಕು ಸಲ ಸೆರೆಮನೆಯನ್ನೂ ಕಂಡುಬಂದಿದ್ದ. ಕಾಂಗ್ರೆಸ್ಸಿನ ಶಿಸ್ತಿಗೊಳಪಟ್ಟು ಸತ್ಯಾಗ್ರಹಮಾಡಿ ಕಾರಾಗೃಹಕ್ಕೆ ಹೋಗುತ್ತಿದ್ದನಾದರೂ ಅವನಿಗೆ ಆ ವಿಷಯದಲ್ಲಿ ಅಂಥ ಆಸಕ್ತಿಯೇನೂ ಇರಲಿಲ್ಲ. ಬರೀ ಸೆರೆಮನೆಗೆ ಹೋಗುವುದರಿಂದ ಯಾವ ಮಹಾ ಕಾರ್ಯವನ್ನು ಸಾಧಿಸಿ ದಂತಾಯಿತೆಂದು ಆತ ವಾದಿಸುತ್ತಿದ್ದ. ಸರಕಾರದ ಯಂತ್ರವನ್ನು ಮುರಿದು ಹಾಕದೆ ಕೇವಲ ಜೈಲುಗಳನ್ನು ತುಂಬುವುದರಿಂದ ಸ್ವಾತಂತ್ರ್ಯ ಬರುವುದಸಾಧ್ಯ ವೆಂದು ಅವನ ಭಾವನೆಯಾಗಿದ್ದಿತು. ಅಂತೆಯೆ, 'ಚಲೇ ಜಾವ್' ಚಳವಳಿಯ

ಕಹಳೆ ಮೊಳಗುತ್ತಲೂ ಆತ ಅತ್ಯುತ್ಸಾಹದಿಂದ ಕದನದ ರಂಗಕ್ಕೆ ಧುಮುಕಿದ್ದ. ತಮ್ಮೂರಿನ ಹಾಗೂ ಸುತ್ತುಮುತ್ತಲಿನ ಹಳ್ಳಿಯ ಇಪ್ಪತ್ತು ಇಪ್ಪತ್ತೈದು ಜನ ಬಂಟರನ್ನು ಕೂಡಿಸಿಕೊಂಡು ಸುತ್ತುಮುತ್ತಲಿನ ಪ್ರದೇಶದಲ್ಲಿ ಸರಕಾರದ ವಿರುದ್ಧ ಬಂಡು ಹೂಡಿದ್ದ. ಶೇಖರನಿಗೂ ಅವನಿಗೂ ಮೊದಲಿನಿಂದಲೂ ಗೆಳೆತನವಿದ್ದಿತು. ಕಲ್ಲಾಪುರದಿಂದ ಶೇಖರನ ಗುಂಪಿನವರು ತಮ್ಮ ಊರಿಗೆ ಬಂದಾಗ ಎಲ್ಲರೂ ಕೂಡಿ ಪ್ರಬಲವಾದ ಸೇನೆಯೊಂದನ್ನು ಕಟ್ಟಿ ಸುಸಂಘಟಿತವಾದ ರೀತಿಯಲ್ಲಿ ಕೆಲಸ ಮಾಡಬೇಕೆಂದು ನಿರ್ಧರಿಸಿದ್ದ. ಅದರಂತೆಯೆ ಈಗ ಬಸವಣ್ಣೆಪ್ಪನ ಹಳ್ಳಿಯೆ ಈ ಸಂಯುಕ್ತ ಪಡೆಯ ಕೇಂದ್ರ ಸ್ಥಳವಾಗಿದ್ದಿತು. ಅದರಿಂದ ಕೆಲವು ಮೈಲುಗಳ ದೂರದಲ್ಲಿ ಕರಪತ್ರಗಳ ಕಚೇರಿಗಾಗಿ ಏರ್ಪಡಿಸಲ್ಪಟ್ಟ ಲಂಬಾಣಿಗರ ವಸತಿಯಿತ್ತು. ಕಟ್ಟಿಗೆ ಹೊತ್ತು ತಂದು ಮಾರುತ್ತ ತಿರುಗುವ ಲಂಬಾಣಿಗರ ಮೂಲಕವಾಗಿ ಕರಪತ್ರಗಳು ಊರಿಂದ ಊರಿಗೆ ಹಂಚಲ್ಪಡುವ ವ್ಯವಸ್ಥೆಯಾಗಿದ್ದಿತು.

ಹಳ್ಳಿಯಿಂದ ತುಸು ದೂರದಲ್ಲಿದ್ದ ತೋಟವೊಂದರಲ್ಲಿ ದೊಡ್ಡದೊಂದು ಗುಡಿಸಲಿನಲ್ಲಿ ಗುಂಪಿನವರ ಬಿಡಾರಕ್ಕೇರ್ಪಾಟಾಗಿದ್ದಿತು. ಗುಂಪಿನ ಆಯುಧಗಳೂ ಇನ್ನಿತರ ಸಾಮುಗ್ರಿಗಳೂ ಅಲ್ಲಿಯೇ ಇರಿಸಲ್ಪಟ್ಟಿದ್ದುವು. ಅವುಗಳನ್ನು ಕಾಯುವುದಕ್ಕಾಗಿ ಪಹರೆಯವರನ್ನೂ ನಿಯಮಿಸಲಾಗಿದ್ದಿತು.

ಬೆಳಗಿನ ಹತ್ತು ಗಂಟೆಯಾಗುತ್ತ ಬಂದಿತ್ತು. ಮುನ್ನಾದಿನದ ರಾತ್ರಿ ಒಂದು ಕೆಲಸ ತೀರಿಸಿ ಬಂದಿದ್ದರಾದುದರಿಂದ ಗುಂಪಿನವರಾರಿಗೂ ನಿದ್ರೆಯಿರಲಿಲ್ಲ. ಬೆಳಗಿನ ಜಾವದಲ್ಲಿ ಬಂದು ಮಲಗಿಕೊಂಡಿದ್ದ ಶೇಖರನಿಗೆ ಆಗತಾನೆ ಎಚ್ಚರವಾಗಿದ್ದಿತು. ಮಿಕ್ಕವರೆಲ್ಲ ಆಗಲೆ ಎದ್ದು ತೋಟದಲ್ಲಿದ್ದ ಮೋಟೆಯ ಬಾವಿಯಲ್ಲಿ ಈಜಾಡುತ್ತಿದ್ದರು. ಬಸವಣ್ಣೆಪ್ಪ ಮತ್ತು ಶಂಕರಪ್ಪ ಮಾಸ್ತರರಿಬ್ಬರೂ ಗುಡಿಸಲಿನಲ್ಲಿ ಕುಳಿತುಕೊಂಡು ಅಂದಿನ ಕಾರ್ಯಕ್ರಮದ ಬಗ್ಗೆ ಚರ್ಚೆ ನಡಸಿದ್ದರು.

“ಮೂರು ಗಂಟೆಗೆ ಸರಿಯಾಗಿ ನಾವಲ್ಲಿ ಇರಬೇಕು ಬಸವಣ್ಣೆಪ್ಪ. ಸ್ವಲ್ಪನೂ ಹೆಚ್ಚು ಕಡಮೆ ಆಗಬಾರದು. ಎರಡು ಗಂಟೆಗೆಲ್ಲಾ ಇಲ್ಲಿಂದ ಎಲ್ಲರೂ ಹೊರಟುಬಿಡಬೇಕು. ಮೂರೂವರೆಗೆ ಮಿಲಿಟರಿ ಬಸ್ಸು ಬರುತ್ತೈತಿ ಅಲ್ಲಿಗೆ ಅಷ್ಟರೊಳಗಾಗಿ ನಾವು ಎರಡೂವರೆ ಮೈಲು ದೂರ ಬಂದಿರಬೇಕು,” ಎಂದ ಶೇಖರ.

"ಎಲ್ಲಾ ವ್ಯವಸ್ಥಾ ಮಾಡಿದ್ದೀನಿ ಶೇಖರಪ್ಪ. ಏನೂ ಚಿಂತೀ ಮಾಡ ಬ್ಯಾಡ."

"ನಮ್ಮ ಕಾರ್ಯಕ್ರಮದೊಳಗೆಲ್ಲಾ ಇವತ್ತಿಂದು ಬಹಳ ದೊಡ್ಡ ಕೆಲಸ. ಬಹಳ ಗಂಡಾಂತರದ ಕೆಲಸ. ನಮ್ಮವರ್ಯಾರಿಗೂ ಒಂದು ಕೂದಲೂ ಸಹ ಕೊಂಕದ ಹಾಂಗ ಅದನ್ನ ನಾವು ತೀರಿಸಿಕೊಳ್ಳಬೇಕು. ನಾವು ಲೆಕ್ಕ ಹಾಕಿದ ಪ್ರಕಾರ ಝಟ್‌ಪಟ್ ಅಂತ ಮುಗಿದುಹೋಗಬೇಕು. ಹಿಂಸೆ ಉಪಯೋಗಿಸುವಂಥ ಪ್ರಸಂಗವೇ ಬರದ ಹಾಂಗ ಕೆಲಸ ನಡೀಬೇಕು. ಇದs ಬಹಳ ಕಷ್ಟ...." ಎಂದ ಶೇಖರಪ್ಪ.

"ಹೌದು. ಪೋಲೀಸರಿಗೂ ಕೂಡ ಏನೂ ಆಗದ ಹಾಂಗ ಕೆಲಸ ಮುಗಿಸ ಬೇಕು ನಾವು. ನೀ ಹೇಳುವ ಹಾಂಗ ಬಹಳ ಕಷ್ಟದ ಕೆಲಸ ಇದು. ಅವರ ಕೈಯಾಗ ಬಂದೂಕು ಇರ್ತಾವೆ, ನಮ್ಮ ಕೈಯೊಳಗ ಪಿಸ್ತೂಲು ಇರ್ತಾವೆ. ಅವರು ಬಂದೂಕು ಉಪಯೋಗ ಮಾಡಿದರೂ ನಾವು ಪಿಸ್ತೂಲು ಉಪಯೋಗ ಮಾಡುವ ಹಾಂಗಿಲ್ಲ. ಹಾಂಗs ಬೆದರಿಸಿ ಕೆಲಸ ಸಾಧಿಸಬೇಕು....ಅದು ಬಹಳ ಕಷ್ಟದ ಕೆಲಸ...." ಎಂದರು ಮಾಸ್ತರರು.

"ಕಷ್ಟದ ಕೆಲಸವನ್ನು ಮಾಡಿ ತೋರಿಸೂದರೊಳಗ ಗಂಡಸುತನ ಐತಿ ಮಾಸ್ತರರೇ. ಎಂಥಾ ಪ್ರಸಂಗ ಬಂದರೂ ನಾವು ಅಹಿಂಸೆಯನ್ನು ಬಿಡಬಾರದು. ನಮ್ಮ ಮುಖಂಡರಾದ ಮಹಾತ್ಮರ ತತ್ವಕ್ಕ ವಿರುದ್ಧವಾಗಿ ಹೋಗಬಾರದು. ಚಳವಳಿಯೊಳಗ ನಾವು ಹಿಂಸೆಯನ್ನುಪಯೋಗಿಸಿದೆವು ಅಂತ ಅವರಿಗೆ ಗೊತ್ತಾದರ ಎಷ್ಟು ನೊಂದುಕೋಬಹುದು ಅವರು! ಹಿಂದೆ ಚೌರಿಚೌರಾದೊಳಗಾದ ಹಿಂಸೆಯಿಂದ ನೊಂದು ಚಳವಳಿಯನ್ನೇ ನಿಲ್ಲಿಸಿಬಿಟ್ಟಿದ್ದರು. ಈಗಲೂ ಹಾಂಗs ಆಗಬಾರದು. ಅಹಿಂಸಾತ್ಮಕವಾಗೇ ನಡೀಬೇಕು ಈ ಚಳವಳಿ. ನಮ್ಮ ಜಿಲ್ಲೆಯೊಳಗಂತೂ ಎಲ್ಲಿಯೂ ಹಿಂಸೆ ನಡೀಬಾರದು."

"ಆದರೆ ಈಗ ಮಾಡ್ತಾ ಇರುವ ಕೆಲಸಗಳೂ ಒಂದು ರೀತಿಯೊಳಗ ಹಿಂಸಾತ್ಮಕ ಕೆಲಸಗಳೇ ಅಂತ ನನಗ ಆಗಾಗ ಸಂಶಯ ಬರುತೈತಿ" ಎಂದರು ಮಾಸ್ತರರು.

"ಅದರಾಗೇನೈತಿ ಹಿಂಸಾ?" ಎಂದ ಬಸವಣ್ಣೆಪ್ಪ.

“ಸ್ಟೇಶನ್ ಸುಡೋದು, ಪೂಲು ಒಡೆಯೋದು, ಟಪಾಲು ಲೂಟಿ ಮಾಡೋದು, ಬಾಂಬು ತಯಾರಿಸಿ ಉಪಯೋಗಿಸೋದು ಇವೆಲ್ಲಾ ಹಿಂಸಾ ಕೃತ್ಯಗಳೇ ಅಲ್ಲೇನು? ಪಿಸ್ತೂಲು ನಾವು ಉಪಯೋಗಿಸದಿದ್ದರೂ ಅದನ್ನ ಕೈಯೊಳಗ ಹಿಡಿದು ಹೆದರಿಸಿ ನಮ್ಮ ಕೆಲಸ ಸಾಧಿಸುತೇವಲ್ಲ. ಅದೂ ಒಂದು ರೀತಿಯಿಂದ ಹಿಂಸಾ ಅಲ್ಲೇನು?”

“ಅಲ್ಲ. ಸರಕಾರದ ಯಂತ್ರವನ್ನು ಮುರಿದುಹಾಕೋದೇ ಈ ಚಳವಳಿಯ ಉದ್ದೇಶ ಆಗಿರುವಾಗ ನಾವು ಸರಕಾರೀ ಆಸ್ತಿಗಳನ್ನ ನಾಶಮಾಡಬೇಕಾದ್ದು ನಮ್ಮ ಕೆಲಸ. ಅದು ಹಿಂಸಾ ಅಲ್ಲ. ಬಂದೂಕು, ಗುಂಡು, ಪಿಸ್ತೂಲುಗಳಿಂದ ತಯಾರಾಗಿರುವ ಪೋಲೀಸರ ಎದುರಿಗೆ ನಿಂತು ಯುದ್ಧ ಮಾಡುವಾಗ ನಮ್ಮ ಕೆಲಸ ಸಾಧಿಸಬೇಕು ಅಂತಿದ್ದರೆ ಆಯುಧಗಳನ್ನು ಹಿಡಿಯಲೇ ಬೇಕಾಗುತೈತಿ. ಅವರನ್ನ ಹೆದರಿಸಿದರ ಹಿಂಸಾ ಹ್ಯಾಂಗಾಯ್ತು? ನಮ್ಮ ಕೆಲಸ ಸಾಧಿಸುವುದ ಕ್ಕಾಗಿ ಆಯುಧ ಹಿಡಿದರ ತಪ್ಪೇನೂ ಅಲ್ಲ. ಇದು ಸ್ವಾತಂತ್ರ್ಯದ ಯುದ್ಧ ಅನ್ನೋದನ್ನ ನೆನಪಿನೊಳಗಿಟ್ಟುಕೊಂಡರ ಎಲ್ಲಾ ಸರಿಹೋಗುತೈತಿ.”

“ಹೋಗಲಿ ಬಿಡು ಶೇಕ್ರಣ್ಣ. ಈ ನಾಜೂಕು ವಿಷಯ ತಕ್ಕೊಂಡು ನಾವೇನು ಮಾಡೋಣ? ಮಾಡಬೇಕು – ಇಲ್ಲಾ – ಮಡಿಯಬೇಕು ಅಂತ ಹೇಳಿದಾನೆ ಆ ಮಹಾತ್ಮ. ಮಾಡುವುದು ನಮ್ಮ ಕೆಲಸ. ಇಲ್ಲದ ಉಸಾಬರಿ ಯಾಕಂತೆ? ಹಿಂಸಾ ಅಹಿಂಸಾ ಅಂತ ನಾವು ವಾದ ಹಾಕ್ತಾ ಕೂತುಬಿಟ್ಟರ ಕೆಲಸ ಎಲ್ಲೋ ಉಳಿದು, ನಾವು ಹಾಂಗ ಇನ್ನೂ ನೂರಾರು ವರ್ಷ ಮುಂಗ್ಯಾ ನ್ಹಾಂಗ ಕೂತುಕೋಬೇಕಾದೀತು ಆ ಕೆಂಪು ಮಾರಿಯವರ ದಾಸರಾಗಿ! ಏಳು ಜಳಕಾ ಮಾಡೇಳು,” ಎಂದು ಬಸವಣ್ಣೆಪ್ಪ ಎದ್ದುಬಿಟ್ಟ.

* * * *

ಜನವರಿ ತಿಂಗಳಿನಲ್ಲಿ ಒಂದು ದಿನ ಅದು. ಹಳ್ಳಿಗರಿಂದ ಸರಕಾರ ಕಂದಾಯ ವಸೂಲು ಮಾಡುವ ಕಾಲ. ಸುತ್ತುಮುತ್ತಲಿನ ಇಪ್ಪತ್ತೇಳು ಹಳ್ಳಿಗರ ಕಂದಾಯ ವನ್ನೆಲ್ಲ ಆ ಕೇಂದ್ರದ ಮೂಲಕ ವಸೂಲು ಮಾಡಲಾಗುತ್ತಿದ್ದಿತು. ಹಳ್ಳಿಗಳ ಗೌಡ ಕುಲಕರ್ಣಿಯವರೆಲ್ಲ ಅಲ್ಲಿ ದಿನವೂ ಒಟ್ಟುಗೂಡುವರು. ಬೇರೆ ಬೇರೆ ರೈತರು ಬಂದು ಅಲ್ಲಿ ತಮ್ಮ ಕಂದಾಯವನ್ನೊಪ್ಪಿಸಿ ಹೋಗುವರು. ಬಸವಣ್ಣೆಪ್ಪನ ಹಳ್ಳಿಯಿಂದ ನಾಲ್ಕು ಮೈಲು ದೂರದಲ್ಲಿದ್ದ ಆ ಹಳ್ಳಿಯ ಚಾವಡಿಗೆ ದೊಡ್ಡ

ದೊಂದು ಕಚೇರಿಯ ಸ್ವರೂಪ ಬಂದಿದ್ದಿತು. ಆರು ಜನ ಬಂದೂಕುಧಾರಿ ಪೋಲೀಸರು ಯಾವಾಗಲೂ ಅಲ್ಲಿ ಕಾವಲು ನಡಸುತ್ತಿದ್ದರು. ದಿನವೂ ವಸೂಲಾದ ಹಣವನ್ನೆಲ್ಲ ತೆಗೆದುಕೊಂಡು ಬೆಳಗಾವಿಗೆ ಸಾಗಿಸಲು ಮಿಲಿಟರಿ ಬಸ್ಸೊಂದು ಬರುತ್ತಿತ್ತು–ಮಧ್ಯಾಹ್ನ ಮೂರೂವರೆ ಗಂಟೆಗೆ.

ಆ ಕಂದಾಯದ ಕೇಂದ್ರವನ್ನು ಮುತ್ತಿ ಅಲ್ಲಿನ ಹಣವನ್ನು ಅಪಹರಿಸ ಬೇಕೆಂದು ಶೇಖರನ ಗುಂಪು ಯೋಚನೆ ಹೂಡಿತ್ತು. ಹತ್ತು ಹದಿನೈದು ದಿನಗಳಿಗೆ ಮೊದಲೇ ಆ ಬಗೆಗೆ ಅವಶ್ಯವಿರುವ ವಿವರಗಳೆಲ್ಲವನ್ನು ಸಂಗ್ರಹಿಸಲಾಗಿದ್ದಿತು. ಅಲ್ಲಿ ಕಾವಲು ನಡಸುವ ಪೋಲೀಸರು, ಒಳಗಡೆ ವಿರಮಿಸುವ ಪೋಲೀಸರು, ಚಾವಡಿಯಲ್ಲಿ ಗೌಡ ಕುಲಕರ್ಣಿಯರು ಕುಳಿತುಕೊಳ್ಳುತ್ತಿದ್ದ ಪದ್ಧತಿ, ಹಣ ಒಯ್ಯಲು ಮೋಟಾರು ಬರುವ ಸಮಯ, ಹೊರಡುವ ಸಮಯ, ಅದರಲ್ಲಿ ಕಾವಲಿಗಿರುವ ಸೈನಿಕರ ಸಂಖ್ಯೆ ಮುಂತಾದ ವಿವರಗಳನ್ನೆಲ್ಲ ತಿಳಿದುಕೊಳ್ಳಲಾಗಿ ದ್ದಿತು. ಚಳವಳಿಗೆ ಅನುಕೂಲವಾಗಿದ್ದ ಕೆಲವರು ಗೌಡ ಕುಲಕರ್ಣಿಯರನ್ನು ಉಪಾಯವಾಗಿ ಒಲಿಸಿಕೊಂಡು ದಾಳಿ ನಡೆದಾಗ ಗಲಭೆ ಮಾಡದೆ ಸುಮ್ಮನಿರಲು ಸೂಚಿಸಲಾಗಿದ್ದಿತು. ಕಣ್ಣು ಮುಚ್ಚಿ ಕಣ್ಣು ತೆರೆಯುವುದರೊಳಗಾಗಿ ಎಲ್ಲವೂ ನಡೆದು ಹೋಗಬೇಕಾಗಿದ್ದಿತು. ಯೋಚನೆಯಲ್ಲಿ ಕೊಂಚವಾದರೂ ವ್ಯತ್ಯಾಸ ವಾದರೆ ಘಾತವಾಗುವ ಸಂಭವವಿದ್ದಿತು. ಶೇಖರನಿಗೂ ಆ ಬಗೆಗೆ ಆಶಂಕೆ ಯಿರದಿರಲಿಲ್ಲ.

ಗೊತ್ತುಮಾಡಿದ ಹೊತ್ತಿಗೆ ಸರಿಯಾಗಿ–ಎಂದರೆ ಮಧ್ಯಾಹ್ನ ಮೂರು ಗಂಟೆಗೆ ಶೇಖರನ ಗುಂಪಿನ ಹನ್ನೆರಡು ಜನ ಸೈನಿಕರು ಹಳ್ಳಿಯ ರೈತರಂಥ ವೇಷ ದಲ್ಲಿಯೆ ಕೇಂದ್ರದ ಹತ್ತಿರ ಬಂದರು. ಮೋಟಾರು ಬರುವ ಸಮಯ ಸಮಿಾಪಿಸಿ ದ್ದಿತಾದುದರಿಂದ ಅಂದು ವಸೂಲಾದ ಕಂದಾಯದ ಹಣವನ್ನೆಲ್ಲ ಒಟ್ಟುಗೂಡಿಸಿ ಲೆಕ್ಕಮಾಡುವ ಕೆಲಸ ನಡೆದಿದ್ದಿತು. ಆಗಾಗ ಒಬ್ಬಿಬ್ಬರು ಹಳ್ಳಿಗರು ಚಾವಡಿ ಯೊಳಕ್ಕೆ ಹೋಗಿ ತಮ್ಮ ಕಂದಾಯ ಸಲ್ಲಿಸಿ ಬರುವುದೂ ನಡೆದಿದ್ದಿತು.

ಚಾವಡಿಯ ಕಟ್ಟೆಯ ಮೇಲೆ ಇಬ್ಬರು ಪೋಲೀಸರು ಬಂದೂಕುಗಳನ್ನು ಹಿಡಿದು ನಿಂತುಕೊಂಡಿದ್ದರು. ಇನ್ನುಳಿದ ನಾಲ್ವರು ತಮ್ಮ ಬಂದೂಕುಗಳನ್ನು ಕೂಡಿಸಿ ಇಟ್ಟು ಗೋಡೆಗೊರಗಿ ವಿರಮಿಸುತ್ತಿದ್ದರು. ಉದ್ದವಾದ ಚಾವಡಿಯ

ಗೋಡೆಗುಂಟೆ ಗೌಡ ಕುಲಕರ್ಣಿಯರು ಕುಳಿತು ಹಣ ವಸೂಲು ಮಾಡುವ ಕೆಲಸ ಸಾಗಿಸಿದ್ದರು.

ಮೊದಲೇ ಗೊತ್ತಾದ ಮೇರೆಗೆ ಶೇಖರಪ್ಪ ಮತ್ತು ಬಸವಣ್ಣೆಪ್ಪ ಇಬ್ಬರನ್ನುಳಿದು ಮಿಕ್ಕವರೆಲ್ಲ ಒಬ್ಬೊಬ್ಬರಾಗಿ ಚಾವಡಿಯನ್ನು ಸೇರಿದರು. ಅದುವರೆಗೂ ದೂರ ನಿಂತುಕೊಂಡಿದ್ದ ಶೇಖರ ಬಸವಣ್ಣೆಪ್ಪ ಇಬ್ಬರೂ ಒಡನೆಯೆ ಬಂದು ಕಟ್ಟೆಯನ್ನೇರಿದರು. ತಾನು ಕಂಬಳಿಯಲ್ಲಿ ಮರೆಮಾಡಿಕೊಂಡಿದ್ದ ಕೈಬಾಂಬನ್ನು ಹಠಾತ್ತಾಗಿ ನೆಲಕ್ಕೆಸೆದ ಶೇಖರಪ್ಪ. ಕಾವಲು ನಡಸುತ್ತಿದ್ದ ಪೋಲೀಸರಿಬ್ಬರೂ ಹೌಹಾರಿ ಸ್ತಂಭೀಭೂತರಂತೆ ನಿಂತಿದ್ದ ಹಾಗೇ ಅವರನ್ನು ಹಿಡಿದು ಅವರ ಬಂದೂಕುಗಳನ್ನು ಕಸಿದುಕೊಳ್ಳಲಾಯಿತು. ಅದೇ ಸಮಯದಲ್ಲಿ ಒಳಗಡೆ ಇದ್ದ ಗುಂಪಿನ ಜನರು ಪಿಸ್ತೂಲುಗಳನ್ನು ಕೈಯಲ್ಲಿ ಹಿಡಿದು, ಒಳಗಿದ್ದ ಪೋಲೀಸರನ್ನು ಸುಮ್ಮನಾಗಿಸಿ ಅವರ ಬಂದೂಕುಗಳನ್ನು ಹೊತ್ತುಕೊಂಡರು. ಒಂದೆರಡು ನಿಮಿಷಗಳೊಳಗಾಗಿ ಕೈಗೆ ಸಿಕ್ಕಿದ ಹಣವನ್ನೆಲ್ಲ ಲೂಟಿ ಮಾಡಿದ್ದೂ ಆಯಿತು. ಆ ಗೊಂದಲದಲ್ಲಿ ಕೆಲವರು ಗೌಡ ಕುಲಕರ್ಣಿಯರು ತಮ್ಮ ಹತ್ತಿರ ಇದ್ದ ಕಂದಾಯದ ಹಣವನ್ನು ತಮ್ಮ ಜೇಬಿಗೇ ಬಿಟ್ಟು ಕೂಗಿಕೊಳ್ಳುತ್ತ ಓಡಿಹೋದರು. ಕೆಲಸವನ್ನು ಕೊನೆಗಾಣಿಸಿ ಗುಂಪಿನ ಜನರೂ ಒಂದೆರಡು ನಿಮಿಷಗಳಲ್ಲಿ ಅಲ್ಲಿಂದ ಮಾಯವಾದರು. ಪೋಲೀಸರು ಏನನ್ನೂ ಮಾಡಲಾರದೆ ಕೈ ಕೈ ಹಿಸುಕಿಕೊಳ್ಳುತ್ತ ನಿಂತಿದ್ದರು.

ಅವರು ಹೊರಟುಹೋದ ಹದಿನೈದು ನಿಮಿಷಗಳೊಳಗಾಗಿ ಮಿಲಿಟರಿ ಮೋಟಾರು ಅಲ್ಲಿಗೆ ಬಂದಿತು. ಲೂಟಿಯಾದ ಸಮಾಚಾರ ಗೊತ್ತಾಗುತ್ತಲೂ ಇನ್ನು ತಮ್ಮ ಮೇಲೆ ಎಲ್ಲಿ ದಾಳಿಯಾಗುವುದೋ ಎಂದು ಹೆದರಿ ಆ ಸೈನಿಕರೂ ಮೋಟಾರನ್ನು ವಾಯುವೇಗದಿಂದ ಓಡಿಸಿಕೊಂಡು ಬೆಳಗಾವಿಗೆ ಹೊರಟು ಹೋದರು.

## ೨೨

ಅದೇ ದಿನ ರಾತ್ರಿ ಹತ್ತು ಗಂಟೆಯ ಹೊತ್ತಿಗೆ ಶೇಖರಪ್ಪನೂ ಶಂಕರಪ್ಪ ಮಾಸ್ತರರೂ ತಮ್ಮ ಕೆಲವರು ಜೊತೆಗಾರರೊಂದಿಗೆ ಲಂಬಾಣಿ ತಾಂಡೆಗೆ ಬಂದರು.

ಎಲ್ಲರೂ ಏನೋ ಒಂದು ಅವಸರದಲ್ಲಿದ್ದ ಹಾಗೆ ತೋರುತ್ತಿದ್ದಿತು. ವಿಶ್ವನಾಥನಿಗೆ ಆ ಅವಸರ ಅರ್ಥವಾಗಲಿಲ್ಲ.

"ಏನಾಯ್ತು ಶೇಖರಣ್ಣ ? ಪೋಲೀಸರು ಹಿಂಬಾಲಿಸುತಿದ್ದಾರೋ ಏನು?" ಎಂದು ಕೇಳಿದ.

"ಇಲ್ಲ. ಈಗಂತೂ ನಮ್ಮ ಹಿಂದೆ ಇಲ್ಲ ಅವರು. ಆದರೂ ಯಾವಾಗ ನಾವು ಅವರ ಕೈಗೆ ಸಿಗುವೆವೋ ಅನ್ನುವ ನಿಯಮ ಇಲ್ಲ. ಅದಕ್ಕೇ ಬಸವಣ್ಣೆಪ್ಪನ ಹಳ್ಳಿಯನ್ನು ಬಿಟ್ಟು ಹೊರಟದ್ದು. ಈ ರಾತ್ರಿಯೆಲ್ಲ ನಡೆದು ಕಲ್ಲಾಪುರಕ್ಕ ಹೋಗಬೇಕು."

"ಯಾಕೆ? ಮತ್ಯಾಕೆ ಕಲ್ಲಾಪುರಕ್ಕೆ ?"

"ಇವೊತ್ತು ಮಧ್ಯಾಹ್ನ ಹಪ್ತೆ ವಸೂಲೀ ಕೇಂದ್ರ ಲೂಟಿ ಆಯ್ತು. ಅದೇ ಹೊತ್ತಿನಾಗ ಹತ್ತಿರ ಇರುವ ಒಂದು ಸ್ಟೇಶನ್ನೂ ಸುಟ್ಟುದ್ದಾಯ್ತು. ಸುದ್ದಿ ಬೆಳಗಾವಿಗೆ ತಿಳಿದೈತಿ. ಈ ಸೀಮೆಯೊಳಗೆಲ್ಲಾ ಪೋಲೀಸರು ತುಂಬಿಕೊಂಡು ಬಿಟ್ಟಾರ. ಬೆಳಗಾಗುವದರೊಳಗಾಗಿ ಎಲ್ಲಾ ಹಳ್ಳಿಗಳನ್ನೂ ಮುತ್ತುತ್ತಾರೋ ಏನೊ. ಬೆಳಗಾವಿಯಿಂದ ಲಾರಿ ಬರ್‍ತಾನೇ ಇದಾವೆ–ಪೋಲೀಸರವು."

"ಬಸವಣ್ಣೆಪ್ಪನ ಗುಂಪಿನವರೇನು ಮಾಡ್ತಾರ ?"

"ಅವರೂ ಆಗಲೇ ತಪ್ಪಿಸಿಕೊಂಡಾರ. ಯಾರೂ ಪೋಲೀಸರ ಕೈಯಾಗ ಸಿಗೂಹಾಂಗಿಲ್ಲ."

"ಈ ಲಂಬಾಣೀ ತಾಂಡೇಕ್ಕೂ ಮುತ್ತಬಹುದೋ ಏನು ಅವರು ?"

"ಬಹಳ ಮಾಡಿ ಇಲ್ಲಿಗೆ ಬರಲಿಕ್ಕಿಲ್ಲ ಅವರು. ಆದರೂ ಏನೂ ನಿಯಮ ಇಲ್ಲ. ಸಿ. ಐ. ಡಿ.ಗಳು ಜೇರೆ ಬಹಳ ಮಂದಿ ಆಗಿದ್ದಾರ. ಆ ಕೀರ್ತಿನಾಥ ಇನಸ್ಪೆಕ್ಟರ್ ಈ ಭಾಗದೊಳಗs ಇದ್ದಾರಂತ ಸುದ್ದಿ ಐತಿ."

ಕೀರ್ತಿನಾಥ ಎಂಬ ಹೆಸರು ಕಿವಿಗೆ ಬೀಳುತ್ತಲೂ ಹೇಮಾ ಕುತೂಹಲ ದಿಂದ ಕೇಳಿದಳು: "ಅವರೂ ಈ ಕಡೆಗೆ ಬಂದಾರಂತೇನು ? ಮಜಾ ಆದಂಗಾಯ್ತು ಹಾಗಾದರೆ !"

"ಬಹಳ ಬುದ್ಧಿವಂತ ಇದ್ದಾಂಗ ಕಾಣಿಸ್ತೈತಿ ಅವ, ಹೇಮಾ. ನಮ್ಮ ಗುಂಪನ್ನೆಲ್ಲ ಹಿಡೀಬೇಕಂತ ಪ್ರತಿಜ್ಞೆ ಮಾಡಿ ಬಂದಾನಂತೆ ಅವ !" ಎಂದರು ಮಾಸ್ತರರು.

ಒಂದೆರಡು ಗಂಟೆಗಳ ಕಾಲ ಅವರು ಬೇರೆ ಬೇರೆ ವಿಚಾರಗಳನ್ನು ಕುರಿತು ಮಾತನಾಡುತ್ತಿದ್ದರು. ಕರಪತ್ರಗಳಿಗೆ ಅಗತ್ಯವಿದ್ದ ವಿವರಗಳೂ ದೊರೆತುವು. ಕಬ್ಬಿನ ಹಾಲು ಹೊತ್ತುಕೊಂಡು, ಕಬ್ಬಿನ ಹೊರೆ ಹೊತ್ತುಕೊಂಡು ಸ್ಟೇಶನ್ನಿಗೆ ಹೋಗಿ, ಅಲ್ಲಿ ಕಾವಲಿದ್ದ ಪೋಲೀಸರಿಗೆ ಆಸೆ ತೋರಿಸಿ ಅವರು ಕಬ್ಬು ತಿನ್ನುತ್ತಿದ್ದಾಗ ಅವರ ಬಂದೂಕುಗಳನ್ನೆತ್ತಿಕೊಂಡು, ಸೀಮೆಯೆಣ್ಣೆಯನ್ನುಗ್ಗಿ ಸ್ಟೇಶನ್ನಿಗೆ ಬೆಂಕಿ ಹಚ್ಚಲ್ಪಟ್ಟ ಅದ್ಭುತ ಕತೆಯೂ ತಿಳಿದುಬಂದಿತು.

ಸ್ಟೇಶನ್ನಿನೊಳಗ ಯಾರನ್ನೂ ಬಿಡೂದಿಲ್ಲವಲ್ಲ ಈಗ? ಗುಂಪಿನವರನ್ನ ಹ್ಯಾಗೆ ಬಿಟ್ಟರು ?" ಎಂದಳು ಹೇಮಾ.

"ಗಾಡಿ ಬರುವ ವೇಳೆಗೆ ಹೋದರೆ ಬಿಡ್ತಾರೆ. ಅದರೊಳಗ ಕಬ್ಬು ಮಾರುವ ಜನ ಅಂದರ ಸಂಶಯ ಇರುವುದಿಲ್ಲ. ಪೋಲೀಸರಿಗೆ ಕಬ್ಬಿನ ಆಸೆ. ಗಾಡಿ ಬರುವದರೊಳಗಾಗಿ ಕೆಲಸ ತೀರಿಸಿ ಎಲ್ಲರೂ ಫರಾರಿ."

"ಎಷ್ಟು ಮಂದಿ ಹೋಗಿದ್ದರು ಆ ಕೆಲಸಕ್ಕೆ ?"

"ಇಪ್ಪತ್ತು ಮಂದಿ."

"ಎಷ್ಟು ಗಂಟೆಗೆ ?"

"ಮಧ್ಯಾಹ್ನ ಮೂರಕ್ಕೆ."

"ಅಂದರೆ? ಎರಡೂ ಕೆಲಸ ಒಂದೇ ಹೊತ್ತಿಗೆ ಆದುವೋ ಏನು ?"

"ಹೌದು. ಒಂದು ತಂಡದವರು ಈ ಕೆಲಸ, ಇನ್ನೊಂದು ತಂಡದವರು ಆ ಕೆಲಸ ಹಂಚಿಕೊಂಡಿದ್ದರು."

"ಇನ್ನುಮ್ಯಾಲ ಪೋಲೀಸರ ಬಂದೋಬಸ್ತಿ ಬಹಳ ಆಗಬಹುದು ಹಾಗಾದರೆ ?"

"ಹೌದು, ಸಾತಾರಾ ಕಡೆಯಿಂದ ಸ್ಪೆಶಲ್ ಪೋಲೀಸರನ್ನ ತರಿಸಿದ್ದಾರಂತೆ!"

"ಅಂತೂ ನಾಳಿನ ನಮ್ಮ ಕರಪತ್ರಕ್ಕೆ ಎರಡು ಅದ್ಭುತ ಕತೆ ಸಿಕ್ಕ ಹಾಗಾಯ್ತು!" ಎಂದು ಹೇಮಾ ಸಂತೋಷ ಮತ್ತು ಅಭಿಮಾನ ಬೆರೆತ ದನಿಯಲ್ಲಿ ಹೇಳಿದಳು.

"ಕತೆಯನ್ನೇ ಬರೆದುಬಿಡಬಾರದೆ? ಯಾವದಾದರೂ ಮಾಸಪತ್ರಿಕೆಗೆ ಕಳಿಸೋಣವಂತೆ," ಎಂದ ವಿಶ್ವನಾಥ.

"ನಾನು ಕತೆಗಾರ್ತಿಯಾಗಿದ್ದರೆ ಬರೆಯಬಹುದಾಗಿತ್ತು. ಆದರೆ ಇಂಥ ಕತೆಯನ್ನು ಯಾವ ಮಾಸಪತ್ರಿಕೆಯವರು ಹಾಕಿಯಾರು ಈ ಕಾಲದೊಳಗ? ಸರಕಾರ ಸುಮ್ಮನಿದ್ದೀತೇನು?"

"ನಾಳೆ ಚಳವಳಿ ಮುಗಿದು ಸ್ವಾತಂತ್ರ್ಯ ಬಂದಮ್ಯಾಲ ಯಾರಾದರೂ ಬರೆದಾರು ಬಿಡು."

"ಆ ಕತೆಗಾರರಿಗೆ ಇಂಥ ಘಟನೆಗಳ ಪರಿಚಯವಾದರೂ ಇದ್ದರಷ್ಟೆ ಬರೆಯೋದು?" ಎಂದಳು ಹೇಮಾ.

"ನಮ್ಮಲ್ಲಿ ಯಾರಾದರೂ ಅವರಿಗೆ ಹೇಳಿದರೆ ಅವರು ಬರೆದಾರು," ಎಂದ ವಿಶ್ವನಾಥ.

"ಏನು ಬರೀತಾರೆ ತಲೆ! ಇಂಥಾ ಕತೆಗಳನ್ನು ಸರಿಯಾಗಿ ಬರೆಯ ಬೇಕಾದರೆ ಅನುಭವ ಬೇಕು ಅನುಭವ–ಸ್ವಾನುಭವ ಬೇಕು. ಯುದ್ಧ ಅಂದರೇನು ಅನ್ನೋದು ಬರೆಯುವವರಿಗೂ ಅನುಭವವಾಗಿರಬೇಕು. ಅವರೂ ಅದರೊಳಗೆ ಸ್ಫೂರ್ತಿಯಿಂದ ಭಾಗವಹಿಸಿರಬೇಕು. ಚಳವಳಿಗಾರರೆಂದರೆ ಹ್ಯಾಗಿರುತ್ತಾರೆ, ಅವರ ಹೃದಯ ಹ್ಯಾಗಿರುತ್ತದೆ, ಅವರ ವಿಚಾರ ಹ್ಯಾಗಿರುತ್ತವೆ, ಅವರು ಹ್ಯಾಗೆ ಹ್ಯಾಗೆ ಕೆಲಸ ಮಾಡುತ್ತಾರೆ ಎಲ್ಲಾ ನೋಡಿ ತಿಳಿದಿರಬೇಕು. ಬೆಂಗಳೂರು ಮುಂಬಯಿಯಂಥಾ ಪಟ್ಟಣದೊಳಗ ಕೂತುಕೊಂಡು ಪ್ರಣಯ ಕಾದಂಬರಿ ಬರೆಯುವವರಿಗೆ ಸಮರಭೂಮಿಯ ಕತೆ ಬರೆಯೋದು ಹ್ಯಾಗೆ ಸಾಧ್ಯವಾದೀತು? ಇದೇನೂ ಕಲ್ಪನೆಯ ಬದನೇಕಾಯಿ ಅಲ್ಲವಲ್ಲ—ಕಾದಂಬರಿಕಾರರ ತಲೆಯಿಂದ ಹೊರಬರಲಿಕ್ಕೆ! ಬರೆದರೆ ನೀನೇ ಬರೀಬೇಕು–ಬರೆಯೋದನ್ನ ಅಭ್ಯಾಸಮಾಡಿ!"

"ನೋಡೋಣ ಅದುವರೆಗೂ ಬದುಕಿದ್ದರೆ ಬರೀತೇನೆ" ಎಂದ ವಿಶ್ವನಾಥ.

"ಹೀಗೆಲ್ಲ ಮಾತನಾಡಬಾರದು ವಿಶ್ವನಾಥ. ಬದುಕೇ ಬದುಕುತೇವೆ ಅಂತ ಗಟ್ಟಿ ಆಶಾ ಇರಬೇಕು ಯಾವಾಗಲೂ...." ಎಂದ ಶೇಖರ.

"ಹೊಗಲಿ ಬಿಡ್ರಿ. ನಮಗ್ಯಾಕ ಆ ಕತೆ ಕಾದಂಬರೀ ಸುದ್ದಿ. ಅವೆಲ್ಲಾ ಪಟ್ಟಣದವರಿಗೆ ಇರಲಿ. ನಮ್ಮಷ್ಟಕ್ಕ ನಾವು ಕೆಲಸ ಮಾಡಿಪರಾಯ್ತು. ಅಷ್ಟೇ ಸಾಕು, ಸ್ವಾತಂತ್ರ್ಯ ಬಂದದ್ದನ್ನ ನಮ್ಮ ಕಣ್ಣಿನಿಂದ ಕಂಡರ ಸಾಕು. ನಮ್ಮ ಹೊಟ್ಟೆ ತುಂಬಿದ ಹಾಗೆ."

“ನಮ್ಮ ಜನ್ಮದಾಗ ಸ್ವಾತಂತ್ರ್ಯವನ್ನ ನೋಡತೇವೋ ಇಲ್ಲೋ—” ಎಂದ ವಿಶ್ವನಾಥ, ನಿರಾಶೆ ಬೆರೆತ ಸ್ವರದಲ್ಲಿ.

“ಹೀಂಗ್ಯಾಕ ಮಾತಾಡುತೀಯೋ ವಿಶ್ವನಾಥ? ನಿನಗೇನಾಯ್ತು? ಮೈಯಾಗ ನೆಟ್ಟಗಿಲ್ಲೇನು?” ಎಂದು ಕೇಳಿದರು ಮಾಸ್ತರರು.

“ಇಲ್ಲ ಮಾಸ್ತರರೆ, ಅಂಥಾದ್ದೇನೂ ಇಲ್ಲ. ಆದರೆ ಇಲ್ಲಿ ಹೀಗೆ ಯಾವಾಗಲೂ ಕೂತಿರೂದು ನನಗೆ ಸರಿಬರೂದಿಲ್ಲ. ನೀವೆಲ್ಲಾ ಗುಡ್ಡ ಬೆಟ್ಟ ತಿರುಗಿ ಕಷ್ಟಪಟ್ಟು ದುಡೀತಾ ಇರುವಾಗ ನಾ ಇಲ್ಲಿ ಈ ಕರಪತ್ರ ಹೊರಡಿಸೋ ಸೊಟ್ಟ ಕೆಲಸ ಮಾಡ್ತಾ ಕೂತಿರೂದು ಬೇಸರವಾಗಿಬಿಟ್ಟದ. ಈ ಕೆಲಸಕ್ಕೆ ಇಬ್ಬರು ಬೇಕಾಗುವದೂ ಇಲ್ಲ. ಹೇಮಾ ಒಬ್ಬಾಕೆ ನೋಡಿಕೊಂಡಾಳು ಇದನ್ನ. ಲಂಬಾಣಿಗರ ಹುಡುಗಿಯರಾರಾದರೂ ಸಹಾಯ ಮಾಡಿಯಾರು. ನಾನೂ ನಿಮ್ಮ ಸಂಗಡ ಬರ್ತೇನೆ.”

“ಈಗ ಸ್ವಲ್ಪ ದಿನಗಳಿಂದ ಈತ ಹೀಗೇ ಬೇಸರದಿಂದ ಇದ್ದಾನ. ಕೂತುಕೊಂಡು ಕೆಲಸ ಮಾಡೋದು ಇವನ ಸ್ವಭಾವಕ್ಕೆ ವಿರುದ್ಧ ಇದ್ದಂತೆ ಕಾಣಿಸ್ತದ. ನಾನೆಷ್ಟೋ ಹೇಳಿದೆ. ಏನೂ ಉಪಯೋಗ ಆಗಲಿಲ್ಲ,” ಎಂದಳು ಹೇಮಾ.

“ಹೀಂಗ ಬೇಸರಪಟ್ಟುಕೋಬಾರದು ದೇಸಾಯರೆ. ನಮ್ಮ ಪಾಲಿನ ಕೆಲಸ ನಾವು ಮಾಡಲೇಬೇಕು. ಇಲ್ಲಿ, ಹೇಮಾವತಿಯನ್ನು ಒಬ್ಬಳನ್ನೇ ಬಿಡೋದು ನೆಟ್ಟಗಿಲ್ಲ. ಸಂಗಡ ಯಾರಾದರೂ ಇರಲಿಕ್ಕೇ ಬೇಕು. ಹೊತ್ತು ಹೇಳಿ ಕೇಳಿ ಬರೋದಿಲ್ಲ. ಒಮ್ಮೆಲೆ ಪೋಲೀಸರು ಬಂದರೆ, ತಾಂಡೆಯಲ್ಲಿ ಝಡ್ತಿ ಮಾಡಿದರೆ ಹೇಮಕ್ಕ ಒಬ್ಬಳೇ ಸಿಕ್ಕಬಾರದು ಅವರ ಕೈಗೆ. ನೀವೊಬ್ಬರಿದ್ದರೆ ಏನಾದರೂ ಯುಕ್ತಿಯಿಂದ ಪಾರಾಗಬಹುದು. ಹೌದೋ, ಅಲ್ಲೋ?”

“ನೀ ಹೇಳೋದೆಲ್ಲ ನಿಜ ಶೇಖರಣ್ಣ. ಆದರೆ ಸ್ವಲ್ಪ ದಿನಗಳವರೆಗಾದರೂ ನಾ ಹೊರಗೆ ತಿರುಗಾಡಿ ಕೆಲಸ ಮಾಡಿದರೆ ನೆಟ್ಟಗೆ.”

“ಹಾಂಗಽ ಆಗಲಿ, ಇನ್ನು ಮೂರು ನಾಲ್ಕು ದಿನದೊಳಗ ನಾನು ಕೊಲ್ಲಾಪುರಕ್ಕ ಹೋಗೂದೈತಿ. ಆಗ ನೀನೂ ಬಂದೀಯಂತೆ ಸಂಗಡ.”

“ಕೊಲ್ಲಾಪುರಕ್ಕೆ? ಯಾಕೆ?” ಎಂದಳು ಹೇಮಾ.

“ನಾಳಿನ ಕರಪತ್ರದೊಳಗ ಹಾಕಿಬಿಡೋದಿಲ್ಲ ಅಂತ ಮಾತು ಕೊಟ್ಟರ ಹೇಳ್ತೇನಿ,” ಎಂದು ಶೇಖರ ನಗುತ್ತ ನುಡಿದ.

"ಓ? ಅಂಥಾ ಗುಟ್ಟೇನು?"

"ಹೂಂ, ಗುಟ್ಟು ರಟ್ಟುಮಾಡೋದಿಲ್ಲಾಂದರ ಹೇಳತೀನಿ. ಸುದ್ದಿ ಹೊರ ಬಿದ್ದರ ಕತೀನಃ ಮುಗೀತು. ನಾ ಅಲ್ಲಿಗೆ ಹೋದದ್ದು ವ್ಯರ್ಥ ಆದೀತು."

"ಅಂಥಾದ್ದೇನಪ್ಪ ಅದು? ಏನು ಮಹಾರಾಜನ ಅರಮನೆಯನ್ನು ಸುಟ್ಟು ಬಿಡಬೇಕಂತ ಮಾಡಿದ್ದೀರೋ ಏನು?" ಎಂದು ಆಕೆಯೂ ನಗುತ್ತ ಕೇಳಿದಳು.

"ಸುಡುವ ಕೆಲಸ ಏನೂ ಅಲ್ಲ ಅದು. ಅದನ್ನ ಸುಡೂದಕ್ಕೆ ನಾವ್ಯಾತಕ್ಕೆ ಹೋಗಬೇಕು ಅಷ್ಟು ದೂರ? ಅಲ್ಲಿಯವರೇ ಮಾಡಿಯಾರು ಅದನ್ನ."

"ಮತ್ತೆ?"

"ಕರ್ನಾಟಕದ ಕಾಂಗ್ರೆಸ್ ಕಾರ್ಯಕರ್ತರ ಗುಪ್ತ ಸಭಾ ಕೂಡೂದೈತಿ ಅಲ್ಲಿ."

"ಓ! ಈಗ ತಿಳೀತು ಬಿಡು. ಹೌದು. ಗುಟ್ಟಾಗಿಡಬೇಕಾದ ಸುದ್ದೀನೇ ಸರಿ. ಯಾರ್ಯಾರು ಬರ್ತಾರಂತೆ ಸಭೆಗೆ?"

"ಬ್ಯಾರೆ ಬ್ಯಾರೆ ಕಡೆ ಕೆಲಸ ನಡಿಸಿರುವವರೆಲ್ಲಾ ಬರ್ತಾರಂತೆ. ಮುಂಬಯಿ ಪುಣೆದೊಳಗ ಕೂತು ಮೊಸರೂ ಅವಲಕ್ಕಿ ಹೊಡೆಯುವ ಕೆಲಸ ಮಾಡ್ತಾ ಇರುವವರೂ ಬರ್ತಾರ."

"ನಮ್ಮ ಅಪ್ಪ?"

"ಅವರೂ ಬರ್ತಾರಂತ ಸುದ್ದಿ. ಮುಂಬಯಿ ಬಿಟ್ಟು ಹೊರಡೂದು ಇದಃ ಮೊದಲನೆ ಸಾರಿ ಅಂತ ಕಾಣುತ್ತೆತಿ, ಶಾಮರಾಯರು."

ಒಂದು ಕ್ಷಣ ಸುಮ್ಮನಿದ್ದು ಹೇಮಾ—"ಶೇಖರಣ್ಣಾ, ಈ ಸಭೆಗೆ ನಾನೂ ಬರಬೇಕಂತ ವಿಚಾರ ಮಾಡಿದ್ದೀನಿ. ನನ್ನ ಕರೆದುಕೊಂಡು ಹೋಗ್ತೀರಾ?" ಎಂದಳು.

"ಛೆ! ನೀನ್ಯಾಕೆ ಬರುತ್ತೀ ಅಲ್ಲಿಗೆ?"

"ನಾ ಬಂದರೆ ಸಭೆ ಗರಂ ಆಗಬಹುದು. ಏನೂ ಕೆಲಸ ಮಾಡದೆ ಸುಮ್ಮನೆ ಊಟ ಮಾಡ್ತಾ ಕೂತಿರುವ ಈ ಮುಖಂಡರನ್ನೆಲ್ಲಾ ಒಂದು ಕೈ ತಗೊಂಡು ಬಿಡ್ತೀನಿ!"

"ಅವರ ಮ್ಯಾಲ ಯಾಕ ಸಿಟ್ಟು, ಹೇಮಕ್ಕ? ಮುದುಕರಾಗ್ತಾ ಬಂದಾರ. ಸ್ಟೇಶನ್ ಸುಡೂದು, ಹಪ್ತೆ ಲೂಟಿ ಮಾಡೋದು ಇಂಥಾ ಕೆಲಸ

ಅವರಿಂದ ಹ್ಯಾಂಗಾದೀತು? ಅವರಷ್ಟಕ್ಕ ಅವರಿರಲಿ ಬಿಡು. ನಮ್ಮಷ್ಟಕ್ಕ ನಾವು ಕೆಲಸ ಮಾಡಿದರಾಯ್ತು!" ಎಂದ ಶೇಖರ.

"ಅವರಷ್ಟಕ್ಕ ಅವರಿರಲಿ ಅಂದರೇನು, ಶೇಖರಣ್ಣ? ಅವರಿರೂದಾದರೂ ಯಾತಕ್ಕ? ದೊಡ್ಡ ಮುಖಂಡರಂತ ಹೇಳಿಕೊಂಡು ಮೆರೆಯುವವರು ಹೋರಾಟದೊಳಗ ಭಾಗವಹಿಸದೆ ಮುಂಬಯಿಯೊಳಗ ಕೂತುಕೊಂಡು ಚೈನೀ ಮಾಡಿದರ ಸಿಟ್ಟು ಬರದಿದ್ದೀತೇನು? ಇಂಥ ಕೈಲಾಗದ ಮಂದಿ ಸಭಾ ಆದರೂ ಯಾಕ ಕರೆದಾರ? ಅಲ್ಲಿಗಾದರೂ ಯಾತಕ್ಕ ಬರತಾರ ಅವರು?"

"ಏನೋ. ಯಾವದೂ ನೆಟ್ಟಗ ಗೊತ್ತಿಲ್ಲ. ಅಂತೂ ಸಭಾ ಕರದಾರ. ಹೋಗೂದು ನಮ್ಮ ಕರ್ತವ್ಯ ಅಂತ ಹೋಗಬೇಕು. ಬಂದ ಮ್ಯಾಲ ಮತ್ತ ಐತೆಲ್ಲ ನಮ್ಮ ಕೆಲಸ. ಅವರು ಮಾಡಿದರೂ ಅಷ್ಟs ಮಲಗಿದರೂ ಅಷ್ಟs."

"ಈಗ ಮಲಗಿಕೊಂಡು, ನಾಳೆ ಸ್ವಾತಂತ್ರ್ಯ ಬಂದಮ್ಯಾಲೆ ಮೂಗು ಮ್ಯಾಲೆ ಮಾಡಿಕೊಂಡು ಮುಖಂಡರಾಗಿ ಮೆರೆಯುವವರು ಅವರೇ ಅಲ್ಲೇನು? ಮಂತ್ರಿಗಳಾಗಿ ಸುಖ ಉಣ್ಣುವವರೂ ಅವರೇ ಅಲ್ಲೇನು?" ಎಂದಳು ಹೇಮಾ.

"ಮೆರೆಯಲೇಳು ಹೇಮಕ್ಕಾ. ಅವರೇ ಸುಖ ಉಣ್ಣಲಂತೆ. ಆ ಮಂತ್ರಿಪದ, ಅಧಿಕಾರದ ಆಶಾ ನಮಗ್ಯಾಕ ಹಳ್ಳೀ ಮಂದಿಗೆ? ಅದೆಲ್ಲಾ ಅವರಿಗೇ ಇರಲೇಳು. ನಮ್ಮ ಪಾಲಿಗೆ ಇದಾಳಲ್ಲ ನಮ್ಮ ಭೂಮಿತಾಯಿ. ಆಕೆ ಇರುವ ತನಕ ನಮಗೇನು ಚಿಂತಿ?" ಎಂದ ಶೇಖರ.

"ಆ ಭೂಮಿ ಆದರೂ ನಿಮ್ಮಲ್ಲಿ ಎಷ್ಟು ಮಂದಿಗೆ ಅದ?"

"ಕೆಲವರಿಗೆ ಐತಿ, ಕೆಲವರಿಗೆ ಇಲ್ಲ. ಆದರೂ ನಮ್ಮ ದುಡಿತ ನಮಗೈತಲ್ಲ? ನಮ್ಮ ತೋಳಿನಾಗ ಶಕ್ತಿ ಇರುವ ತನಕ ಯಾವ ಚಿಂತೀನೂ ನಮಗಿಲ್ಲ ಹೇಮಕ್ಕ. ದುಡಿದು ಹೊಟ್ಟೆ ಹೊರೆಯೂದೇನು ದೊಡ್ಡದು?"

ಹಳ್ಳಿಗರ ಆತ್ಮವಿಶ್ವಾಸ, ಕಾಯಕದಲ್ಲಿನ ಶ್ರದ್ಧೆಗಳೇ ಮೂರ್ತಿವೆತ್ತಂತಿದ್ದ ಶೇಖರನನ್ನು ಅಭಿಮಾನಪೂರ್ಣದೃಷ್ಟಿಯಿಂದ ನಿರುಕಿಸುತ್ತ ಹೇಮಾ ನುಡಿದಳು: "ಹಿಂದುಸ್ಥಾನಕ್ಕ ಸ್ವಾತಂತ್ರ್ಯ ಬಂದರೆ ನಿಮ್ಮಂಥ ಬಂಟರಿಂದಲೇ ಬರಬೇಕು ಶೇಖರಣ್ಣಾ. ಇದೇನು ಹೊಗಳಿಕೆಯ ಮಾತು ಅಂತ ತಿಳೀಬ್ಯಾಡ. ಹಳ್ಳಿಯ ರೈತರ ಶಕ್ತಿಯ ಮ್ಯಾಲಿ ವಿಶ್ವಾಸ ಇದ್ದಷ್ಟು ನನಗ ಇನ್ನ್ಯಾರ ಮ್ಯಾಲೂ ಇಲ್ಲ."

"ನಿನ್ನ ಧೈರ್ಯದ ಮುಂದ ನಮ್ಮದೆಲ್ಲಾ ಏನು ಬಿಡು, ಹೇಮಕ್ಕಾ

ಕಾಲೇಜಿನಾಗ ಕಲೀತಿದ್ದವಳು ಸುಖವಾಗಿ ಇರೂದನ್ನ ಬಿಟ್ಟು, ಇಲ್ಲಿ ಇಂಥಾ ಜಾಗದೊಳಗ ಈ ಲಂಬಾಣಿಗರ ಆರಿವೆ ಹಾಕ್ಕೊಂಡು ಹಗಲೂ ರಾತ್ರಿ ಕೆಲಸ ಮಾಡ್ತಾ ಇದ್ದೀಯಲ್ಲ! ಇದೇನು ಸಣ್ಣ ಕೆಲಸ ಏನು?"

"ಏನು ದೊಡ್ಡ ಕೆಲಸವೊ ನಾ ಮಾಡೋದು! ನಮ್ಮಪ್ಪ ಇಷ್ಟು ದೊಡ್ಡ ಮುಖಂಡರಾದರೂ ಏನೂ ಮಾಡದೆ ಕೂತು ದೇಶಕ್ಕೆ ದ್ರೋಹ ಮಾಡಿದರು. ನನ್ನ ಈ ಸೊಟ್ಟ ಕೆಲಸದಿಂದ ಸ್ವಲ್ಪವಾದರೂ ಕಡಿಮೆಯಾದೀತೇನು ಆ ದ್ರೋಹ?"

"ಅದು ದ್ರೋಹ ಅನ್ನೋದನ್ನ ನಾ ಒಪ್ಪುವದಿಲ್ಲ. ಹೋಗಲಿ ಬಿಡು. ಹೊತ್ತಾಗ್ತಾ ಬಂತು. ನಾವು ಹೊರಡತೇವಿನ್ನು. ಶನಿವಾರ ರಾತ್ರಿ ಬೆಳಗಾವಿ ಯೊಳಗಿರ್ತೇವೆ. ನೀವು ಅಲ್ಲಿಗೇ ಬರ್ರಿ ದೇಸಾಯರ. ರಾತ್ರಿಯ ಗಾಡಿಗೆ ಹೊರಡೂದು ಕೊಲ್ಲಾಪುರಕ್ಕ. ಗೊತ್ತಾಯ್ತೇನು?" ಎಂದು ಹೇಳಿ ಶೇಖರ ಮೇಲಕ್ಕೆದ್ದ. ಉಳಿದವರೂ ಎದ್ದು ಹೊರಡುವ ಸಿದ್ಧತೆಗೆ ತೊಡಗಿದರು.

## ೨೩

ಬಾಬಾಸಾಹೇಬ ದೇಸಾಯಿಯವರು ವಿಷಣ್ಣವದನದಿಂದ ತಮ್ಮ ಕೊಟಡಿಯಲ್ಲಿ ಅಡಿಯಿಡುತ್ತಿದ್ದರು. ಕುರ್ಚಿಗಳ ಮೇಲೆ ಕುಳಿತುಕೊಂಡಿದ್ದ ಕೀರ್ತಿನಾಥನೂ, ಕುಲಕರ್ಣಿ ರಂಗಣ್ಣನೂ ದೇಸಾಯಿಯವರನ್ನೆ ನೆಟ್ಟದಿಟ್ಟಿ ಯಿಂದ ನೋಡುತ್ತಿದ್ದರು.

ದೇಸಾಯರು ಒಮ್ಮೆಲೆ ನಿಂತುಕೊಂಡು ಉದ್ವೇಗಪೂರ್ಣ ಸ್ವರದಲ್ಲಿ ನುಡಿದರು: "ಇನ್ನು ಅವ ನನ್ನ ಕೈಗೆ ಹತ್ತುವ ಹಾಂಗ ಕಾಣುವದಿಲ್ಲ ರಂಗಣ್ಣ. ನನ್ನ ದೈವದಾಗ ಹೀಂಗ ಬರೆದಿದ್ದೀತು. ಏನ್ಮಾಡೋದು?"

"ಹೀಂಗ ಸುಮ್ಮನ ಕೂತರ ಹ್ಯಾಂಗಾದೀತು ದೇಸಾಯರಽ? ನಿಮಗಿರು ವವ ಅವನೊಬ್ಬನೇ ಮಗ. ಅವನ್ನ ಬಿಟ್ಟರ ಬ್ಯಾರೆ ಯಾರಿದಾರೆ? ಇಷ್ಟು ದೊಡ್ಡ ವತನು, ಭೂಮಿಕಾಣಿ, ಆಸ್ತಿಪಾಸ್ತಿ ಎಲ್ಲಾ ಯಾರು ನೋಡಕೋಬೇಕು ನಿಮ್ಮ ನಂತರ? ಸ್ವಲ್ಪ ಶಾಂತವಾಗಿ ವಿಚಾರ ಮಾಡಿದರ ಈಗ ಹೀಂಗ ಕೂಡದೆ ಏನಾದರೂ ಮಾಡಬೇಕು ಅಂತ ನಿಮಗನ್ನಿಸೀತು. ಚಳವಳಿಯೊಳಗ ಹೋಗಿ ಬಂದೂಕಿನ ಗಿಂದೂಕಿಗೆ ಸಿಕ್ಕು ಸಾಯೂದು ಹಾಂಗಿರಲಿ, ಈ ಹುಡುಗಿಯು

ಬಲೆಯೊಳಗ ಸಿಕ್ಕು ಹಾಳಾದಾನು. ಆದರ ವಿಚಾರ ಮಾಡಿರಿ," ಎಂದ ಕೀರ್ತಿನಾಥ.

"ಏನ್ಮಾಡಬೇಕು ಅನ್ನೋದು ತಿಳಿಯೆಲ್ಲೊಲ್ಲದು" ಎಂದು ಹತಾಶರಾಗಿ ನುಡಿದು ದೇಸಾಯಿಯವರು ಮಂಚದ ಮೇಲೆ ಕುಳಿತುಕೊಂಡರು.

"ನೀವು ಹ್ಯಾಂಗಾದರೂ ಮಾಡಿ ಅವನ್ನ ಭೆಟ್ಟಿಯಾಗಿ ಮನೆಗೆ ಕರಕೊಂಡು ಬರಬೇಕು ದೇಸಾಯರ! ನೀವು ಹೋಗಿ ಹೇಳಿದರ ಅವ ತಪ್ಪದೆ ಬಂದಾನು ಅಂತ ನನಗೆ ಖಾತ್ರಿ ಐತಿ!"

"ಏನೊ, ನನಗಂತೂ ಖಾತ್ರಿ ಇಲ್ಲ. ಅವೊತ್ತು ಆ ಕೊಳಕ್ಕ ಹೋಗಿದ್ದೆವಲ್ಲ—ನಾವು ಹೋಗುವುದರೊಳಗಾಗಿ ತಪ್ಪಿಸಿಕೊಂಡು ಓಡಿಬಿಟ್ಟಿದ್ದರು. ಅವನ ಭೆಟ್ಟಿ ಆಗತೈತೋ ಇಲ್ಲೋ ಹ್ಯಾಂಗ ಹೇಳಬೇಕು? ಅವ ಇರೂದಾದ್ರೂ ಎಲ್ಲಿ?"

"ಲಂಬಾಣಿಗರ ತಾಂಡದೊಳಗ ಇದ್ದರು ಇಷ್ಟು ದಿನ."

ಆಶ್ಚರ್ಯದಿಂದ ದಿಙ್ಮೂಢರಂತಾಗಿ ದೇಸಾಯಿಯವರು ಒಂದೆರಡು ಕ್ಷಣ ಸುಮ್ಮನೆ ಕುಳಿತಿದ್ದು ತರುವಾಯ ಪ್ರಶ್ನಿಸಿದರು: "ಯಾವ ಲಂಬಾಣಿಗರ ತಾಂಡೆ? ಎಲ್ಲೈತಿ ಅದು?"

"ಇಲ್ಲಿಂದ ಮೂವತ್ತು ಮೈಲು ಇರಬಹುದು."

"ನಿಮಗ ಹ್ಯಾಂಗ ಗೊತ್ತಾಯ್ತು ಅದು?"

"ಬಹಳ ದಿನಗಳ ತನಕ ಗೊತ್ತಾಗಲಿಲ್ಲ. ಅಲ್ಲಿ ಕೂತುಕೊಂಡು ಕರಪತ್ರಾ ಹೊರಡಿಸ್ತಿರಬೇಕು. ದಿನಾಲೂ ಒಂದೆರಡು ಕರಪತ್ರ ನಮ್ಮ ಕೈಯೊಳಗ ಸಿಗತಿದ್ದವು. ಯಾರು ಹೊರಡಿಸ್ತಾರ, ಎಲ್ಲಿಂದ ಹೊರಡಿಸ್ತಾರ ಅಂತ ಬಹಳ ಹುಡುಕಾಡಿದರೂ ಗೊತ್ತಾಗಲಿಲ್ಲ. ಒಂದು ದಿನ ನಾ ಖಾನಾಪುರಕ್ಕ ಹೋಗ್ತಾ ಇದ್ದಾಗ ಹಾದಿಯೊಳಗ ಒಬ್ಬ ಲಂಬಾಣಿ ಹೆಂಗಸು ಕಟ್ಟಿಗೆ ಹೊರೆ ಇಳಿಸಿ ದಣಿವಾರಿಸ್ತ ಕೂತಿರೂದನ್ನ ನೋಡಿದೆ. ಕಟ್ಟಿಗೆಯೊಳಗ ಏನೋ ಕಾಗದ ಕಂಡ ಹಾಂಗ ಕಾಣಿಸಿತು. ನನಗೆ ಸಂಶಯ ಬಂದು ಮೋಟಾರು ನಿಲ್ಲಿಸಿ ಆ ಹೊರೆಯನ್ನ ತಪಾಸು ಮಾಡಿನೋಡಿದೆ. ಕರಪತ್ರ ಇದ್ದುವು. ಎಲ್ಲಿ ಸಿಕ್ಕಿತು ಅಂತ ಆಕೀನ್ನ ಹಿಡಿದು ಪೋಲೀಸ್ ಸ್ಟೇಶನ್ನಿಗೊಯ್ದು ಪ್ರಶ್ನೆ ಮಾಡಿದೆವು. ಆವಳಿಂದ ಉತ್ತರ ಬರಲಿಲ್ಲ. ಎಷ್ಟು ಹೆದರಿಕೆ ಹಾಕಿದರೂ ಆಕೆ ಏನೂ ಹೇಳಲಿಲ್ಲ.

ಒಂದೆರಡು ಏಟು ಬಿಟ್ಟರೂ ಬಾಯಿ ಬಿಡಲಿಲ್ಲ. ಬಿದ್ದಿರಲಿ ಇಲ್ಲೇ, ಒಂದೆರಡು ದಿನ ಇದ್ದರೆ ಅವಳ ಮನೆಯವರು ಹುಡುಕಿಕೊಂಡು ಬಂದಾರು, ಆಗ ತಪಾಸು ಮಾಡಬಹುದು ಅಂತ ಸುಮ್ಮನಿದ್ದೆವು. ಮರುದಿವಸ ಅವಳ ಗಂಡ ಬಂದ. ಅವನ್ನ ಹಿಡಿದು ನಾಲ್ಕು ಬಾರಿಸಿದಾಗ ಆ ತಾಂಡೆ ಇರುವ ಸ್ಥಳ ಗೊತ್ತಾಯ್ತು. ಅಲ್ಲಿಗೆ ಹೋಗಿ ನೋಡಿದರೆ ಹಕ್ಕಿಗಳು ಹಾರಿಹೋಗಿದ್ದವು. ಇಬ್ಬರೂ ಫರಾರಿ ಯಾಗಿದ್ದರು."

"ಎಲ್ಲಿಗೆ ಹೋಗಿದ್ದರನ್ನೂದು ಗೊತ್ತಾಯ್ತೇನು?"

"ಹ್ಯಾಂಗ ಗೊತ್ತಾಗಬೇಕು? ಅಂತೂ ಒಬ್ಬಿಬ್ಬರು ಕೊಟ್ಟ ಚಹರೆಯ ಮೇಲಿಂದ ನಿಮ್ಮ ಮಗನೇ ಅಲ್ಲಿದ್ದ ಅಂತ ನಂಬಿಕೆ ಆಯ್ತು ನನಗ. ಹಾಂಗs ಆ ಹುಡುಗಿಯೂ ಇಂಥವಳೇ ಅನ್ನೂದೂ ಗೊತ್ತಾಯ್ತು."

"ಯಾರ ಮಗಳು ಆಕೆ?"

ಕೀರ್ತಿನಾಥ ಹೇಮಾಳ ವಿಷಯವನ್ನೆಲ್ಲ ಅವರಿಗೆ ವಿವರವಾಗಿ ತಿಳಿಸಿ —"ನಿಮ್ಮ ಮಗ ಮತ್ತು ಆಕೆ ಇಬ್ಬರೂ ಒಂದೇ ಕಾಲೇಜಿನೊಳಗ ಕಲೀ ತಿದ್ದರು. ಅಲ್ಲಿಯ ಗುರುತು ಬೆಳಗಾವಿಯೊಳಗ ಬೆಳೀತು. ಅವರ ಮನೆ ಯೊಳಗs ಒಂದು ಸಾರೆ ನಮ್ಮ ಕೈಯೊಳಗ ಸಿಗತಿದ್ದ ನಿಮ್ಮ ಹುಡುಗ. ನಾ ಬರೂದರೊಳಗ ತಪ್ಪಿಸಿಕೊಂಡು ಹೋದ. ಈಗಲೂ ಹಾಂಗs ಆಯ್ತು. ಪೋಲೀಸರನ್ನ ಕರೆದುಕೊಂಡು ನಾವು ಅಲ್ಲಿಗೆ ಹೋಗುವುದರೊಳಗಾಗಿ ಓಡಿ ಹೋಗಿಬಿಟ್ಟಿದ್ದರು. ಅವರು ಅಲ್ಲಿ ಇರೂದು ನಮಗ ಗೊತ್ತಾದ ಸುದ್ದಿ ಅವರಿಗೆ ಹ್ಯಾಂಗಾದರೂ ತಿಳೀತೋ ದೇವರೇ ಬಲ್ಲ!"

"ಆ ಹುಡುಗಿಯ ವಯಸ್ಸೆಷ್ಟು? ಎಂದು ಕೇಳಿದರು ದೇಸಾಯರು.

"ಹದಿನೆಂಟು ಇದ್ದೀತು."

"ಹದಿನೆಂಟು!" ಎಂದು ಮೂಗಿನ ಮೇಲೆ ಬೆರಳನ್ನಿರಿಸಿಕೊಂಡು ರಂಗಣ್ಣ ನೆಂದ: "ಮದುವೆ ಆಗೈತೋ ಇಲ್ಲೋ ಇನ್ನೂ?"

"ಇಲ್ಲ. ಆಗಬೇಕಾಗಿತ್ತು. ಆದರೆ ವಿಚಿತ್ರ ಹುಡುಗಿ ಅದು. ಗಂಡುಬೀರಿ ಇದ್ದಾಂಗಿದ್ದಾಳ. ಸ್ವಾತಂತ್ರ್ಯ ಬರುವ ತನಕ ಮದುವೆ ಆಗೂದಿಲ್ಲ ಅಂತ ಹೇಳುತಾಳ. ತಂದೆಗೆ ಒಬ್ಬಳೇ ಮಗಳು. ಅಚ್ಚೆಯಿಂದ ಬೆಳಸಿದರು. ಆಕೆ ಹಿಂಗಾಗಿಬಿಟ್ಟಳು. ಈಗ ಅಪ್ಪನಿಗೂ ಸೊಪ್ಪು ಹಾಕುವದಿಲ್ಲ."

"ಹೂಂ. ನಮ್ಮ ವಿಶ್ವನಾಥನ ಹಾಂಗs ಅನ್ನಿರಿ...."

"ಹೌದು. ಎಲ್ಲಾ ಅವನ ಹಾಂಗs. ಅಪ್ಪನ ಮಾತೇನಾದ್ರೂ ಆಕೆ ಕೇಳಿದ್ದರ ಇಷ್ಟೊತ್ತಿಗೆ ಎರಡು ಮಕ್ಕಳಾಗುತ್ತಿದ್ದವು!"

"ಅದೇನ್ರಿ? ನಿಮಗ ಎಲ್ಲಾ ಗೊತ್ತಿರೂ ಹಾಂಗ ಐತೆಲ್ಲ? ಆ ಹುಡುಗಿ ನಿಮಗ ಚಲೋ ಗುರುತೇನು?" ಎಂದ ರಂಗಣ್ಣ.

ಕೀರ್ತಿನಾಥ ಕೊಂಚ ತಬ್ಬಿಬ್ಬಾಗಿ ನುಡಿದ: "ಗುರುತು ಯಾತಕ್ಕ ಬೇಕು ಅದಕ್ಕ? ಪೋಲೀಸ್ ಖಾತೆಯೊಳಗ ಇರುವವರಿಗೆ ಇಂಥಾ ಸುದ್ದಿ ಎಲ್ಲಾ ತಾನೇ ತಿಳೀತಾವ. ಅದರೊಳಗೂ ದೇಶಭಕ್ತರ ಮನೀಮ್ಯಾಲ ಯಾವಾಗಲೂ ನೂರು ಕಣ್ಣು ಇಟ್ಟಿರತೀವಿ ನಾವು!"

"ನೂರು ಕಿವೀನೂ ಬಿಟ್ಟಿರತೀರಿ!" ಎಂದು ರಂಗಣ್ಣ ದೇಶಾವರಿ ನಗು ಬೀರಿದ.

"ಆಕೆ ಅದೇ ಹುಡುಗಿ—ಶಾಮರಾಯರ ಮಗಳೇ ಆಕೆ—ಅಂತ ಹ್ಯಾಂಗ ಹೇಳುತೀರಿ? ಬ್ಯಾರೆ ಯಾರಾದರೂ ಯಾಕಿರಬಾರದು?" ಎಂದು ದೇಸಾಯರು ಪ್ರಶ್ನೆ ಮಾಡಿದರು.

"ಆ ಲಂಬಾಣಿ ಹೇಳಿದ ರೂಪ, ಚಹರೆಪಟ್ಟಿಯ ಮ್ಯಾಲಿಂದ ಅವಳೇ ಇರಬೇಕು ಅಂತ ಖಾತ್ರಿ ಆಯ್ತು ನನಗೆ. ಅಲ್ಲದೆ, ಮೊನ್ನೆ ನಾ ಬೆಳಗಾವಿಗೆ ಹೋದಾಗ ಅವರ ಮನೆಗೆ ಹೋಗಿದ್ದೆ. ಆಕೆ ಊರು ಬಿಟ್ಟದಾಳ ಅನ್ನೂದು ತಿಳೀತು. ಎಲ್ಲಿಗೆ ಹೋಗಿದ್ದಾಳೆ ಅನ್ನೂದು ಯಾರಿಗೂ ಗೊತ್ತಿರಲಿಲ್ಲ. ಆಫೀಸಿಗೆ ಬಂದು ಪುಣೆ ಮುಂಬಯಿಗಳಿಗೆಲ್ಲಾ ಫೋನ್ ಮಾಡಿದೆ. ಅಲ್ಲೂ ಆಕೆ ಇರಲಿಲ್ಲ. ಇನ್ನೆಲ್ಲಿಗೆ ಹೋಗುತಾಳೆ ಹಾಂಗಾದರೆ? ಮೊದಲಿಂದಲೂ ಚಳವಳಿಯೊಳಗ ಬೀಳಬೇಕು ಅಂತ ಹಟ ಹಿಡಿದಿದ್ದಳು. ವಿಶ್ವನಾಥ, ಶೇಖರ ಎಲ್ಲರ ಕೂಡ ಗುರುತೂ ಇತ್ತು. ಇಲ್ಲಿಗೇ ಬಂದು ಇವರನ್ನು ಕೂಡಿಕೊಂಡಿರಬೇಕು ಅಂತ ನಂಬಿಕೆ ಆಯ್ತು."

"ಸರಿ. ಈಗ ಎಲ್ಲಿಗೆ ಹೋಗಿರಬಹುದು ಅವರು?"

"ಇನ್ನೂ ಗೊತ್ತಾಗಿಲ್ಲ. ನಮ್ಮ ಪೋಲೀಸರು ತಪಾಸು ನಡಸಿದ್ದಾರ. ನಾನೇ ಸ್ವತಃ ಬೇರೆ ವೇಶ ಹಾಕಿಕೊಂಡು ಅವರ ಪತ್ತೆ ಹಚ್ಚಬೇಕಂತ

ಮಾಡಿದ್ದೀನಿ. ಉಪಾಯ ಮಾಡದಿದ್ದರ ಅವರು ಸಿಗುವದಿಲ್ಲ ಅನ್ನೋದು ಖಾತ್ರಿ ಆಗ್ಯೆತಿ ನನಗೆ."

"ಎಲ್ಲಾ ಶೇಖರನ ಬುದ್ಧಿವಂತಿಕೆ ಇದು. ಅವನ್ನೊಬ್ಬನ್ನ ಹಿಡಿದು ಬಿಟ್ಟರ ಈ ಗುಂಪಿನ ಜುಟ್ಟಾನೇ ಹಿಡಿದಂಗಾದೀತು. ಮತ್ತೆ ಈ ಕಡೆಗೇ ಬಂದಾನಂತ ಅವ. ಹಿಡಿದರೆ ಈಗಲೇ ಹಿಡೀಬೇಕು ಸಾಹೇಬರೇ. ಮುಂದೆ ತಪ್ಪಿಸಿಕೊಂಡ ಅಂದರ ನಿಮಗ ಸಿಕ್ಕಲಿಕ್ಕಿಲ್ಲ ಅವ."

"ಕಲ್ಲಾಪುರಕ್ಕ ಬಂದಿಲ್ಲ ಹೌದಲ್ಲೋ?"

"ಹ್ಯಾಂಗ ಗೊತ್ತಾಗಬೇಕು? ರಾತ್ರಿ ಬಂದು ರಾತ್ರೀನಃ ಹೋದರ?"

"ಏನಾದರೂ ಉಪಾಯ ಮಾಡಬೇಕು ಇವರನ್ನ ಹಿಡೀಲಿಕ್ಕೆ" ಎಂದು ನುಡಿದು ಕೀರ್ತಿನಾಥ ಯೋಚಿಸತೊಡಗಿದ. ಬಹಳ ಹೊತ್ತು ಮೂವರೂ ಚರ್ಚೆ ಮಾಡುತ್ತಲೆ ಕುಳಿತಿದ್ದರು.

೨೪

ಕಲ್ಲಾಪುರದಿಂದ ಉತ್ತರಕ್ಕೆ ಹತ್ತು ಮೈಲುಗಳ ಮೇಲೆ ಒಂದು ಹಳ್ಳಿಯ ಹತ್ತಿರ ಶೇಖರ ತನ್ನ ಗುಂಪಿನವರೊಂದಿಗೆ ಬಿಡಾರ ಹೂಡಿದ್ದ. ಕಬ್ಬಿನ ತೋಟ ವೊಂದರಲ್ಲಿ ರಾತ್ರಿಯನ್ನೆಲ್ಲ ಕಳೆದುದಾಗಿದ್ದಿತು. ಹಗಲನ್ನೂ ಅಲ್ಲಿಯೇ ಕಳೆದು, ರಾತ್ರಿಯಾದ ಮೇಲೆ ಮುಂದೆ ಪಯಣ ಬೆಳೆಸಬೇಕೆಂದು ನಿರ್ಧರಿಸಲಾಗಿದ್ದಿತು.

ಆ ತೋಟದ ಒಡೆಯನಾದ ಸೂರನಗೌಡ ಆ ಹಳ್ಳಿಯ ಪ್ರತಿಷ್ಠಿತ ವ್ಯಕ್ತಿ; ಸುತ್ತುಮುತ್ತಲಿನ ಇಪ್ಪತ್ತು ಹಳ್ಳಿಗಳಲ್ಲೆಲ್ಲ ದೊಡ್ಡ ಧನಿಕನೆಂದು ಹೆಸರು ಗಳಿಸಿದ್ದ. ದೊಡ್ಡ ಕಮತ, ದೊಡ್ಡ ಆಸ್ತಿ, ದೊಡ್ಡ ಪರಿವಾರ. ಮೂವತ್ತು ನಲವತ್ತು ಸಾವಿರ ಬೆಲೆ ಬಾಳುವ ತೋಟಗಳೇ ಅವನವಾಗಿದ್ದವು. ಕಬ್ಬಿನ ಬೆಳೆ, ಬಾಳೆ ಗಿಡ ಎಲ್ಲವನ್ನೂ ಬೆಳೆದಿದ್ದ. ಅವನಿಗೂ ಶೇಖರನಿಗೂ ಮೊದಲಿನಿಂದಲೂ ಪರಿಚಯ. ಅಂತೆಯೆ, ಅಂದು ಅವರೆಲ್ಲ ಅಲ್ಲಿ ತಂಗಿದ್ದರು.

ಬೆಳಗಿನಲ್ಲೆದ್ದು ಶೇಖರ ಬಾವಿಯಲ್ಲಿ ಈಸಾಡುತ್ತಿದ್ದ ಹಾಗೆ ಸೂರನಗೌಡ ಅವನನ್ನು ಕಾಣಲು ಬಂದ. ಆತನಿಗೆ ನಲವತ್ತು ನಲವತ್ತೈದು ವರ್ಷ ವಯಸ್ಸಾಗಿರಬಹುದು. ಕಪ್ಪುಬಣ್ಣದ್ದಾದರೂ ಧಷ್ಟಪುಷ್ಟವಾದ ಗಂಡು ಶರೀರ ತುಂಬಾ ಪ್ರಭಾವಕಾರಿಯಾಗಿ ಕಾಣುವುದು. ಗೌಡ ರೇಷ್ಮೆಯ ಅಂಗಿಯನ್ನು ತೊಟ್ಟು,

ಅದರ ಮೇಲೆ ಉಣ್ಣೆಯ ಕೋಟು ತೊಟ್ಟುಕೊಂಡಿದ್ದ. ತಲೆಯ ಮೇಲೆ ರೇಷ್ಮೆಯ ರುಮಾಲನ್ನು ಠೀವಿಯಿಂದ ಸುತ್ತಿಕೊಂಡಿದ್ದ. ಅವನು ಮಾತನಾಡಲು ಬಾಯಿ ತೆರೆದಾಗಲೆಲ್ಲ ತನ್ನ ಅಸ್ತಿತ್ವವನ್ನು ಸಾರಲೆಂದೋ ಏನೋ ಅವನ ಹುರಿಗೂಡಿಸಿದ ಮೀಸೆ ಸಡಗರದಿಂದ ನಾಟ್ಯವಾಡುವುದು. ಅವನು ಕತ್ತು ಹಾಕಿದಾಗಲೆಲ್ಲ ಬಲಗಿವಿಯಲ್ಲಿದ್ದ ಮುತ್ತಿನ ಬಾವುಲಿ ಹಾಗೆ ಹೀಗೆ ಹೋಯ್ದಾಡುವುದು. ಆತ ನಡೆದುಬರುವುದೂ ಒಂದು ಠೀವಿಯಲ್ಲೇ. ಜಗತ್ತನ್ನೇ ಪಾದಾಕ್ರಾಂತಗೊಳಿಸಲು ಹೊರಟ ರಣಧುರಂಧರನಂತೆ ಜವಾರಿ ಮೆಟ್ಟುಗಳನ್ನು ಶಿಸ್ತಿನಿಂದ ಎತ್ತಿ ಎತ್ತಿ ಇಡುತ್ತ ಬರುವುದೂ ಅವನದೊಂದು ವೈಶಿಷ್ಟ್ಯವೇ ಆಗಿದ್ದಿತು. ಅವನು ಬಲಗೈಯಲ್ಲಿ ಹಿಡಿಯುತ್ತಿದ್ದ ಬಣ್ಣದ ಬಡಿಗೆಯೂ ಅಷ್ಟೆ. ಅಂಥ ಬಡಿಗೆ ಆ ಊರಿನಲ್ಲಾಗಲಿ, ಸುತ್ತುಮುತ್ತಲಿನ ಇಪ್ಪತ್ತು ಹಳ್ಳಿಗಳಲ್ಲಾಗಲಿ ಯಾರ ಹತ್ತಿರವೂ ಇರಲಿಲ್ಲ. ಅದನ್ನು ಕೈಯಲ್ಲಿ ಕುಣಿಸುತ್ತ ಸೂರನಗೌಡ ಸಡಗರದಿಂದ ಹೊರಟನೆಂದರೆ ಎಂಥವರಾದರೂ ದಂಗುಬಡಿದವರಂತೆ ನಿಂತು ನೋಡುವಂತಾಗುತ್ತಿತ್ತು. ಗೌಡನ ವ್ಯಕ್ತಿತ್ವ ಅಂಥದು !

ಸೂರನಗೌಡ ಬಾವಿಯ ಬಳಿ ಬಂದು, ಮೋಟೆಯ ಕಟ್ಟೆಯ ಮೇಲೆ ನಿಂತುಕೊಂಡು, ಕೆಳಗಡೆ ಉತ್ಸಾಹದಿಂದ ಈಸಾಡುತ್ತಿದ್ದ ಶೇಖರನನ್ನು ದಿಟ್ಟಿಸಿ ನೋಡುತ್ತಿದ್ದ. " ಸಾಕು ಏಳಪಾ, ಹಸಿವಾಗಿಲ್ಲೇನು ? ನ್ಯಾಹರೆ ತರಿಸಿದ್ದೀನಿ. ಏಳು " ಎಂದು ಕೂಗಿದ.

ಶೇಖರ ಈಸು ನಿಲ್ಲಿಸಿ ಮೆಟ್ಟಲುಗಳ ಮೇಲೆ ಬಂದ ಮೈಯನ್ನೊರಸಿಕೊಳ್ಳತೊಡಗಿದ. ಅವನ ಹುರಿಕಟ್ಟಾದ ತುಂಬು ಶರೀರವನ್ನೆ ನೆಟ್ಟದೃಷ್ಟಿಯಿಂದ ನಿರುಕಿಸುತ್ತ ಗೌಡ ಮೀಸೆ ತಿರುವಿಕೊಳ್ಳುತ್ತ ಮೇಲೆ ನಿಂತಿದ್ದ.

ಬಟ್ಟೆ ಹಾಕಿಕೊಂಡು ಶೇಖರ ಮೇಲಕ್ಕೆ ಬಂದು ತೋಟದ ಗುಡಿಸಲಲ್ಲಿ ಪ್ರವೇಶಿಸಿದ. ಗೌಡರ ಮನೆಯಿಂದ ಬೆಳಗಿನ ಉಪಹಾರಕ್ಕೆ ರೊಟ್ಟಿ, ಖಾರದ ಚುರಮುರಿ, ಚಹ ಎಲ್ಲವೂ ಸಿದ್ಧವಾಗಿ ಬಂದಿತ್ತು. " ನೀವೂ ಬರ್ರಿ ಗೌಡರೇ, ಎಲ್ಲರೂ ಕೂಡೇ ತಕ್ಕೊಳ್ಳೋಣ " ಎಂದ ಶೇಖರ, ಅವರೊಂದಿಗೆ ಕುಳಿತುಕೊಂಡು.

ಗುಂಪಿನವರೆಲ್ಲ ಉಪಾಹಾರಕ್ಕಾರಂಭಿಸಿದ ಮೇಲೆ ಗೌಡ ಸಹಜವಾಗಿ ಮಾತು ತೆಗೆದ. " ಈಚೀಚೆಗೆ ಪೋಲೀಸ್ ಬಂದೋಬಸ್ತಿ ಬಹಳ ಆಗೈತಪ್ಪ ಶೇಖರಣ್ಣ. ಬೆಳಗಾಯ್ತು ಅಂದರ ಲಾರಿಗಳ ಓಡಾಟ ಸುರು ಆಗಿರತೈತಿ...."

"ಇನ್ನೇನು ಕೆಲಸ ಮಾವ? ನಮ್ಮಂಥವರನ್ನ ಹಿಡಿಯುತ್ತ ತಿರುಗೋಪೇ ಅಲ್ಲೇನು?" ಎಂದ ಶೇಖರ. ಸೂರನಗೌಡನನ್ನು ಆತನು ಮಾವ ಎಂದು ಸಂಬೋಧಿಸುವುದೇ ವಾಡಿಕೆಯಾಗಿದ್ದಿತು. ಗೌಡನ ಮಗಳು ನೀಲವ್ವನನ್ನು ಶೇಖರನಿಗೆ ಕೊಡುವ ಮಾತು ಬೇರೆ ಒಮ್ಮೆ ಬಂದಿದ್ದಿತು. ಆದರೂ ಅದರಿಂದಾಗಿ ಆತ ಶೇಖರನಿಗೆ ಮಾವನಾಗಿರಲಿಲ್ಲ. ಆ ಪ್ರಸ್ತಾಪ ಬರುವುದಕ್ಕೆ ಮೊದಲಿನಿಂದಲೂ ಶೇಖರ ಸಲುಗೆಯಿಂದ ಗೌಡನನ್ನು 'ಮಾವ' ಎಂದು ಕರೆಯುತ್ತಿದ್ದ.

"ಪೋಲೀಸರ ಬಂದೋಬಸ್ತಿನಿಂದ ನಮಗ ಜೀವನಃ ಬ್ಯಾಡಾಗುವ ಹಾಂಗ ಆಗ್ಯೆತಿ ನೋಡು, ಶೇಕ್ರಣ್ಣ. ಅವರು ಬಂದರಂದರ ಎಲ್ಲಾ ಸರಬರಾಜು ಮಾಡಬೇಕು. ದಿನಾ ಮೂರು ನಾಲ್ಕು ಮಂದಿ ಇದ್ದಃ ಇರ್ತಾರ. ಇವರಿಗೆಲ್ಲಾ ಎಷ್ಟಂತ ಮಾಡಬೇಕು? ಮಾಡಬೇಕಂದರೂ ತ್ರಾಸ, ಮಾಡದಿದ್ದರೂ ತ್ರಾಸ. ಅಂತೂ ನಮ್ಮಂಥವರ ಗತಿ ಹೇಳಾಕ ಬ್ಯಾಡ....ಅದರಾಗ ಮೊನ್ನೆ, ಇಪ್ಪತ್ತಾರನೇ ತಾರೀಖಿನ ದಿನಾ ಈ ಸೀಮೆಯೊಳಗಿನ ಚಾವಡಿ ಸುಟ್ಟಾಗಿಂದ, ಹದ್ದು ಎರಗಿದಂಗ ಎರಗಿದಾರ ಪೋಲೀಸರು."

"ನಮ್ಮ ಸ್ವಾತಂತ್ರ್ಯದಿನಾಚರಣೆಯ ಕಾರ್ಯಕ್ರಮ ಮಾವ ಅದು. ಒಂದೇ ದಿನದೊಳಗ ಇಪ್ಪತ್ತಾರು ಊರಿನ ಚಾವಡಿ ಎಲ್ಲಾ ಭಸ್ಮ ಆಯಿತು!"

"ಚಲೋ ಕೆಲಸ ಮಾಡಿದಿರಿ. ನೀವೆಲ್ಲಾ ಬಹದ್ದರ ಮಂದಿ. ಆಗಲಿ, ಮಧ್ಯಾಹ್ನಕ್ಕ ಮನಿಗೇ ಬರ್ರಿ ಊಟಕ್ಕ" ಎಂದು ನುಡಿದು ಸೂರನಗೌಡ ಎದ್ದು ನಿಂತ.

"ಮನೀಗ್ಯಾಕ ಮಾವ? ಇಲ್ಲಿಗೇ ಕಳಿಸಿಬಿಡಲ್ಲ ಊಟಾ?"

"ಕಳಿಸತಿದ್ದೆ. ಆದರ ನಮ್ಮ ಮುದುಕಿಗೆ ಗಾಂಧೀ ಮಂದಿ ಅಂದರ ಬಹಳ ಪ್ರೀತಿ. ನೀವು ಬಂದಿರೋದು ಗೊತ್ತಾದ ಕೂಡಲೆ ಇವೊತ್ತು ಹೋಳಿಗೆ ಮಾಡ್ತೀನಿ ಅಂದಳು. ಮನಿ, ಮಕ್ಕಳು ಬಿಟ್ಟು ಎಷ್ಟು ದಿನದಿಂದ ತಿರಗ್ತಾ ಇದ್ದಾರೋ, ಒಮ್ಮೆಯಾದರೂ ಸಿಹಿ ತಿನ್ನಲಿ ಪಾಪ—ಅಂತ ಬೆಳಗಿನಾಗ ಎದ್ದು ಹೋಳಿಗೀ ಮಾಡಿಸಿದ್ದಾಳ. ಎಲ್ಲರೂ ಮನಿಗೇ ಬಂದು ಆಕೆಯ ಕಣ್ಣ ಮುಂದೆ ಉಂಡರ ಚಂದ. ಅವಳಿಗೂ ಆನಂದ ಆದೀತು...."

"ಆಗಲಿ ಗೌಡರೆ, ಅದರಾಗೇನಂತೆ! ಬರ್ತೀವಿ ನಡೀರಿ" ಎಂದು ಗುಂಪಿನವರಲ್ಲೊಬ್ಬ ನುಡಿದ.

"ಬರ್ರಿ ಹಾಂಗಾದರೆ, ಬಿಸಿಲು ಏರೂದರೊಳಗಾಗಿ ಎಲ್ಲಾ ಬಂದುಬಿಡಿರಿ" ಎಂದು ಹೇಳಿ ಗೌಡ ಹೊರಟುಹೋದ.

ಅವರ ಮನೆಗೆ ಹೋಗುವುದೇ, ಬೇಡವೆ ಎಂದು ಶೇಖರ ಯೋಚನೆಗೊಳಗಾದ. ಪೋಲೀಸರ ತಿರುಗಾಟ ಬೇರೆ ಎಡೆಬಿಡದೆ ನಡೆದಿದೆ. ಯಾವಾಗ ಲಾರಿಗಳಲ್ಲಿ ಪೋಲೀಸ್ ಪಾರ್ಟಿ ಬಂದುಬಿಟ್ಟೀತೆಂಬ ಬಗ್ಗೆ ನಿಯಮವೇನೂ ಇಲ್ಲ. ಇಂಥ ಸಂದರ್ಭದಲ್ಲಿ ಹಗಲುಹೊತ್ತಿನಲ್ಲಿ ಇಪ್ಪತ್ತೆರಡು ಜನ ಸೇರಿ ಗೌಡರ ಮನೆಗೆ ಊಟಕ್ಕೆ ಹೋಗುವುದು ಜಾಣತನದ ಕೆಲಸವಂತೂ ಆಗಲಾರದು ಎಂದು ಅವನ ತೀಕ್ಷ್ಣಬುದ್ಧಿ ವಾದಿಸಿತು. ಹೋಳಿಗೆ ಊಟ ಹೊಡೆಯುವ ಆಸೆಯಿಂದ ಅಲ್ಲಿಗೆ ಹೋಗಿ ಪೋಲೀಸರ ಕೈಗೆ ಸಿಕ್ಕುಬಿದ್ದರೆ ಹೇಗೆ?

"ಊರೊಳಗ ಹೋಗೂದು ನೆಟ್ಟಗಲ್ಲವೇನು, ಮಾಸ್ತರ್?" ಎಂದು ಕೇಳಿದ.

"ಗಂಡಾಂತರದ್ದು ಅನ್ನೋದು ನಿಜ. ಆದರೂ ಎಷ್ಟೋ ಗಂಡಾಂತರ ಎದುರಿಸಿದ ನಾವು ಇದೊಂದಕ್ಕೆ ಹಿಂದಾಗುವದೆಂದರೇನು ಶೇಕಣ್ಣ! ಅಲ್ಲದೆ ಆ ಮುದುಕಿ ಬ್ಯಾರೆ ಬಹಳ ಪ್ರೀತಿಯಿಂದ ಅಡಿಗೆ ಮಾಡಿಸಿರಬೇಕು. ನಾವು ಹೋಗದಿದ್ದರ ಅದಕ್ಕ ನೋವಾಗಬಹುದು...."

ಹೊರಡುವ ಸಮಯ ಸಮೀಪಿಸಿದರೂ ಶೇಖರ ಯಾವೊಂದು ನಿರ್ಧಾರಕ್ಕೆ ಬಂದಿರಲಿಲ್ಲ. ಹೋಗಬೇಕೋ, ಬೇಡವೊ ಎಂದು ಯೋಚಿಸುತ್ತಾ ಬಾವಿಯ ಕಟ್ಟೆಯ ಮೇಲೆ ಕುಳಿತಿದ್ದ. ಬಿಸಿಲು ಬಲಿಯುತ್ತ ಬಂದ ಹಾಗೆ ಗುಂಪಿನವರೆಲ್ಲಾ ಹೊರಡಲು ಸಿದ್ಧರಾದರು. "ಇನ್ನು ಹೊರಡೋಣವೇನು ಶೇಕ್ರಣ್ಣ?" ಎಂದು ಮಾಸ್ತರರು ಕೇಳಿದರು.

ಇನ್ನು ಅವರಿಗೆ ಬೇಡ ಎನ್ನುವುದು ಒಳ್ಳೆಯದಲ್ಲವೆನ್ನಿಸಿದುದರಿಂದ ಆತ— "ನಡೀರಿ ಹಾಂಗಾದರ. ನಾ ಬರ್ತೀನಿ ಹಿಂದೆ ಹಿಂದೆ" ಎಂದು ಹೇಳಿದ. ಗುಂಪಿನವರು ಅನುಮಾನಿಸುತ್ತಲೇ ಹೊರಟುಹೋದರು. ಆತ ಕುಳಿತ ಸ್ಥಳದಲ್ಲಿಯೆ ಕುಳಿತಿದ್ದ. ಆಗಸ್ಟ್ ಹತ್ತರಿಂದ ಇದುವರೆಗೆ ನಡೆದ ಘಟನೆಗಳೆಲ್ಲ ಅವನ

ಬಗೆಗಣ್ಣಿನೆದುರಿಗೆ ಸುಳಿದುಹೋಗುತ್ತಿದ್ದುವು. ಇನ್ನು ಮುಂದೆ ನಡೆಯಬೇಕಾದ ಘಟನೆಗಳ ಕಲ್ಪನಾಚಿತ್ರಗಳೂ ಮೂಡಿ ಮಾಯವಾಗುತ್ತಿದ್ದುವು.

ಅಲ್ಲಿ ಆ ಲಂಬಾಣಿ ತಾಂಡೆಯಲ್ಲಿ, ಲಂಬಾಣಿಗರ ವೇಷ ಧರಿಸಿಕೊಂಡು ಕರಪತ್ರಗಳನ್ನು ಹೊರಡಿಸಲು ದುಡಿಯುತ್ತಿದ್ದ ಹೇಮಾ ವಿಶ್ವನಾಥರ ಮೂರ್ತಿಗಳು ಅವನ ಮನದೆದುರಿಗೆ ಬಂದು ನಿಂತಂತಾಯಿತು. ಈಗ ಅವರು ಏನನ್ನು ಮಾಡುತ್ತಿರುವರೊ, ಕೆಲದಿನಗಳಿಂದ ಯಾವ ಸುದ್ದಿಯೂ ತಿಳಿಯಲಿಲ್ಲ. ತಾನಿಲ್ಲಿ ಇರುವ ಸುದ್ದಿಯೂ ಅವರಿಗೆ ತಿಳಿಯಲಾರದು....

ಕಂದಾಯ ವಸೂಲಿ ಕೇಂದ್ರವನ್ನು ಲೂಟಿಮಾಡಿ ತಾವು ಹೊರಟು ಬಂದ ತರುವಾಯ ಆ ವಿಭಾಗದಲ್ಲಿ ಸಿ. ಐ. ಡಿ. ಗಳ ಅಲೆದಾಟ ಹೆಚ್ಚಿದ್ದ ಸುದ್ದಿ ಬಂದಿತ್ತು. ಆ ಕೀರ್ತಿನಾಥ ಇನಸ್ಪೆಕ್ಟರ್ ಬೇರೆ ಅಲ್ಲೇ ಕ್ಯಾಂಪ್ ಮಾಡಿರುವರಂತೆ. ಲಂಬಾಣಿ ತಾಂಡೆಯನ್ನು ಅವರು ಪತ್ತೆ ಮಾಡಿರಲಿಕ್ಕಿಲ್ಲವಷ್ಟೆ! ನಮ್ಮ ಗುಂಪಿನ ಆ ಎರಡು ರತ್ನಗಳು ವೈರಿಗಳ ಕೈಗೆ ಸಿಕ್ಕಿರಲಿಲ್ಲವಷ್ಟೆ?

ಲಂಬಾಣಿ ತಾಂಡೆಯ ಹಿಂದೆ ಹಿಂದೆ ಅವನಿಗೆ ಕಲ್ಲಾಪುರದ ತನ್ನ ಮನೆಯ ನೆನಪಾಯಿತು. ಮೊನ್ನೆ ರಾತ್ರಿ ಮನೆಗೆ ಹೋದಾಗ ಅಣ್ಣ ಕಣ್ಣಿನಲ್ಲಿ ನೀರು ತಂದಿದ್ದ. ತಾಯಿ ಮುಖ ಕೆಳಕ್ಕೆ ಮಾಡಿಕೊಂಡು ಕುಳಿತಿದ್ದಳು. ಹೊಲ ಬಿಡಿಸುವ ಸಂಕಟ, ಲಾವಣಿಯ ಗಂಡಾಂತರ ಎಲ್ಲವೂ ಸ್ವಾಮಿಗಳ ಕೃಪೆಯಿಂದ ತಪ್ಪಿಹೋಗಿದ್ದರೂ ಈ ವರ್ಷ ಬೆಳೆಯೇ ಬರದೆ ಹೋದುದರಿಂದ ಕುಟುಂಬ ಅನ್ನಾಭಾವವನ್ನೆದುರಿಸಬೇಕಾಗಿ ಬಂದಿತ್ತು. ಎಲ್ಲ ಬಡ ಕುಟುಂಬಗಳಂತೆ ಅದೂ ನಾನಾತರದ ಸಂಕಟಗಳಿಗೆ ಗುರಿಯಾಗಿತ್ತು. ಬೆಳೆದಿದ್ದ ಅಲ್ಪಸ್ವಲ್ಪ ಧಾನ್ಯದಲ್ಲಿ ಬಹುಭಾಗವನ್ನು ಸರಕಾರವೇ ಒತ್ತಾಯದಿಂದ ತೆಗೆದುಕೊಂಡುಹೋಗಿತ್ತು. ಸಂತೆಯೂರಿನಲ್ಲಿ ಕಾಳುಕಡಿ ಸಿಗುವುದೂ ದುಸ್ತರವಾಗಿತ್ತು. ಒಂದಕ್ಕೆ ನಾಲ್ಕರಷ್ಟು ಹಣ ಕೊಟ್ಟು ಕೊಳ್ಳುವ ಕಾಲ ಬಂದಿತ್ತು.

ಅತ್ತಿಗೆ ಗೌರವ್ವ ಬೇರೆ ಜ್ವರದಿಂದ ಹಾಸಿಗೆ ಹಿಡಿದಿದ್ದಳು. ಎಂಥ ಜ್ವರವೋ ಏನೊ, ಹದಿನೈದು ದಿನಗಳಿಂದ ಬಿಟ್ಟೂಬಿಡದೆ ಬಾಧಿಸುತ್ತಿತ್ತು. ಆಕೆಗೆ ಔಷಧ ಕೊಡಿಸಲು ಗತಿಯಿರಲಿಲ್ಲ. ಬಿದ್ದುಕೊಂಡವಳು ಹಾಗೇ ಬಿದ್ದುಕೊಂಡಿದ್ದಳು. ಮನೆಗೆಲಸಗಳನ್ನೆಲ್ಲ ಮುದುಕಿ ತಾಯಿಯೊಬ್ಬಳೇ ಮಾಡಬೇಕಾಗುತ್ತಿತ್ತು.

ಅದರೊಂದಿಗೆ ಹೊಲದ ಕೆಲಸ. ಲಿಂಗಣ್ಣ ತುಂಬ ಇಳಿದುಹೋಗಿದ್ದ. ಚಿಂತೆಯು ಬಯ್ರಿಗೆ ಅವನ ಎದೆಯನ್ನು ಕೊರೆಯುತ್ತಿತ್ತು.

ಇಂಥ ಕಷ್ಟಗಳನ್ನೆಲ್ಲ ಎದುರಿಸಬೇಕಾಗಿ ಬಂದರೂ ತಾಯಿಯ ಧೈರ್ಯ ಅಳಿದಿರಲಿಲ್ಲ. ಇದ್ದುದರಲ್ಲೇ ಅದೊಂದು ಸಮಾಧಾನದ ವಿಷಯವಾಗಿತ್ತು. ಮನೆತನಕ್ಕೊದಗಿದ ಈ ಸಂಕಟಕಾಲದಲ್ಲಿ ಬೆಳೆದ ಮಗನಾದ ತಾನು ಎಲ್ಲಾದರೂ ದುಡಿದು ಸಂಸಾರದ ಗಾಡಿಗೆ ಹೆಗಲು ಕೊಡಬೇಕಾದುದು ಅಗತ್ಯವಾಗಿತ್ತು. ಅದರ ಅರಿವು ತನಗೂ ಇಲ್ಲದಿಲ್ಲ. ಆದರೇನು ಮಾಡುವುದು? ಈಗ ಹೋರಾಟವನ್ನು ಅರ್ಧಕ್ಕೇ ತೊರೆದು ತಾನು ಹಳ್ಳಿಗೆ ಹೋಗುವುದು ಸಾಧ್ಯವಿಲ್ಲ. ಹೋದರೂ ತಾನು ಅಲ್ಲಿ ಉಳಿಯುವಂತಿಲ್ಲ. ಒಡನೆಯೆ ಪೋಲೀಸರು ಬಂದು ಹಿಡಿದುಕೊಂಡು ಹೋಗುವರು. ಆ ಮಾತು ಬೇರೆ. ತನಗಿನ್ನೂ ಮದುವೆಯಾಗಿಲ್ಲ. ಅದೂ ಒಂದು ಅನುಕೂಲವೇ ಆಯಿತು. ಇಲ್ಲವಾದರೆ ಇನ್ನೊಂದು ಹೊಟ್ಟೆಗೆ ಕೂಳು ಹಾಕುವ ಹೊಣೆಗಾರಿಕೆಯೂ ಅಣ್ಣನ ತಲೆಯ ಮೇಲೇ ಬೀಳುತ್ತಿತ್ತು!

ಮದುವೆಯ ವಿಚಾರ ಬರುತ್ತಲೂ ಶೇಖರನಿಗೆ ಕೊಂಚ ನಗು ಬಂದಿತು. ಮದುವೆ! ತನ್ನ ತಾಯಿ, ತನ್ನ ಅಣ್ಣ, ತನ್ನ ಅತ್ತಿಗೆ ಎಲ್ಲರೂ ತನ್ನನ್ನು ಮದುವೆ ಮಾಡಿಕೊಳ್ಳಲು ಒತ್ತಾಯಪಡಿಸುತ್ತಿದ್ದರು, ಅನೇಕ ವರ್ಷಗಳಿಂದ. ಆದರೆ ತನಗೇ ಆ ಕಡೆಗೆ ಮನಸ್ಸು ಒಲಿದಿರಲಿಲ್ಲ. ಮನೆತನದ ಆರ್ಥಿಕ ದುಃಸ್ಥಿತಿಯೊಂದು ಕಾರಣವಾದರೆ, ಸ್ವಾತಂತ್ರ್ಯದ ಹೋರಾಟ ಇನ್ನೂ ಮುಗಿಯದಿರುವುದು ಇನ್ನೊಂದು ಕಾರಣವಾಗಿದ್ದಿತು. ಇಂದಿಲ್ಲ ನಾಳೆ ಸ್ವಾತಂತ್ರ್ಯದ ಕೊನೆಯ ಸಂಗ್ರಾಮಕ್ಕಾರಂಭವಾಗುವುದೆಂದು ಎಂದಿನಿಂದಲೂ ಆತ ನಂಬಿಕೊಂಡಿದ್ದ. ಆ ಸಂಗ್ರಾಮದಲ್ಲಿ ತಾನು ಅಗತ್ಯವಾಗಿಯೂ ಭಾಗವಹಿಸಬೇಕೆಂದು ನಿರ್ಧರಿಸಿದ್ದ. ಆಗ ತನ್ನ ಮಟ್ಟಿಗೆ ತಾನೊಬ್ಬನಾದರೂ ಸ್ವತಂತ್ರವಾಗಿದ್ದರೆ ಅನುಕೂಲವಾದೀತು, ಈಗಲೆ ಮದುವೆಯಾಗಿ ಸಂಸಾರದ ಬಲೆಯಲ್ಲಿ ಸಿಲುಕಿಕೊಳ್ಳಬಾರದು ಎಂಬ ಯೋಚನೆಯಿಂದಾಗಿ ಯಾರ ಬಲವಂತಕ್ಕೂ ಆತ ಒಪ್ಪಿರಲಿಲ್ಲ.

"ಶೇಕ್ರಣ್ಣಾ...."

ಹಿಂದಿನಿಂದ ಕೇಳಿಸಿದ ಕೂಗು ಅವನನ್ನು ವಿಚಾರಗಳ ಸ್ವಪ್ನದಿಂದ

ಎಚ್ಚರಿಸಿತು. ಹೊರಳಿ ನೋಡಿದ. ಬಾವಿಯ ಬಳಿಯಲ್ಲಿದ್ದ ಗುಡಿಸಲಿನ ಬಳಿ ನಿಂತುಕೊಂಡು ಹದಿನೈದು ಹದಿನಾರು ವರ್ಷ ವಯಸ್ಸಿನ ಹುಡುಗಿಯೊಬ್ಬಳು ಅವನನ್ನು ನಿರುಕಿಸುತ್ತ ನಿಂತಿದ್ದಳು.

ಶೇಖರ ಎದ್ದು ನಿಂತು "ಏನವ್ವಾ, ನೀನಾರು?" ಎಂದು ಕೇಳಿದ.

"ನಾನು ಗೌಡರ ಮಗಳು ನೀಲವ್ವ. ನಿನಗೊಂದು ಸುದ್ದೀ ತಿಳಿಸಾಕ ಬಂದೀನಿ. ಮೊದಲು ಇಲ್ಲಿಂದ ಹೊರಟುಬಿಡಪ್ಪ ನೀನು" ಎಂದಳಾಕೆ.

"ಯಾಕವ್ವ? ಏನಾಯ್ತು?"

"ಘಾತ ಆಯ್ತಣ್ಣ. ಮೊದಲು ಹೊರಟುಬಿಡು ಇಲ್ಲಿಂದ."

"ಮನಿಗೆ ಊಟಕ್ಕ ಕರದಾರಲ್ಲವ್ವ? ಆಗಲೆ ನಮ್ಮವರೆಲ್ಲಾ ಹೋಗಿ ದಾರ. ನಾನೂ ಈಗ ಬರ್ತಿದ್ದೆ" ಎಂದು ಶೇಖರ ವಿಸ್ಮಯದಿಂದ ಕೇಳಿದ.

"ನೀ ಹಿಂದೆ ಉಳಿದದ್ದೇ ನೆಟ್ಟಗಾಯ್ತಣ್ಣ. ದೇವರೇ ಕಾಯ್ದ. ನಮ್ಮಪ್ಪ ಸರಕಾರಕ್ಕ ಪಿತೂರಿ ಆಗಿದಾನ. ಅಲ್ಲಿ ಮನಿಯೊಳಗ ನಿಮ್ಮನ್ನ ಊಟಕ್ಕ ಕೂಡ್ರಿಸಿ ಹಿಡಿಸಬೇಕಂತ ಮಾಡಿದ್ದ. ಇಷ್ಟೊತ್ತಿಗೆ ಪೋಲೀಸರು ಊರ ಸಮೀಪಕ್ಕ ಬಂದಿದ್ದಾರು. ನೀ ಏಳು. ಸಾಮಾನು ತಕೊಂಡು ಹೊರಡು ಮೊದಲು" ಎಂದಳು ನೀಲವ್ವ.

ಶೇಖರನಿಗೆ ವಜ್ರಾಘಾತವಾದಂತಾಯಿತು. ಆ ಹುಡುಗಿಯ ಮಾತು ಗಳನ್ನು ಒಮ್ಮೆಲೆ ನಂಬುವುದಕ್ಕೂ ಆಗಲಿಲ್ಲ. ಸೂರನಗೌಡ—ತಮ್ಮೊಂದಿಗೆ ಅಷ್ಟೊಂದು ಆತ್ಮೀಯತೆಯಿಂದ ವರ್ತಿಸುವ ಸೂರನಗೌಡ—ತನ್ನಿಂದ 'ಮಾವ' ಎಂದು ಕರೆಸಿಕೊಳ್ಳುವ ಸೂರನಗೌಡ—ಇಂಥ ವಿಶ್ವಾಸಘಾತದ ಕೆಲಸಕ್ಕೆ ಕೈಹಾಕಬಲ್ಲನೆಂಬ ವಿಚಾರ ನಂಬಲಸಾಧ್ಯವಾದುದೇ ಆಗಿದ್ದಿತು. ಆದರೂ ಅವನ ಸ್ವಂತ ಮಗಳು, ಸರಲ ಮನಸ್ಸಿನ ಈ ಹಳ್ಳಿಯ ಹುಡುಗಿ ಸುಳ್ಳು ಹೇಳುವಳೆಂದು ಭಾವಿಸಲೂ ಸಾಧ್ಯವಿರಲಿಲ್ಲ. ಅವಳ ಆ ತಿಳಿಯಾದ ದೊಡ್ಡ ದೊಡ್ಡ ಕಣ್ಣುಗಳಲ್ಲಿ ಅಸತ್ಯದ ಛಾಯೆ ಕೊಂಚವೂ ಕಾಣಿಸುತ್ತಿರಲಿಲ್ಲ. ತನ್ನನ್ನು ಎಚ್ಚರಿಸುವುದ ಕ್ಕಾಗಿಯೆ ಆಕೆ ಮನೆಯನ್ನು ಬಿಟ್ಟು ಇಲ್ಲಿಗೆ ಧಾವಿಸಿ ಬಂದಿರುವಳೆಂಬುದನ್ನು ನೆನೆದುಕೊಂಡಾಗ ಅವನಿಗೆ ಎದೆ ತುಂಬಿ ಬರದಿರಲಿಲ್ಲ. ಆತ ಅವಸರವಸರವಾಗಿ ಗುಡಿಸಲಿನೊಳಸೇರಿದ. ಆಯುಧಗಳನ್ನು ಅಲ್ಲಿಗೆ ತಂದಿರಲಿಲ್ಲವಾದುದರಿಂದ ಆ ಬಗ್ಗೆ ವಿವಂಚನೆಗೊಳಗಾಗಬೇಕಾದ ಅಗತ್ಯವಿರಲಿಲ್ಲ. ಅಂಗಿಯ ಜೇಬಿನಲ್ಲಿ

ರಿವಾಲ್ವರ್ ಭದ್ರವಾಗಿತ್ತು. ಕಂಬಳಿಯನ್ನೆತ್ತಿಕೊಂಡು ಹೊರಗೆ ಬಂದ. ನೀಲವ್ವ ಇನ್ನೂ ಅಲ್ಲಿಯೆ ನಿಂತಿದ್ದಳು.

"ನಿನಗೆ ಹ್ಯಾಂಗ ತಿಳೀತವ್ವಾ ಸುದ್ದಿ ?"

"ನಿನ್ನೆ ನಮ್ಮನಿಗೆ ಯಾವನೋ ಒಬ್ಬ ಸಾಹೇಬ ಬಂದಿದ್ದ. ಅವನೂ ಅಪ್ಪ ಮಾತಾಡತಿದ್ದಾಗ ನಾನು ಪಡಸಾಲೆಯೊಳಗ ಹುಣಿಸೀಹಣ್ಣು ಸುಲೀತಿದ್ದೆ. ಪಿತೂರಿ ಆಗಿ ಹಿಡಕೊಡಬೇಕಂತ ಆ ಸಾಹೇಬ ಹೇಳಿದ. ಅಪ್ಪ ಮೊದಲು ಒಪ್ಪಲಿಲ್ಲ. ಆದರs ಆ ಸಾಹೇಬ ಏನೇನೋ ಹೇಳಿ ಹೆದರಿಸಿ ಬೆದರಿಸಿ ಒಪ್ಪಿಸಿದ. ಇವೊತ್ತು ಹಿಡೀಬೇಕಂತ ಮಸಲತ್ತು ಆಗಿತ್ತು. ನೀವು ಬಂದ ಸುದ್ದಿ ತಿಳಿದ ಗಳಿಗೆಗೇ ನಾ ಇಲ್ಲಿ ಬಂದು ತಿಳಿಸಬೇಕಂತ ಮಾಡಿದ್ದೆ. ಆದರs ಬೆಳಗಿನಾಗ ಬರಾಕಾಗಲಿಲ್ಲ. ಈಗ ತೋಟದಾಗಿನ ಬಸವಣ್ಣಾಗ ಹೋಳಿಗೆ ನೈವೇದ್ಯ ತರುವ ನೆಪಾ ಮಾಡಿ ಬಂದುಬಿಟ್ಟೆ. ತಗೋ ಈ ಹೋಳಿಗೆ. ಹಾದಿಯೊಳಗ ತಿನ್ನು" ಎಂದು ನುಡಿದು ಆಕೆ ಕೈಯಲ್ಲಿ ಹಿಡಿದಿದ್ದ ಗಂಟನ್ನು ಮುಂದೆ ಮಾಡಿದಳು.

ಶೇಖರನಿಗೆ ಅದನ್ನು ಸ್ವೀಕರಿಸಲು ಮನಸ್ಸು ಒಡಂಬಡದಾಯಿತು. ಅಲ್ಲಿ—ಸೂರನಗೌಡ ಒಡ್ಡಿದ ಬಲೆಯಲ್ಲಿ—ಸಿಕ್ಕಿಬಿದ್ದು ತನ್ನ ಇಪ್ಪತ್ತೊಂದು ಜನ ಅನುಯಾಯಿಗಳು ಪೋಲೀಸರ ಕೈವಶವಾಗುವುದರಲ್ಲಿದ್ದಾರೆ. ಈ ಭೀಕರ ಮೋಸದಿಂದ ಅವರನ್ನುಳಿಸಿಕೊಳ್ಳಲು ಯಾವ ದಾರಿಯೂ ಇಲ್ಲವೆ ?

"ನಮ್ಮ ಗುಂಪಿನವರು ಊಟಕ್ಕ ಬಂದರೇನವ್ವ ?" ಎಂದು ಕೇಳಿದ.

"ಬಂದಾರ. ನೀ ಬರೂದನ್ನs ಕಾಯುತ್ತಾ ಕೂತಾರ ?"

"ನಾ ಯಾಕೆ ಬರಲಿಲ್ಲಂತ ಕೇಳಿದನೇನು ಮಾವ ?"

"ಕೇಳಿರಬೇಕು. ನಾ ಇತ್ತ ಬರುವಾಗ ನಿನ್ನ ಕರೀಲಿಕ್ಕೆ ಯಾರನ್ನಾದರೂ ಕಳಿಸಬೇಕು ಅಂತಿದ್ದ. ಯಾರಾದರೂ ಬಂದಾರು. ನೀ ಹೊರಡಣ್ಣಾ. ಇವರ ಕೈಗೆ ಸಿಗಬ್ಯಾಡ" ಎಂದು ಕಕ್ಕುಲತೆಯಿಂದ ನುಡಿದಳು ನೀಲವ್ವ.

"ನಮ್ಮ ಮಂದೀನೆಲ್ಲಾ ಅವರ ಕೈಯಾಗ ಬಿಟ್ಟು ನಾ ಒಬ್ಬನs ಹ್ಯಾಂಗ ಹೋಗಲಿ ?"

"ಒಬ್ಬನಾದರೂ ಉಳಿದರ ದೊಡ್ಡದಲ್ಲೇನಣ್ಣ ? ನಿನ್ನ ಮ್ಯಾಲs ಅವರಿಗೆ ಕಣ್ಣು. ನಿನ್ನ ಹಿಡೀಬೇಕಂತs ಇದೆಲ್ಲಾ ಮಾಟಾ ಮಾಡ್ಯಾರ. ನಿನ್ನ ಮ್ಯಾಲ ಒಂದು ಸಾವಿರ ರೂಪಾಯಿ ಇನಾಮು ಇಟ್ಟಾರಂತ. ಹೌದೇ ಅಣ್ಣ ?"

"ಹೌದವ್ವ. ಬಹಳ ಉಪಕಾರ ಮಾಡಿದೆ ನೀ ಇಲ್ಲಿಗೆ ಬಂದು ಈ ಸುದ್ದಿ ತಿಳಿಸಿ. ಈ ಜನ್ಮದಾಗ ಎಂದೆಂದೂ ಮರೆಯೋದಿಲ್ಲ ನಿನ್ನ!"

"ಮರೆಯೋದಿಲ್ಲವೇನಣ್ಣ ?" ಎಂದು ಹರ್ಷದಿಂದ ಕೇಳಿದಳು ನೀಲವ್ವ. ಅವನ ಮಾತಿನಿಂದಾಗಿ ಅವಳ ಮುಗ್ಧ ಮುಖವೆಲ್ಲ ಸಂತಸದಿಂದ ಅರಳಿದ್ದಿತು.

"ಇಲ್ಲ, ಹ್ಯಾಂಗ ಮರೆಯಲಿ ನಿನ್ನ? ನೀ ಬಂದು ಸುದ್ದೀ ತಿಳಿಸದಿದ್ದರ ಪೋಲೀಸರ ಕೈಯಾಗ ಸಿಗಬೇಕಾಗುತಿತ್ತು. ಆಮ್ಯಾಲ ಜೇಲಿನಾಗ ಕೊಳೀ ಬೇಕಾಗುತಿತ್ತು. ಇನ್ನೂ ನಮ್ಮ ಚಳವಳಿ ಮುಗಿದಿಲ್ಲ. ಮಾಡುವ ಕೆಲಸ ಬಹಳ ಇದಾವ. ಈಗ ಮನಿಗೆ ಹೋಗಿ ಹ್ಯಾಂಗಾರ ಮಾಡಿ ನಮ್ಮ ಗುಂಪಿನವರಿಗೂ ಸುದ್ದೀ ತಿಳಿಸವ್ವ. ಅವರೂ ಪಾರಾಗಿ ಬರಬೇಕು."

"ಅದs ಕಷ್ಟ ಅಣ್ಣಾ. ಅಪ್ಪ ಅವರ ಸಂಗಡ ಕೂತಾನ. ಅವನ ಕಣ್ಣು ತಪ್ಪಿಸಿ ಹ್ಯಾಂಗ ಹೇಳೂದು ?"

"ನಾನು ಬರಲೇನು ಹಾಂಗಾದರೆ ?"

"ಛೆ. ಛೆ. ನೀನು ಊರಾಗ ಕಾಲು ಹಾಕಬ್ಯಾಡ. ಹೀಂಗs ಅಡ್ಡದಾರಿ ಹಿಡಿದು ಆ ಗುಡ್ಡ ಏರಿ ಹೊರಟುಬಿಡು. ನಾ ಮನಿಗೆ ಹೋಗಿ ಏನಾದರೂ ಮಾಡಿ ನಿಮ್ಮ ಜನರಿಗೆ ತಿಳಿಸತೀನಿ."

"ಬರ್ತೀನವ್ವಾ ಹಾಂಗಾದರs!" ಎಂದು ಶೇಖರ ಆಕೆಯನ್ನು ಕೊನೆಯ ಸಲ ಕಣ್ತುಂಬ ನೋಡಿ ಆಕೆ ಕೊಟ್ಟ ಗಂಟನ್ನು ಕೈಲಿ ಹಿಡಿದುಕೊಂಡು ಹೊರಟು ಬಿಟ್ಟ.

ಅವನ ಆಕೃತಿ ಕಣ್ಣಿನಿಂದ ಮರೆಯಾಗುವ ತನಕ ಆಕೆ ಅಲ್ಲಿಯೆ ನಿಂತುಕೊಂಡಿದ್ದಳು. ಅನಂತರ ಮೆಲ್ಲನೆ ಹಿಂದಿರುಗಿ ಮನೆಯ ಕಡೆಗೆ ಹೊರಟಳು.

ಶೇಖರ ಹಿಂದಿರುಗಿ ನೋಡಿದ್ದಲ್ಲಿ ಆಕೆ ಕಂಬನಿಗಳನ್ನು ಒರೆಸಿಕೊಳ್ಳುತ್ತ ನಿಧಾನವಾಗಿ ಅಡಿಯಿಡುತ್ತ ಹೋಗುತ್ತಿರುವುದು ಕಾಣಿಸಬಹುದಾಗಿದ್ದಿತು. ಆದರಾತ ಹೊರಳಿ ನೋಡಲಿಲ್ಲ.

ಆಕಸ್ಮಾತ್ತಾಗಿ ಅವನಿಗೆ ವಿಶ್ವನಾಥ ಮತ್ತು ಹೇಮಾವತಿಯರ ನೆನಪು ಬಂದಿತ್ತು. ಅವರೂ ಎಲ್ಲಾದರೂ ಇಂಥ ಬಲೆಗೆ ಸಿಕ್ಕಿಕೊಂಡಿರುವರೋ ಏನೊ ಎಂದು ಚಿಂತಿಸುತ್ತ ಆತ ತ್ವರೆಯಿಂದ ಅಡಿಯಿಡುತ್ತ ಸಾಗಿದ್ದ.

## ೨೫

ದ್ರೋಹಿಗಳು ಒಡ್ಡಿದ ಬಲೆಗೆ ಬೀಳಬೇಕಾದ ಸಂದರ್ಭವೇನೂ ಬಂದಿರಲಿಲ್ಲ ವಿಶ್ವನಾಥ–ಹೇಮಾವತಿಯರಿಗೆ. ಆದರೆ ಸುತ್ತುಮುತ್ತಲಿನ ಪ್ರದೇಶದಲ್ಲೆಲ್ಲ ಪೋಲೀಸರು ಹರಡಿದ್ದ ಬಲೆಯಿಂದ ಉಪಾಯವಾಗಿ ಹೊರಬಿದ್ದು ಸುರಕ್ಷಿತವಾಗಿದ್ದ ಒಂದು ಸ್ಥಳವನ್ನು ಸೇರಿಕೊಳ್ಳಬೇಕಾದ ಕಠಿನ ಪ್ರಸಂಗ ಬಂದೊದಗಿದ್ದಿತು.

ಅಂದು—ಲಂಬಾಣಿ ಹೆಣ್ಣುಮಗಳ ಬಂಧನದಿಂದಾಗಿ ಅವರಿದ್ದ ತಾಣ ಪೋಲೀಸಿನವರಿಗೆ ತಿಳಿದುಬಂದಂದಿನಿಂದ ಅವರು ಅಲ್ಲಿ ಇಲ್ಲಿ ಅಲೆಯುತ್ತಿದ್ದರು. ಮುನ್ನಾದಿನದ ರಾತ್ರಿ ಆಕೆ ಎಂದಿನಂತೆ ತಾಂಡೆಗೆ ಬರಲಿಲ್ಲವಾದ್ದರಿಂದ ಅಲ್ಲಿ ಗೊಂದಲವುಂಟಾಗಿತ್ತು. ಆಕೆಯನ್ನು ಪೋಲೀಸರು ಬಂಧಿಸಿರಬಹುದೆಂಬ ಸಂದೇಹವೂ ಹುಟ್ಟಿಕೊಂಡಿತ್ತು. ಮರುದಿನ ಬೆಳಗಿನಲ್ಲಿ ಆಕೆಯ ಗಂಡನೊಂದಿಗೆ ಹೋದ ಹುಡುಗನೊಬ್ಬ ಬಂಧನದ ಸುದ್ದಿ ನಿಜವೆಂದು ತಿಳಿಯುತ್ತಲೂ ಮೊದಲೇ ಓಡುತ್ತ ಬಂದು ಎಚ್ಚರಿಕೆ ಕೊಟ್ಟಿದ್ದರಿಂದಾಗಿ ಅವರಿಬ್ಬರೂ ಸಾಮಾನುಗಳನ್ನು ನೆಲದಲ್ಲಿ ಹೂಳಿ ಅಡಗಿಸಿಟ್ಟು ಅಲ್ಲಿಂದ ತಕ್ಷಣ ಹೊರಟುಬಿಡಬೇಕಾಗಿ ಬಂದಿತ್ತು. ಹಳ್ಳಿಯ ಒಕ್ಕಲಿಗರ ಹಾಗೆ ಬಟ್ಟೆಬರೆ ಮಾಡಿಕೊಂಡು ಅವರಿಬ್ಬರೂ ತಾಂಡೆಯನ್ನು ತೊರೆದು ಬಂದಿದ್ದರು, ದಾರಿಯಲ್ಲಿ ಕೆಲವು ಪೋಲೀಸರನ್ನೂ ಕಂಡಿದ್ದರು.

ಆದರೆ ಹೊಲದಲ್ಲಿ ದುಡಿಯುವ ರೈತರಂತೆ ತೋರುತ್ತಿದ್ದ ಇವರನ್ನು ಕಂಡು ಅವರಿಗಾವ ಸಂದೇಹವೂ ಹುಟ್ಟಿಕೊಂಡಿರಲಿಲ್ಲ. ತಮ್ಮ ದೈವವನ್ನು ಕೊಂಡಾಡುತ್ತ ಹತ್ತು ಹನ್ನೆರಡು ಮೈಲು ಹಾದಿ ತುಳಿದು ಗುಡ್ಡದ ತಪ್ಪಲನ್ನು ಸೇರಿದ್ದರು. ಹಗಲುಹೊತ್ತು ಹೊರಕ್ಕೆ ಹೊರಡುವುದೂ ಗಂಡಾಂತರದ್ದಾಗಿತ್ತು. ಹಿಂದುಸ್ಥಾನದಲ್ಲಿನ ಎಲ್ಲ ಪೋಲೀಸರೂ ಆ ಪ್ರದೇಶದಲ್ಲಿಯೆ ಬಂದು ತಿರುಗುತ್ತಿದ್ದ ಹಾಗೆ ತೋರುತ್ತಿದ್ದಿತು. ದೊಡ್ಡ ರಾಜಮಾರ್ಗದ ಹತ್ತಿರ ಸುಳಿಯುವುದಂತೂ ಸಾಹಸದ ಕೆಲಸವೇ ಆಗಿದ್ದಿತು. ಅಂತೆಯೆ, ಸಣ್ಣಪುಟ್ಟ ಕಾಲುದಾರಿಗಳನ್ನು ಹುಡುಕಿಕೊಂಡು ಜನನಿಬಿಡವಾದ ಪ್ರದೇಶಗಳೊಳಗಿನಿಂದ ಹಾಯ್ದು ಅವರು ಮುಂದುವರಿಯಬೇಕಾಗಿದ್ದಿತು.

ಆ ದಿನ ರಾತ್ರಿ ಸೊಗಲದ ಕೊಳ್ಳದಲ್ಲಿದ್ದ ಹಾಳು ಗುಡಿಯೊಂದರಲ್ಲಿ ಅವರು ತಂಗಬೇಕಾಗಿ ಬಂದಿತು. ಸುತ್ತುಮುತ್ತು ಸಮೀಪದಲ್ಲಿ ಹಳ್ಳಿಗಳಾವುವೂ ಇದ್ದ

ಹಾಗೆ ತೋರಲಿಲ್ಲ. ಇದ್ದರೂ ಈ ಕಾಲದಲ್ಲಿ ಅಲ್ಲಿಗೆ ಹೋಗಿ ವಸತಿ ಮಾಡುವುದೂ ಸಾಹಸದ ಮಾತಾಗಿದ್ದಿತು. ಯಾವಾಗ ಯಾವ ಹಳ್ಳಿಯನ್ನು ಪೋಲೀಸರು ಮುತ್ತುವರೆಂಬ ನಿಯಮವಿರಲಿಲ್ಲ. ಅಂತೆಯೆ, ಹಳ್ಳಿಗಳಿಗೆ ಹೋಗದೆ ಗುಡ್ಡಗಳಲ್ಲೇ ಅಡಗಿಕೊಳ್ಳುವುದು ಆಗತ್ಯವಾಗಿದ್ದಿತು. ರಾತ್ರಿಯಾಗುವ ಹೊತ್ತಿಗೆ ಆ ಗುಡಿಯು ಬಳಿ ಬಂದುದರಿಂದಾಗಿ ಅವರಿಗೆ ಅಂಥ ಪರಿಸ್ಥಿತಿಯಲ್ಲೂ ಕೊಂಚ ಸಂತಸವೇ ಆಗಿದ್ದಿತು.

ಕೊಳ್ಳದ ಆಚೆ ಈಚೆ ಮೂರು ಕಡೆಗಳಲ್ಲೂ ಉನ್ನತವಾದ ಗುಡ್ಡಗಳ ಸಾಲು ತಲೆಯೆತ್ತಿ ನಿಂತಿದ್ದುವು. ಉತ್ತರ ದಿಕ್ಕಿನ ಗುಡ್ಡದ ಮೇಲಿನಿಂದ ದೊಡ್ಡ ಝುರಿಯೊಂದು ಹರಿದು ನೂರಾರು ಅಡಿಗಳ ಮೇಲಿನಿಂದ ಕೆಳಗಡೆ ಕೊಳ್ಳಕ್ಕೆ ಧುಮುಕುತ್ತಿದ್ದಿತು. ಆಗತಾನೆ ಮೇಲಕ್ಕೇರಿ ಬಂದ ಅರ್ಧ ಚಂದ್ರಮನ ಪ್ರಕಾಶದಲ್ಲಿ ಆ ಪುಟ್ಟ ತಡಸಲಿನ ನೃತ್ಯವನ್ನು ಕಂಡು ಇಬ್ಬರೂ ಮೋಹಿತರಾಗಿ ನಿಂತುಕೊಂಡಿದ್ದರು.

“ಎಷ್ಟು ಚಂದ ಅದ ನಿಸರ್ಗ ಇಲ್ಲಿಯದು!” ಎಂದಳು ಹೇಮಾ ಆ ಸುಂದರ ದೃಶ್ಯವನ್ನು ದಿಟ್ಟಿಸುತ್ತ. “ಯಾವ ತಡಸಲು ಇದು ವಿಶ್ವನಾಥ?”

“ಇಲ್ಲ. ನನಗೂ ಗೊತ್ತಿಲ್ಲ. ಈ ಗುಡ್ಡಗಾಡಿನೊಳಗ ನಾನೂ ತಿರುಗಾಡಿಲ್ಲ. ಇದೇ ಮೊದಲನೇ ಸಲ ನಾನಿದನ್ನು ನೋಡ್ತಿರೋದು. ಕೂತುಕೋ ಹೇಮಾ. ಅಂತೂ ಸುಂದರವಾದ ಸ್ಥಳಕ್ಕೇ ಬಂದೆವು!”

ತಡಸಲಿನಿಂದ ಕೊಂಚ ದೂರದಲ್ಲಿದ್ದ ಕಟ್ಟೆಯು ಮೇಲೆ ಕಂಬಳಿ ಹಾಸಿ ಇಬ್ಬರೂ ಕುಳಿತುಕೊಂಡರು. ಬೆಳಗಿನಿಂದ ನಡೆದು ನಡೆದು ಇಬ್ಬರೂ ತುಂಬ ದಣಿದುಕೊಂಡಿದ್ದರು. ತಾಂಡೆಯಿಂದ ಹೊರಡುವಾಗ ನಾಯಕ ಕಟ್ಟಿ ತಂದು ಕೊಟ್ಟಿದ್ದ ಬುತ್ತಿಯ ಗಂಟನ್ನು ಬಿಚ್ಚಿದ ವಿಶ್ವನಾಥ. ಮಧ್ಯಾಹ್ನ ತಿಂದಿದ್ದರೂ ಇನ್ನೂ ಹತ್ತು ರೊಟ್ಟಿಗಳು ಉಳಿದಿದ್ದುವು. ಕೈಕಾಲು ಮುಖ ತೊಳೆದು ಕೊಂಡು ಬಂದು ರೊಟ್ಟಿ ತಿನ್ನತೊಡಗಿದರು.

“ಚಳಿ ಬಹಳ ಇದೆಯಲ್ಲ ವಿಶ್ವನಾಥ?”

“ಜನವರಿ ತಿಂಗಳು. ಅಂದಮ್ಯಾಲ ಕೇಳಬೇಕೇನು? ಇನ್ನೂ ಹದಿನೈದು ಇಪ್ಪತ್ತು ದಿನಾ ಬೇಕು ಈ ಚಳಿ ಹೋಗಬೇಕಾದರ. ಬಹಳ ಚಳಿ ಆಗುತೈತೇನು ಹೇಮಾ? ಕಂಬಳಿಯನ್ನಾದರೂ ಹೊದ್ದುಕೋ.”

"ಬೇಡ. ಈ ನಿಸರ್ಗದ ಚೆಂದ ನೋಡುತಾ ಇದ್ದರೆ ಚಳಿಯ ನೆನಪೂ ಆಗುವುದಿಲ್ಲ," ಎಂದು ನುಡಿದು ಹೇಮಾ ಎದುರಿಗೆ ಸಾವಿರಾರು ಹಾವುಗಳ ಹಾಗೆ ಗುಡ್ಡದಿಂದ ಧುಮುಕುತ್ತಿದ್ದ ನೀರಧಾರೆಯನ್ನು ಎವೆಯಿಕ್ಕದೆ ದಿಟ್ಟಿಸತೊಡಗಿದಳು.

ನಡೆದು ನಡೆದು ಮೈಯೆಲ್ಲಾ ನೋಯುತ್ತಿದ್ದರೂ ವಿಶ್ವನಾಥನಿಗೆ ಅದೆಲ್ಲವೂ ಮರೆತುಹೋಗಿದ್ದಿತು. ಈ ಸುಂದರವಾದ ನಿಸರ್ಗ, ಈ ಮೋಹಕ ಚಂದಿರ, ಅವನ ಬೆಳಕಿನಲ್ಲಿ ಕುಣಿಯುತ್ತ ಬೀಳುವ ಜಲಪಾತ, ಅದರ ಎದುರಿಗೆ ತಿಂಗಳ ಬೆಳಕಿನಲ್ಲಿ ಪ್ರಫುಲ್ಲವದನದಿಂದ ಕುಳಿತ ಹೇಮಾವತಿಯ ಸಾನ್ನಿಧ್ಯ.... ಜನವಸತಿಯಿಂದ ದೂರವಾದ ಪ್ರದೇಶದಲ್ಲಿ, ಕಾಡು ಪ್ರಾಣಿಗಳಿಂದ ತುಂಬಿದ ಕೊಳ್ಳದ ಮಧ್ಯೆ, ಕಳ್ಳಕಾಕರರಿಗೆ ಮಾತ್ರ ಆಶ್ರಯಸ್ಥಾನವಾಗಿರಬಹುದಾದ ಪುರಾತನ ಕಾಲದ ಹಾಳು ದೇವಾಲಯದ ಬಳಿ ತಾವಿಬ್ಬರೇ ಇಂಥ ರಾತ್ರಿಯನ್ನೆಲ್ಲ ಕಳೆಯಬೇಕಾಗಿದೆಯೆಂಬುದನ್ನು ಆತ ಮರೆತುಬಿಟ್ಟಹಾಗಿದ್ದಿತು. ತಮ್ಮನ್ನು ಹುಡುಕಿ ತೆಗೆಯುವುದಕ್ಕಾಗಿ ಪೋಲೀಸರು ಎಲ್ಲ ಕಡೆಗಳಲ್ಲೂ ಅಲೆಯುತ್ತಿರುವುದೂ ಅವನ ನೆನಪಿನಲ್ಲಿದ್ದ ಹಾಗಿರಲಿಲ್ಲ. ಈ ಪ್ರಪಂಚವನ್ನೇ ಮರೆತುಬಿಟ್ಟು ಆತ ಬೇರೊಂದು ಮೋಹಕ ಲೋಕದಲ್ಲಿ ಕನಸಿನ ರಾಜ್ಯದಲ್ಲಿ ವಿಹರಿಸುತ್ತಿದ್ದಂತೆ ತೋರುತ್ತಿದ್ದಿತು. ಹೇಮಾವತಿಯೂ ತನ್ನ ದಣಿವನ್ನೆಲ್ಲ ಮರೆತು ನಿಸರ್ಗದ ಚೆಲುವಿನಲ್ಲಿ ತನ್ಮಯಳಾಗಿದ್ದಳು.

"ಹೇಮಾ...."

"ಮಾತಾಡಬೇಡ ವಿಶ್ವನಾಥ. ನಮ್ಮ ಮಾತಿನಿಂದ ಈ ಸುಂದರ ಕನಸು ಒಡೆದುಹೋದೀತು."

ಸುಂದರ ಕನಸು! ಹೌದು. ಅದು ಕನಸೇ ಆಗಿರಬೇಕು. ವಿಶ್ವನಾಥನಿಗಂತೂ ಅದು ಕನಸು ಎನ್ನುವಲ್ಲಿ ಯಾವ ಸಂದೇಹವೂ ಉಳಿಯಲಿಲ್ಲ. ಹೇಮಾ ಒಮ್ಮೆ ಆಗಸದಲ್ಲಿ ಹೊಳೆಯುತ್ತಿದ್ದ ಅರ್ಧಚಂದ್ರನನ್ನೂ ಅವನ ಸುತ್ತುಮುತ್ತು ಸೂರೆಯಾಗಿದ್ದ ಲಕ್ಷೋಪಲಕ್ಷ ತಾರೆಗಳನ್ನೂ ಒಮ್ಮೆ ಎದುರಿಗಿನ ಜಲಪಾತವನ್ನೂ ಇನ್ನೊಮ್ಮೆ ಜಲಪಾತದ ಕೆಳಗೆ ನಿಂತ ನೀರಿನಲ್ಲಿ ಮೂಡುತ್ತಿದ್ದ ಚಂದ್ರನ ಪ್ರತಿಬಿಂಬವನ್ನೂ ಮತ್ತೊಮ್ಮೆ ಆ ಸುಂದರ ಪ್ರದೇಶದ ಸೊಬಗನ್ನು ಕಾಯುವ ಕಾವಲುಗಾರರಂತೆ ತಲೆಯೆತ್ತಿ ನಿಂತಿದ್ದ ಗುಡ್ಡಗಳನ್ನೂ ಎವೆಯಿಕ್ಕದೆ ದಿಟ್ಟಿಸುತ್ತಿದ್ದಳು. ವಿಶ್ವನಾಥನೂ ಅವಳನ್ನೇ ಎವೆಯಿಕ್ಕದೆ ದಿಟ್ಟಿಸುತ್ತಿದ್ದ.

ರೊಟ್ಟಿ ತಿನ್ನುವುದು ಯಾವಾಗಲೋ ಮುಗಿದುಹೋಗಿತ್ತು. ಬೆಳಗಿನಿಂದ ನಡೆದು ದಣಿದುಹೋಗಿದ್ದರೂ ಅವರಿಗೆ ನಿದ್ರೆ ಬರುವ ಹಾಗೆ ತೋರಲಿಲ್ಲ. ಅರ್ಧ ಗಂಟೆ ಕಳೆಯಿತು, ಒಂದು ಗಂಟೆ ಆಗಿಹೋಯಿತು. ಹೇಮಾ ಅಲ್ಲಿಂದ ಏಳುವ ಲಕ್ಷಣ ಕಂಡುಬರಲಿಲ್ಲ. ಹೊತ್ತು ಹೆಚ್ಚಿದ ಹಾಗೆಲ್ಲ ಚಳಿಯೂ ಕ್ರಮೇಣ ಹೆಚ್ಚುತ್ತಿತ್ತು. ಇನ್ನು ಬಹಳ ಹೊತ್ತಿನವರೆಗೆ ಹಾಗೇ ಹೊರಗಡೆ ಕುಳಿತಿರುವುದು ಅಸಾಧ್ಯವಾಗಿದ್ದಿತು.

"ಹೇಮಾ, ಏಳು ಗುಡಿಯೊಳಗೆ ಹೋಗೋಣ," ಎಂದ ವಿಶ್ವನಾಥ.

ನೂರಾರು ವರ್ಷಗಳ ಹಿಂದೆ ಕಟ್ಟಲಾಗಿದ್ದ ಆ ಗುಡಿ ಹೆಸರಿಗೆ ಮಾತ್ರ ಗುಡಿಯಾಗಿದ್ದಿತು. ಒಳಗೆ ದೇವರ ಮೂರ್ತಿ ಯಾವುದೂ ಇರಲಿಲ್ಲವಾದರೂ ಒಂದಾನೊಂದು ಕಾಲಕ್ಕೆ ಅಲ್ಲಿ ಮೂರ್ತಿಯಿದ್ದ ವಿಚಾರವನ್ನು ಸಾರಲೆಂದೋ ಏನೋ, ಒಳಭಾಗದಲ್ಲಿ ಗರ್ಭಗುಡಿ ಬೀಳದೆ ಉಳಿದುಕೊಂಡಿತ್ತು. ಎಡಗಡೆಗೂ ಬಲಗಡೆಗೂ ಎರಡು ಕಿಟಕಿಗಳನ್ನು ಏರ್ಪಡಿಸಲಾಗಿದ್ದಿತು. ಆ ಕಿಟಕಿಗಳಿಂದಲೂ, ಎದುರಿನ ಬಾಗಿಲಿನಿಂದಲೂ ಚಂದ್ರಮನ ಬೆಳಕು ಹರಿದುಬಂದು ಗುಡಿಯ ಒಳ ಭಾಗವನ್ನೆಲ್ಲಾ ಬೆಳಗಿಸಿದ್ದಿತು.

ನೆಲದ ಮೇಲೆ ಹಾಸಿದ್ದ ಕಲ್ಲುಗಳು ಚಳಿಯಿಂದಾಗಿ ತಣ್ಣಗೆ ಬರ್ಫದಂತಾಗಿ ದ್ದುದನ್ನು ಕಂಡಾಗ ವಿಶ್ವನಾಥ ಹೊಸದೊಂದು ಸಮಸ್ಯೆಯನ್ನೆದುರಿಸಬೇಕಾ ಯಿತು. ಅವರು ತಮ್ಮೊಡನೆ ತಂದಿದ್ದುದು ಒಂದೊಂದೇ ಕಂಬಳಿಯನ್ನು. ಒಂದು ಭಾಗವನ್ನು ಹಾಸಿ, ಇನ್ನೊಂದು ಭಾಗದಿಂದ ಮೈಯನ್ನು ಮುಚ್ಚಿಕೊಂಡು ನಿದ್ರಿಸಲು ಅನುಕೂಲವಾಗುವಂಥ ಕಂಬಳಿ ಅವು. ಇಂಥ ತಣ್ಣಗಿನ ಕಲ್ಲಿನ ಮೇಲೆ ಅವುಗಳನ್ನು ಹಾಸಿ ಮಲಗಿದರೆ ಚಳಿಯಿಂದ ಪಾರಾಗುವುದು ಸಾಧ್ಯವಾಗು ವಂತಿರಲಿಲ್ಲ. ಹೊರಗಿನ ಚಳಿಯೇ ಅಲ್ಲದೆ ಈ ಶಿಲೆಗಳ ತಣ್ಣಾಪು ತಮ್ಮನ್ನು ಸ್ವಾಗತಿಸಲು ಸಿದ್ಧವಾಗಿರಬೇಕೆನ್ನಿಸಿತು ಅವನಿಗೆ.

ಆದರೂ ಅಲ್ಲಿ ಮಲಗದೆ ಬೇರೆ ಗತಿಯಿರಲಿಲ್ಲವಾದುದರಿಂದ ಪಡಸಾಲೆಯಲ್ಲಿ ಕಂಬಳಿಗಳನ್ನು ಹಾಸಿ ಒರಗಿಕೊಂಡರು. ಅಂಥ ಸನ್ನಿವೇಶ ಇಬ್ಬರಿಗೂ ತೀರ ಅಪರಿಚಿತವಾದುದಾಗಿತ್ತು. ಅಂಥ ಹಾಳು ಗುಡಿಯಲ್ಲಿ ಒಂದೇ ಒಂದು ಕಂಬಳಿ ಯೊಂದಿಗೆ ಮಲಗಿ ನಿದ್ರಿಸಬೇಕಾದ ಪರಿಸ್ಥಿತಿ ಇಬ್ಬರಿಗೂ ಬಂದಿರಲಿಲ್ಲ. ಸಿರಿವಂತರ ಮನೆಗಳಲ್ಲಿ ಹುಟ್ಟಿ ಸುಖವಾಗಿ ಬೆಳೆದವರು ಇಬ್ಬರೂ. ಮನೆಯಲ್ಲಿದ್ದಾಗಲೂ

ಅಷ್ಟೆ. ಪುಣೆಯಲ್ಲಿದ್ದಾಗಲೂ ಅಷ್ಟೆ; ಬೆಚ್ಚಗಿನ ಕೊಟಡಿಯಲ್ಲಿ ಗಾದಿಗಳ ಮೇಲೆ ದಪ್ಪಗಿನ ರಗ್ಗುಗಳನ್ನು ಹೊದ್ದು ಮಲಗಿದವರು. ಲಂಬಾಣಿ ತಾಂಡೆಯಲ್ಲಾದರೋ ಗುಡಿಸಲಿನ ಆಶ್ರಯವಾದರೂ ಇತ್ತು. ಬಾಗಿಲನ್ನು ಭದ್ರವಾಗಿ ಮುಚ್ಚಿಬಿಟ್ಟರೆ ಎಷ್ಟೋ ಹಿತವಾಗಿರುತ್ತಿತ್ತು. ಅಲ್ಲದೆ, ರಾತ್ರಿಯೆಲ್ಲ ಕರಪತ್ರಗಳ ಕೆಲಸವಿರುತ್ತಿದ್ದುದರಿಂದ ಅದರಲ್ಲಿ ತೊಡಗಿಕೊಂಡು ಅನನುಕೂಲತೆಗಳನ್ನೆಲ್ಲ ಮರೆತುಬಿಡಲು ಅನುವಿತ್ತು. ಆದರೆ ಧೂಳು ತುಂಬಿದ ಈ ಹಾಳು ಗುಡಿಯಲ್ಲಿ, ಇಂಥ ಕಾಡಿನ ಮಧ್ಯದಲ್ಲಿರುವ ಕೊಳ್ಳದಲ್ಲಿ, ಇಂಥ ತಣ್ಣಗಿನ ನೆಲದ ಮೇಲೆ ಮಲಗಿಕೊಳ್ಳುವುದು ಮಾತ್ರ ದುಸ್ಸಾಧ್ಯವಾದ ಕೆಲಸವಾಗಿತ್ತು.

ವಿಶ್ವನಾಥನಿಂದ ಐದಾರು ಅಡಿಗಳ ಅಂತರದ ಮೇಲೆ ಕಂಬಳಿಯೊಳಗಡೆ ದೇಹವನ್ನು ಅಡಗಿಸಿ, ನಡುಗುತ್ತಿದ್ದ ಹಲ್ಲುಗಳನ್ನು ಬಿಗಿಯಾಗಿ ಹಿಡಿದುಕೊಂಡು ಹೇಮಾ ಮಲಗಿಕೊಂಡಿದ್ದಳು. ಎದುರಿಗಿನ ಬಾಗಿಲಿನ ಒಳಗಿನಿಂದ ಜಲಪಾತದ ನರ್ತನ ಕಾಣಿಸುತ್ತಿತ್ತು. ಸ್ವಲ್ಪ ಸಮಯಕ್ಕೆ ಮೊದಲು ಹೊರಗಡೆ ಕುಳಿತುಕೊಂಡಾಗ ನಿಸರ್ಗದ ಆ ರಮ್ಯಲೀಲೆಯನ್ನು ದಿಟ್ಟಿಸುತ್ತ ಪ್ರಪಂಚವನ್ನೆಲ್ಲ ಮರೆತಿದ್ದಳು ಹೇಮಾ. ಆದರೆ ನಿಸರ್ಗದ ಇನ್ನೊಂದು ರೂಪವಾದ ಚಳಿಯೊಂದಿಗೆ ಹೋರಾಡಬೇಕಾದ ಈ ಸಂದರ್ಭದಲ್ಲಿ ಎದುರಿಗಿನ ಆ ಚೇತೋಹಾರಿ ದೃಶ್ಯವೂ ನೀರಸವಾಗಿ ಕಂಡಿತು ಅವಳಿಗೆ. ಕಂಬಳಿಯನ್ನು ಮುಖದ ತನಕ ಹೊದೆದುಕೊಂಡು ಕಣ್ಣುಗಳನ್ನು ಮುಚ್ಚಿಕೊಂಡಳು. ಆದರೂ ಚಳಿ ತೊಲಗಲಿಲ್ಲ- ಹಳ್ಳಿಯ ಹೆಣ್ಣುಮಕ್ಕಳು ಉಡುವಂಥ ಒರಟು ಸೀರೆಯನ್ನುಟ್ಟುಕೊಂಡಿದ್ದರೂ ಅದನ್ನೂ ಭೇದಿಸಿಕೊಂಡು ಚರ್ಮವನ್ನು ಕೊರೆಯುವ ಆ ತಣ್ಣು! ಅವಳ ಶರೀರವೆಲ್ಲ ಥರಥರನೆ ನಡುಗತೊಡಗಿತು.

ಅದೇ ಸ್ಥಿತಿಯಲ್ಲಿ ಹೇಗೋ ಬಿದ್ದುಕೊಂಡಿದ್ದ ವಿಶ್ವನಾಥನಿಗೆ ಅವಳು ನಡುಗುತ್ತಿರುವುದು ಕಾಣಿಸದಿರಲಿಲ್ಲ. ಆತ ಏನನ್ನೋ ನಿರ್ಧರಿಸಿ ಎದ್ದುಬಿಟ್ಟ. ತನ್ನ ಕಂಬಳಿಯನ್ನು ತೆಗೆದು ಅವಳ ಹತ್ತಿರ ಹೋಗಿ ಅದನ್ನು ಅವಳ ಮೇಲೆ ಹೊದೆಸಿದ. ಅವನ ಕೈ ಅವಳಿಗೆ ತಾಕಿದಂತಾಗುತ್ತಲೂ ಹೇಮಾ ಬೆಚ್ಚಿಬಿದ್ದು ಎದ್ದು ಕುಳಿತಳು. ಆತ ತನ್ನ ಹತ್ತಿರ ಬಂದ ಉದ್ದೇಶವನ್ನರಿತೊಡನೆಯೆ ಕೃತಜ್ಞತೆಯಿಂದ ಅವಳ ಎದೆ ತುಂಬಿಬಂದಂತಾಯಿತು. ಅವನ ಕಂಬಳಿಯನ್ನು ಹೊದೆದು

ಕೊಳ್ಳಲಾರದೆ—"ನಿನ್ನದನ್ನೂ ನನಗೇ ಕೊಟ್ಟರೆ ನೀನು ಹ್ಯಾಗೆ ಮಲಗುವವ, ವಿಶ್ವನಾಥ? ಬೇಡ. ತಕ್ಕೋ" ಎಂದಳು.

"ನನಗೆ ನಿದ್ದೆ ಬರುವಹಾಗಿಲ್ಲ, ಹೇಮಾ. ಸುಮ್ಮನೆ ಬಿದ್ದುಕೊಂಡರ ಏನಾದಹಾಗಾಯ್ತು? ನೀನೊಬ್ಬಳಾದರೂ ನೆಟ್ಟಗೆ ನಿದ್ದೆ ಮಾಡು. ಪಾಪ. ಬೆಳಗಿನಿಂದ ನಡೆದು ನಡೆದು ಬಹಳ ಸೋತು ಹೋಗಿದ್ದೀಯ."

"ನಿನಗೆ ದಣಿವಾಗಿಲ್ಲೇನು? ಹಾಗೆಲ್ಲ ಮಾಡಬೇಡ ಹುಚ್ಚನ ಹಾಗೆ. ಮಲಗಿಕೋ ಸುಮ್ಮನೆ!"

ವಿಶ್ವನಾಥ ಅವಳ ಬಳಿ ಕುಳಿತುಕೊಂಡು ಬಲವಂತದಿಂದಲೇ ಅವಳನ್ನು ಮಲಗಿಸಿದ. ಎಡಗಡೆಯ ಕಿಟಕಿಯೊಳಗಿಂದ ತೂರಿಬರುತ್ತಿದ್ದ ಚಂದ್ರಕಿರಣಗಳು ಅವಳ ಮುಖದ ಮೇಲೆ ನಾಟ್ಯವಾಡತೊಡಗಿದ್ದುವು. ಆ ಹಾಲುಗಿರಣಗಳಲ್ಲಿ ಬಿಳಿಯ ಗುಲಾಬಿಯಂತೆ ತೋರುತ್ತಿದ್ದ ಅವಳ ಮುಖವನ್ನು ಪ್ರೀತಿಯಿಂದಲೂ ಅಕ್ಕರೆಯಿಂದಲೂ ದಿಟ್ಟಿಸುತ್ತ ಕಂಬಳಿಗಳೆರಡನ್ನೂ ಅವಳ ಶರೀರದ ತುಂಬ ಹೊದೆಸಿದ. "ನೀ ನಿದ್ದೆ ಮಾಡು ಹೇಮಾ. ನೀ ಮಾಡಿದರ ನಾನೂ ಮಾಡಿದ ಹಾಗೆ. ನೀ ಹೀಗೆ ಚಳಿಯಿಂದ ನಡುಗುತ್ತಾ ಇದ್ದರೆ ನನಗೆ ನಿದ್ದೆ ಬಂದೀತು ಅಂತ ತಿಳಿದೀ ಏನು?" ಎಂದ.

ಕಂಬಳಿಯೊಳಗಿನಿಂದ ತನ್ನ ಬಲಗೈಯನ್ನು ಹೊರದೆಗೆದು ಅವನ ಕೈಯನ್ನು ಮೆಲ್ಲನೆ ತಟ್ಟುತ್ತ ಹೇಮಾ ಹೇಳಿದಳು: "ನನಗಾಗಿ ಎಂಥ ತ್ಯಾಗ ಮಾಡುತೀಯಲ್ಲ ವಿಶ್ವನಾಥ!"

ಅವಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು ಆತ ಕಂಪಿಸುವ ದನಿಯಿಂದ ನುಡಿದ: "ನಿನಗಾಗಿ ಎಂಥಾ ತ್ಯಾಗಕ್ಕೂ ಸಿದ್ಧ ನಾನು, ಹೇಮಾ!"

ಒಂದೆರಡು ಕ್ಷಣ ಮೌನವಾಗಿ ಅವನನ್ನೇ ದಿಟ್ಟಿಸುತ್ತ ಮಲಗಿದ್ದಳು, ಹೇಮಾ. ಅವಳ ಹೃದಯದಲ್ಲಿ ಎಂಥ ಭಾವರಾಗಗಳು ತೊತ್ತಳದುಳಿಯುತಿದ್ದುವೋ ಯಾರು ಬಲ್ಲರು? ಈ ಏಕಾಂತ, ಈ ನಿಸರ್ಗದ ಸಾನ್ನಿಧ್ಯ, ಇಂಥ ಬೆಳುದಿಂಗಳ ರಾತ್ರಿ, ಇಂಥ ವಾಸಸ್ಥಾನ....ಸನ್ನಿವೇಶ ವಿಲಕ್ಷಣವಾದುದಾಗಿತ್ತು. ವಿಶ್ವನಾಥನ ಮನಸ್ಸಿನಲ್ಲಿ ಕೋಲಾಹಲವನ್ನುಂಟುಮಾಡುತ್ತಿದ್ದ ಭಾವನೆಗಳನ್ನಾಕೆ ಗುರುತಿಸದಿರಲಿಲ್ಲ. ಆ ಭಾವನೆಗಳ ಆವೇಗಕ್ಕೆ ತನ್ನ ಹೃದಯವೂ ತಾಳ ಹಾಕುವದೇನೋ ಎಂದು ಆಕೆಗೆ ಭಯವಾಗದಿರಲಿಲ್ಲ. ಆದರೆ ಮೊದಲಿನಿಂದಲೂ ಆಕೆ ಕಷ್ಟಪಟ್ಟು

ಬೆಳೆಸಿಕೊಂಡು ಬಂದಿದ್ದ ದೃಢವಾದ ಚಾರಿತ್ರ್ಯ ಅವಳನ್ನು ಅಂಥ ಸಂದರ್ಭದಲ್ಲಿ ಕೈಬಿಡಲಿಲ್ಲ. ಉಪಾಯವಾಗಿ, ವಿಶ್ವನಾಥನಿಗೆ ನೋವಾಗದಂತೆ ಈ ಸೂಕ್ಷ್ಮ ಸನ್ನಿವೇಶದಿಂದ ಪಾರಾಗಿ ಬರಬೇಕಾಗಿತ್ತು.

ಅವಳು ಮೌನವಾಗಿದ್ದುದನ್ನು ಕಂಡು ವಿಶ್ವನಾಥ ಮತ್ತೆ ಮಾತನಾಡಿದ : "ಯಾಕೆ ಸುಮ್ಮನಾದೆ ಹೇಮಾ ? ನಾ ಹೇಳಿದ್ದು ಅರ್ಥವಾಗಲಿಲ್ಲವೇ ನಿನಗೆ ?"

"ಅರ್ಥ ಆಯ್ತು ವಿಶ್ವನಾಥ, ಆದರೆ...."

"ಏನು ಹೇಮಾ ?"

"ಭಾವನಾವಶನಾಗಬೇಡ ವಿಶ್ವನಾಥ ! ಈಗ ನಾವಿಬ್ಬರೂ ಯಾವ ಪರಿಸ್ಥಿತಿಯೊಳಗೆ ಬಿದ್ದೀವಿ ಅನ್ನೂದನ್ನ ವಿಚಾರ ಮಾಡಿ ನೋಡು. ಮುಂಜಾನೆ ಲಂಬಾಣಿ ತಾಂಡೆಯಿಂದ ಓಡಿಬಂದದ್ದು, ಪೋಲೀಸರ ಕೈಗೆ ಸಿಗದೆ ಹೋರಾಟ ಮುಂದುವರಿಸಬೇಕೆಂದು ಪ್ರತಿಜ್ಞೆ ಮಾಡಿ ಕಾಡು ಬೆಟ್ಟ ತಿರುಗಿ ಇಂಥಾ ಸ್ಥಳಕ್ಕೆ ಬಂದದ್ದು—ಇನ್ನೂ ನಾವು ಮಾಡಬೇಕಾಗಿರುವ ಕೆಲಸ—ಇದನ್ನೆಲ್ಲಾ ನೆನಪು ಮಾಡಿಕೋ. ನನಗಾಗಿ ನೀನು ಇದನ್ನೆಲ್ಲಾ ಮಾಡ್ತಾ ಇದ್ದೀಯೋ, ಅಥವಾ ದೇಶದ ಸ್ವಾತಂತ್ರ್ಯಕ್ಕಾಗಿ ಮಾಡ್ತಾ ಇದ್ದೀಯೋ ?"

ವಿಶ್ವನಾಥ ಗೊಂದಲದಲ್ಲಿ ಸಿಲುಕಿದಂತಾದ. ಬೇಗನೆ ಉತ್ತರವೀಯಲಾಗಲಿಲ್ಲ. ಹೇಮಾತಿಯ ಹೇಳುತ್ತಿದ್ದಳು : "ನನಗಾಗಿಯೆ ಎಲ್ಲಾ ಮಾಡುತ್ತಿದ್ದೀನಿ ಅಂತ ನೀ ಹೇಳಿದರೆ ನನಗೆ ಆಗುವಷ್ಟು ಬೇಸರ ಇನ್ನಾರಿಗೂ ಆಗಲಿಕ್ಕಿಲ್ಲ. ನಿನ್ನ ಬಗ್ಗೆ ನನಗೆ ತಿರಸ್ಕಾರವೂ ಬಂದೀತು. ಆದರೆ ನನಗಾಗಿ ನೀ ಈ ಕೆಲಸಕ್ಕ ಬಂದಿದ್ದೀ ಅಂತ ನಾನೆಂದೂ ತಿಳಿದಿಲ್ಲ. ಅದಕ್ಕೇ ನಿನ್ನ ಬಗ್ಗೆ ಬಹಳ ಪ್ರೀತಿ ನನಗೆ!"

"ಪ್ರೀತಿ ?"

"ಹೂಂ. ಪ್ರೀತಿ! ನಿನ್ನ ಹಾಗೆ ಸುಖಸಂಪತ್ತು ಎಲ್ಲದಕ್ಕೂ ನೀರು ಬಿಟ್ಟು ಹಗಲೂ ರಾತ್ರಿ ಕೆಲಸ ಮಾಡುವವರನ್ನ ಕಂಡರ ಯಾರಿಗೆ ಪ್ರೀತಿ ಬರಲಿಕ್ಕಿಲ್ಲ, ವಿಶ್ವನಾಥ! ನಿನಗೇನು ಕಡಮೆಯಾಗಿತ್ತು ? ಅಪ್ಪನಿಗೆ ಒಬ್ಬನೇ ಒಬ್ಬ ಪ್ರೀತಿಯ ಮಗ. ದೊಡ್ಡ ಜಹಗೀರು. ದೊಡ್ಡ ಆಸ್ತಿ—ದೊಡ್ಡ ಮನೆ. ಸುಖದ ಉಯ್ಯಾಲೆಯೊಳಗ ಇರಬಹುದಾಗಿತ್ತು ನೀನು. ಅದೆಲ್ಲ ಬಿಟ್ಟು ಇಂಥಾ ಚಳಿಯೊಳಗೆ ವನವಾಸ ಮಾಡಲು ಸಿದ್ಧನಾದೆಯಲ್ಲ !"

"ನಿನ್ನ ಮುಂದೆ ನನ್ನದೇನು ದೊಡ್ಡದು, ಹೇಮಾ. ನನ್ನ ಹಾಗೇ ನಿನಗೂ ಸಾಕಷ್ಟು ಸುಖಸಂಪತ್ತು ಇತ್ತು. ಆದರೂ ನೀನು ಬಂದೆಯಲ್ಲ?"

"ನನ್ನ ಮಾತು ಬೇರೆ ವಿಶ್ವನಾಥ. ಈ ಕಾಂಗ್ರೆಸ್ ಚಳವಳಿ ಅಂದರೆ ನಮ್ಮ ಮನೆತನದ ಉದ್ಯೋಗ ಆದಂತೆ ಆಗಿದೆ. ನನ್ನ ರಕ್ತದಲ್ಲೇ ಇಳಿದು ಬಂದಿದೆ ಅಂತ ಹೇಳಬಹುದು. ಮೊದಲಿಂದಲೂ ಚಳವಳಿಯ ವಾತಾವರಣ ದೊಳಗೆ ಬೆಳೆದಾಕೆ ನಾನು. ನಿನಗೆ ಹಾಗಿರಲಿಲ್ಲ. ದಿವಾನ ಬಹದ್ದೂರ ಆಗಬೇಕಂತ ಪ್ರಯತ್ನ ನಡಸಿರುವ ರಾಜನಿಷ್ಠರ ಮನೆಯೊಳಗ ಹುಟ್ಟಿ, ಅಂಥ ವಾತಾವರಣ ದೊಳಗೆ ಬೆಳೆದವನು ನೀನು."

"ಅವೊತ್ತು ಪ್ರವಾಸದೊಳಗೆ ನಿನ್ನ ಭೆಟ್ಟಿ ಆಗದಿದ್ದಿದ್ದರ ಈಗಲೂ ನಾನು ಅಂಥ ವಾತಾವರಣದೊಳಗೇ ಇರುತ್ತಿದ್ದೆನೋ ಏನೊ. ನಿನ್ನಿಂದಾಗಿಯೆ ನಾನು ಈ ಕೆಲಸಕ್ಕೆ ನಿಂತದ್ದು ಹೇಮಾ."

"ಅದೇ ನಿನ್ನ ಭ್ರಮೆ. ನೀನು ಈ ಕೆಲಸಕ್ಕೆ ಬೀಳಲು ನಾನು ನಿಮಿತ್ತ ವಾಗಿರಬಹುದು. ಆದರೆ ನನಗಾಗಿಯೇ ನೀನು ಇದರೊಳಗೆ ಬಂದೆ ಅನ್ನೋದು ಮಾತ್ರ ಸುಳ್ಳು. ಪ್ರತಿಯೊಬ್ಬನ ಎದೆಯಲ್ಲಿ ಒಂದಿಲ್ಲೊಂದು ಮೂಲೆಯೊಳಗ ದೇಶಪ್ರೇಮ, ಸ್ವಾತಂತ್ರ್ಯಪ್ರೀತಿ ಇದ್ದೇ ಇರುತ್ತದೆ—ಅವರಿಗೇ ಗೊತ್ತಿರದ ಹಾಗೆ. ಅದನ್ನ ಬಡಿದು ಎಬ್ಬಿಸಿ ಕೆಲಸಕ್ಕೆ ಹಚ್ಚಿದರ ಸಾಕು. ಮುಂದೆ ಅವರ ವ್ಯಕ್ತಿತ್ವವನ್ನೆಲ್ಲಾ ಅದೇ ಆಕ್ರಮಿಸುತದ. ಅದನ್ನೆಬ್ಬಿಸುವ ಕೆಲಸ ಮಾತ್ರ ನಾನು ಮಾಡಿರಬಹುದು. ಮುಂದೆ ನಿನ್ನ ನೀನು ಮರೆತುಬಿಟ್ಟು ಹೋರಾಟ ದೊಳಗೆ ಧುಮುಕಿದ್ದು ನೋಡಿ ಬಹಳ ಸಂತೋಷ ಆಯ್ತು ನನಗೆ, ವಿಶ್ವನಾಥ,"

ಮಾತಿನ ದಿಶೆಯನ್ನು ಬೇಕೆಂತಲೇ ಬೇರೆ ಕಡೆಗೆ ತಿರುಗಿಸಿ ಹೇಮಾ ಅವನ ಭಾವನಾವೇಗವನ್ನು ಕುಂಠಿತಗೊಳಿಸುತ್ತಿದ್ದಳು. ಏಕಾಂತದ ಆ ವಿಲಕ್ಷಣ ಸನ್ನಿವೇಶದಿಂದ ಆತನನ್ನು ಹೋರಾಟದ ವಿರಾಟ್‌ಲೋಕಕ್ಕೆ ಕರೆದೊಯ್ಯುವುದೇ ಅವಳ ಉದ್ದೇಶವಾಗಿತ್ತು.

"ನೀ ಏನೇ ಹೇಳು ಹೇಮಾ. ಅಂತೂ ನೀ ಇಲ್ಲದಿದ್ದರೆ ನಾ ಇದರಾಗ ಬರ್ತಿರಲಿಲ್ಲ."

"ಆದಸ್ನೊಪ್ಪೋಣ ಅನ್ನು. ಆದರೂ ನನಗಾಗೇ ಬಂದೆ ಅನ್ನೋದು

ಮಾತ್ರ ಅತಿಶಯೋಕ್ತಿಯಾದೀತು. ಒಂದು ಹೆಣ್ಣಿನ ಮಾತಿಗಾಗಿ ಹೋರಾಟಕ್ಕೆ ಬಿದ್ದರೆ ಯಾರಿಗೆ ಏನು ಬೆಲೆ ಬಂದೀತು ವಿಶ್ವನಾಥ ?"

ವಿಶ್ವನಾಥನ ಎದೆಗೆ ಬಲವಾದ ಆಘಾತವಾದಂತಾಯಿತು. ಅವನ ಮರ್ಮಸ್ಥಾನವನ್ನು ಸರಿಯಾಗಿ ಗುರುತಿಸಿ ಅದಕ್ಕೆ ಏಟು ಹಾಕಿದ್ದಳು, ಹೇಮಾ. ಅವನ ಭಾವನಾವೇಗವೆಲ್ಲ ಜರ್ರನೆ ಇಳಿದುಹೋಯಿತು. "ನಿಜ ಹೇಮಾ, ನೀ ಹೇಳೂದು" ಎಂದ.

"ಈ ಹೋರಾಟ ಮುಗಿಯುವ ತನಕ ನಾನು ಬರೀ ಹೆಣ್ಣಲ್ಲ, ನೀನು ಬರೀ ಗಂಡಲ್ಲ, ಇಬ್ಬರೂ ಸೈನಿಕರು, ಅಣ್ಣತಮ್ಮಂದಿರಿದ್ದ ಹಾಗೆ, ಹೌದೋ ಅಲ್ಲವೊ ?"

"ಹೌದು ಹೇಮಾ" ಎಂದ ವಿಶ್ವನಾಥ. ಅವಳ ಮಾತುಗಳೆಲ್ಲ ಅವನಿಗೆ ವಿಲಕ್ಷಣವಾಗಿ ತೋರುತ್ತಿದ್ದುವು.

"ನಿನಗೆ ಗೊತ್ತೇ ವಿಶ್ವನಾಥ ? ನಾನು ಎಂಥವರನ್ನು ಪ್ರೀತಿಸುತ್ತೇನೆ ಅನ್ನೂದು ?"

"ಇಲ್ಲ, ಎಂಥವರನ್ನು ?"

"ಉದ್ರೇಕಕ್ಕೆ ಬಲಿ ಬಿದ್ದು ತಮ್ಮ ವ್ಯಕ್ತಿತ್ವ ಕಳೆದುಕೊಳ್ಳುವ ದುರ್ಬಲರನ್ನು ಹೇಮಾ ಎಂದೂ ಪ್ರೀತಿಸಲಾರಳು. ಆಕೆ ಶೂರರನ್ನು ಮೆಚ್ಚುತ್ತಾಳೆ. ತಮ್ಮ ಭಾವನೆಗಳನ್ನು ತಮ್ಮ ಕೈಯಲ್ಲಿಟ್ಟುಕೊಂಡು ಸ್ವತಂತ್ರನಾಗಿರುವ ವೀರರನ್ನಾಕೆ ಮೆಚ್ಚುತ್ತಾಳೆ. ನಿನ್ನ ಬಗ್ಗೆ ನನಗೇಕೆ ಮೆಚ್ಚಿಕೆ ಗೊತ್ತೇ, ವಿಶ್ವನಾಥ ?"

"ಏಕೆ ?" ಎಂದು ಆತ ವಿಸ್ಮಯದಿಂದಲೂ ಕುತೂಹಲದಿಂದಲೂ ಕೇಳಿದ.

"ಏಕೆ ಅಂದರೆ, ಬೇರೆ ಕಾಲೇಜು ಹುಡುಗರ ಹಾಗಿಲ್ಲ ನೀನು. ಥಳಕು ಪಳಕು ಡ್ರೆಸ್ ಮಾಡಿಕೊಂಡು ಹುಡುಗಿಯರ ಬೆನ್ನು ಹತ್ತಿ ತಿರುಗುವ ಜಾತಿ ಯುವನಲ್ಲ. ಪುಣೆಯಲ್ಲಿದ್ದಾಗಲೇ ನಿನ್ನ ಈ ಗಂಭೀರ ಸ್ವಭಾವವನ್ನ ನಾ ಗುರುತಿಸಿದ್ದೆ. ಆಗಲೇ ನಿನ್ನ ಬಗ್ಗೆ ನನಗೆ ಮೆಚ್ಚುಗೆ ಉಂಟಾದದ್ದು."

"ಪುಣೆಯೊಳಗೆ ? ಯಾವಾಗ ?"

"ಒಂದು ದಿನ ಕ್ರಿಕೆಟ್ ಮ್ಯಾಚ್ ಇತ್ತು. ನೀನು ಎಲ್ಲರಕಿಂತ ಹೆಚ್ಚು ರನ್ಸ್ ಹೊಡೆದಿದ್ದೆ. ಆಟ ನೋಡುತ್ತ ನಿಂತಿದ್ದ ಹುಡುಗಿಯರು ನಮಗೆಲ್ಲಾ ನಿನ್ನ ಬಗ್ಗೆ ಬಹಳ ಅಭಿಮಾನ ಹುಟ್ಟಿಕೊಂಡಿತ್ತು. ಆಟ ಮುಗಿದ ಮೇಲೆ ನಾನೂ

ನನ್ನ ಇಬ್ಬರು ಗೆಳತಿಯರೂ ನಿನ್ನ ಹತ್ತಿರ ಬಂದು ನಮ್ಮ ಮೆಚ್ಚುಗೆಯನ್ನ ಸೂಚಿಸಿದೆವು. ನೀ ಸುಮ್ಮನೆ ನಕ್ಕು ಹೊರಟುಬಿಟ್ಟೆ. ನಿನ್ನ ಬದಲು ಇನ್ನಾರಾದರೂ ಆಗಿದ್ದರೆ ನಮ್ಮ ಸಂಗಡ ತಾಸೆರಡು ತಾಸು ಮಾತನಾಡುತಾ ಕೂಡುತ್ತಿದ್ದರು. ಮುಂದೆ, ನಮ್ಮ ಕೂಡ ಸ್ನೇಹ ಬೆಳಸಲೂ ಬರುತ್ತಿದ್ದರು. ನೀನು ಮಾತ್ರ ನಮ್ಮ ಕಡೆಗೆ ಹೊರಳಿ ನೋಡಲಿಲ್ಲ. ನಿನ್ನ ಈ ನಿರ್ಲಿಪ್ತತನವೇ ನನಗೆ ಹಿಡಿಸಿದ್ದು, ವಿಶ್ವನಾಥ. ಇನ್ನೊಂದು ವಿಷಯ ನಿನಗ ಗೊತ್ತೆ ?"

" ಏನದು ಹೇಮಾ ?"

" ನಮ್ಮ ಗೆಳತಿ ವಿಮಲಾನನ್ನು ನೀನು ನೋಡಿರಬೇಕು."

" ಯಾರು ? ಯಾವ ಕ್ಲಾಸಿನಲ್ಲಿದ್ದರು ?"

" ನಮ್ಮ ಕ್ಲಾಸಿನಲ್ಲೇ. ತೆಳ್ಳಗೆ ಇದ್ದಳಲ್ಲ. ಪಾಟಸ್ಕರ್ ಅಂತ...."

" ಓ! ನೋಡಿರಬಹುದು. ನನಗೆ ನೆನಪಿಲ್ಲ."

" ಅದೋ! ನಿನ್ನ ಸ್ವಭಾವ ನೋಡು ಇದು. ಕಾಲೇಜಿನಲ್ಲೆಲ್ಲ ರೂಪರಾಣಿ ಆಕೆ. ನೂರಾರು ಹುಡುಗರು ಆಕೆಗಾಗಿ ಬಾಯಿ ಬಾಯಿ ಬಿಡುತ್ತಿದ್ದುದನ್ನ ನಾನೇ ನೋಡಿದ್ದೇನೆ. ನೀನು ಮಾತ್ರ ಆಕೇನ್ನ ನೆಟ್ಟಗೆ ನೋಡಿಲ್ಲ ಸಹ!"

" ನೋಡಿರಬಹುದು ಹೇಮಾ ಈ ಪಾತರಗಿತ್ತಿಗಳೆಂದರೆ ನನಗೆ ಆಗದು. ಅದಕ್ಕಾಗಿ ದೂರ ಇರ್ತಿದ್ದೆ."

" ನಿನ್ನ ಕ್ರಿಕೆಟ್ ನೋಡಿದಾಗಿನಿಂದ ಆಕೆ ನಿನ್ನ ಸಂಗಡ ಮಾತಾಡಲು ಆತುರಳಾಗಿದ್ದಳು. ಅಂದಿನಿಂದ ಯಾವಾಗಲೂ ನಿನ್ನ ಮಾತೇ ಅವಳ ಬಾಯೊಳಗೆ. ನೀನೊಬ್ಬ ಹೀರೋ ಆದಂತಾಗಿದ್ದೆ ಅವಳಿಗೆ. ಅಷ್ಟು ಹುಚ್ಚು ಹಿಡಿದಿತ್ತು ಆಕೆಗೆ ನಿನ್ನ ಬಗ್ಗೆ. ನೀನು ಮಾತ್ರ ಒಂದು ಸಾರಿಯೂ ಆಕೆಯನ್ನ ಕಣ್ಣು ತೆಗೆದು ನೋಡಲಿಲ್ಲ. ಪಾಪ, ಬಹಳ ನೊಂದುಕೊಂಡಿದ್ದಳು. ನಮ್ಮ ಖೋಲಿಯೊಳಗೇ ಎಷ್ಟೋ ಸಾರಿ ಕಣ್ಣೀರು ತಂದಿದ್ದಳು...."

" ಹೀಗೇನು ? ನನಗೊಂದೂ ಗೊತ್ತಿಲ್ಲ ಬಿಡು !" ಎಂದನಾತ ಆಶ್ಚರ್ಯದಿಂದ.

" ನಿನಗಾಗಿ ಹುಚ್ಚಿಯಂತಾಗಿದ್ದ ವಿಮಲಳನ್ನೂ ಕಣ್ಣು ತೆಗೆದು ನೋಡದವ ನೀನು, ನನ್ನಲ್ಲಿ ಏನನ್ನು ಕಂಡು ಈ ಚಳವಳಿಗೆ ಬಂದೆಯಪ್ಪ ?"

"ಏನು ಕಂಡೆನೊ! ಅಂತೂ ಕಾಲೇಜಿನ ಯಾವ ಹುಡುಗಿಯಲ್ಲೂ ಇಲ್ಲದ ಒಂದು ತರದ ಆಕರ್ಷಣೆ ನಿನ್ನಲ್ಲಿತ್ತು. ಅಂತಲೇ ನಾ ಬಂದೆ ಅನ್ನಬಹುದು."

"ಎಂಥ ಆಕರ್ಷಣೆಯಪ್ಪ ಅದು? ನಾನೇನೂ ಅಂಥಾ ರೂಪವತಿಯೂ ಅಲ್ಲ. ನನಗಿಂತ ಚೆಲುವೆಯರಾದ ಹುಡುಗಿಯರೆಷ್ಟೋ ಜನ ಇದ್ದರಲ್ಲ. ಹಾಗೆ ನೋಡಿದರ ನಮ್ಮ ವಿಮಲ ನನಗಿಂತ ನೂರು ಪಾಲಿಗೆ ಸುಂದರಿ!"

"ಸೌಂದರ್ಯದ ಮಾತಲ್ಲ ಹೇಮಾ, ನಾ ಹೇಳೂದು. ಅವರ್ಯಾರಲ್ಲೂ ಇರದಂಥಾ ಒಂದು ತರದ ಮಿಂಚು ನಿನ್ನಲ್ಲಿ ಕಾಣಿಸಿತು ನನಗೆ. ಅದೂ–ಅವೊತ್ತು ರಾತ್ರಿ ರೈಲಿನಲ್ಲಿ ಬೆಳಗಾವಿಗೆ ಬರ್ತಿದ್ದಾಗ. ಆಗಿನ ನಿನ್ನ ಆ ಬಿಳಿಯ ಖಾದೀ ಸೀರೆ, ಖಾದೀ ರವಕೆ ನನ್ನ ಮನಸ್ಸಿನ ಮೇಲೆ ಬಹಳ ಪರಿಣಾಮ ಮಾಡಿತು. ನಿನ್ನ ಮಾತುಗಳೂ ಅಷ್ಟೆ. ಎಲ್ಲಿಗೋ ಹರಿಯುತ್ತ ಹೊರಟಿದ್ದ ನನ್ನನ್ನು ಹೋರಾಟದ ರಂಗಕ್ಕೆ ತಂದು ನಿಲ್ಲಿಸಿತು. ನೀನು ಬರೀ ಹೆಣ್ಣಲ್ಲ, ನನ್ನ ಕಣ್ಣಿಗೆ ಹೇಮಾ. ಕವಿಗಳಿಗೆ ಸ್ಫೂರ್ತಿ ಬರಬೇಕಂತೆ ಕಾವ್ಯ ರಚಿಸೋದಕ್ಕೆ ಮೊದಲು. ಹಾಗೆ ನಾನು ಚಳವಳಿಗೆ ಬೀಳುವದಕ್ಕೆ ನೀ ಸ್ಫೂರ್ತಿಯಾಗಿ ಬಂದೆ ಹೇಮಾ," ಎಂದು ನುಡಿದು ಆತ ಕುಳಿತ ಸ್ಥಳದಿಂದ ಎದ್ದು ಗುಡಿಯಲ್ಲಿ ಅಡಿಯಿಡತೊಡಗಿದ.

ಹೇಮಾ ಆನಂದದಿಂದ ಉಬ್ಬಿಹೋಗಿದ್ದಳು. ಅವಳ ಉಪಾಯ ಪೂರ್ಣವಾಗಿ ಫಲಿಸಿದ್ದಿತು.

ಆಕಸ್ಮಾತ್ತಾಗಿ ಎಂಥದೋ ಕೂಗು ಕೇಳಿಬಂದಿತು. ಹೇಮಾಗೆ ಕೊಂಚ ಭಯವಾಗದಿರಲಿಲ್ಲ. "ಏನದು ಕೂಗು, ವಿಶ್ವನಾಥ?" ಎಂದಳು.

"ಏನೂ ಇಲ್ಲ ಹೇಮಾ. ನರಿಗಳು ಕೂಗಿಕೊಳ್ತಿರಬಹುದು. ನೀನು ಮಲಗು. ನಾ ಎಚ್ಚರಾಗಿಯೇ ಇರ್ತೇನೆ," ಎಂದ.

ಹೇಮಾವತಿಗೆ ನಿದ್ರೆ ಬರುವ ಹಾಗಿರಲಿಲ್ಲ. ಆತ ರಾತ್ರಿಯೆಲ್ಲ ಹಾಗೇ ನಿದ್ರೆಯಿಲ್ಲದೆ ಕಳೆಯುವುದನ್ನು ನೆನೆದಾಗ ಆಕೆಗೆ ಕಳವಳವಾಗದಿದ್ದೀತೇ? ಆದರೇನು ಮಾಡುವುದು? ಬೇರೆ ಉಪಾಯವಿರಲಿಲ್ಲ.

"ನೀನೂ ಮಲಗಿಕೊಂಡು ಬಿಡು, ವಿಶ್ವನಾಥ."

"ನಾ ಮಲಗಿದರೆ ಯಾವುದಾದರೂ ಕಾಡುಪ್ರಾಣಿ ಬಂದುಬಿಟ್ಟೀತು ಒಳಕ್ಕೆ. ಹೇಳಿ ಕೇಳಿ ಕೊಳ್ಳ. ಎಂಥೆಂಥ ಪ್ರಾಣಿಗಳಿದಾವೋ ಯಾರಿಗೆ ಗೊತ್ತು? ಕಿರುಬ ಇದ್ದರೂ ಇದ್ದೀತು."

"ಕಿರುಬ ಅಂದ್ರೇನು ವಿಶ್ವನಾಥ ?"

"ತೋಳ ಇದ್ದಂತೆ ಇರುತದ. ನಾಯಿ ಅಂದರ ಬಹಳ ಪ್ರೀತಿ ಅದಕ್ಕೆ. ನಮ್ಮೂರಿನೊಳಗಿನ ಎಷ್ಟೋ ನಾಯಿಗಳನ್ನ ಕಿರುಬ ಹೊತ್ತುಕೊಂಡು ಹೋದದ್ದು ನನಗ ನೆನಪದ."

"ಮನುಷ್ಯರನ್ನೂ ತಿನ್ನುತದೇನು ಅದು ?"

"ಸಿಕ್ಕರೆ ಬಿಟ್ಟೀತೇನು ? ಮಾಂಸಾಹಾರಿ ಪ್ರಾಣಿ ಮೊದಲೇ. ಮಲಗಿಕೋ ಹೇಮಾ. ನಾ ಕಾವಲು ಮಾಡುತಿರ್ತೇನೆ. ಹತ್ತಿರ ಪಿಸ್ತೂಲೂ ಅದ. ಏನೂ ಅಂಜಿಕೆ ಇಲ್ಲ."

"ಪೋಲೀಸರು ಬಂದುಬಿಡಬಾರದು ಅಷ್ಟೆ."

"ಇಂಥಾ ಕೊಳ್ಳಕ್ಕೆ ಯಾತಕ್ಕೆ ಸಾಯಲಿಕ್ಕೆ ಬರ್ತಾರ ಅವರು ? ಅವರ ಬಗ್ಗೆ ಚಿಂತೀ ಮಾಡಬೇಡ. ಮಲಕ್ಕೋ."

ಕಂಬಳಿಯಲ್ಲಿ ಮುಖ ಮುಚ್ಚಿಕೊಂಡು ಹೇಮಾ ಪಕ್ಕಕ್ಕೆ ತಿರುಗಿ ಮಲಗಿ ಕೊಂಡಳು. ವಿಶ್ವನಾಥ ಜಲಪಾತವನ್ನೆ ದಿಟ್ಟಿಸುತ್ತ ಗುಡಿಯ ಪಡಸಾಲೆಯಲ್ಲಿ ಶತಪಥ ಹಾಕುತ್ತಿದ್ದ.

ಅರ್ಧ ತಾಸು ಕಳೆದಿರಬಹುದು. ಕಂಬಳಿಯೊಳಗಡೆ ಹುದುಗಿಕೊಂಡಿದ್ದ ಹೇಮಾ ನಿದ್ರೆಹೋದ ಹಾಗೆ ತೋರುತ್ತಿತ್ತು. ವಿಶ್ವನಾಥ ಗುಡಿಯನ್ನು ಬಿಟ್ಟು ಹೊರಗಡೆ ಬಂದ. ಮೊದಲಿನಕಿಂತಲೂ ಶೋಭಾಯಮಾನವಾಗಿತ್ತು ಆ ಹೊರಗಣ ಸೃಷ್ಟಿ. ಚಂದ್ರಮನ ಬೆಳಕೂ ಹೆಚ್ಚು ಅಂದವಾಗಿ ಹರಡಿಕೊಂಡಿದ್ದಿತು. ಕನಸಿನ ದೇವತೆಗಳು ಕುಣಿಯುವ ಹಾಗೆ ಎದುರಿಗೆ ಜಲದೇವತೆ ಕುಣಿಯುತ್ತಿದ್ದಳು. ಗುಡಿಯ ಎದುರಿಗಿನ ಕಟ್ಟೆಯ ಮೇಲೆ ಕುಳಿತುಕೊಂಡು ವಿಶ್ವನಾಥ ಜಲಪಾತ ವನ್ನೇ ಎವೆಯಿಕ್ಕದೆ ದಿಟ್ಟಿಸುತ್ತಿದ್ದ ಹಾಗೆ ತಡಸಲಿನ ಅಡಿಯಲ್ಲಿ ಮರದ ನೆರಳಿನಲ್ಲಿ ಆಕೃತಿಯೊಂದು ಬಾಗಿ ನೀರು ಕುಡಿಯುತ್ತಿದ್ದ ಹಾಗೆ ಭಾಸವಾಯಿತು. ವಿಶ್ವನಾಥ ಕಣ್ಣರಳಿಸಿ ಸೂಕ್ಷ್ಮವಾಗಿ ದಿಟ್ಟಿಸಿ ನೋಡಿದ. ಯಾವುದಾದರೊಂದು ಕಾಡು ಮಿಕ ನೀರು ಕುಡಿಯಲು ಬಂದಿರಬಹುದೆಂದು ಮೊದಲು ಆತನಿಗನ್ನಿಸಿದ್ದಿತು. ಆದರೆ, ನೀರು ಕುಡಿಯುವುದನ್ನು ಮುಗಿಸಿ ಆ ಆಕೃತಿ ಮೇಲಕ್ಕೆದ್ದಾಗ ಬೆಳದಿಂಗಳು ಅದನ್ನು ಸ್ಫುಟವಾಗಿ ತೆರೆದು ತೋರಿಸಿತು. ಅದು ಮನುಷ್ಯನ ಆಕೃತಿಯೆಂಬುದ ರಲ್ಲಿ ಯಾವ ಸಂದೇಹವೂ ಉಳಿಯುವಂತಿರಲಿಲ್ಲ.

ಇಂಥ ಸ್ಥಳದಲ್ಲಿ, ಇಂಥ ರಾತ್ರಿಯಲ್ಲಿ, ಜಲಪಾತದ ಅಡಿಯಲ್ಲಿ ಮನುಷ್ಯಾಕೃತಿ ಕಾಣಿಸಿದೊಡನೆ ವಿಶ್ವನಾಥನಿಗೆ ಕೊಂಚ ಭೀತಿ ಹುಟ್ಟದಿರಲಿಲ್ಲ. ನಿರ್ಜನ ಪ್ರದೇಶ ಗಳಲ್ಲಿ ಭೂತಗಳು ವಿಹರಿಸುವವೆಂದು ಚಿಕ್ಕತನದಲ್ಲಿ ಅಜ್ಜಿ ಹೇಳುತ್ತಿದ್ದುದು ಅವನ ನೆನಪಿಗೆ ಬಂದಿತು. ವಯಸ್ಸು ಹೆಚ್ಚಿದ ಹಾಗೆ ಭೂತಗಳ ಬಗೆಗೆ ಅವನಲ್ಲಿ ಅಪನಂಬಿಕೆ ಹುಟ್ಟಿದ್ದರೂ ಆ ಸನ್ನಿವೇಶದಲ್ಲಿ, ಆ ಒಂದು ಕ್ಷಣದಲ್ಲಿ, ಅವನಿಗೆ ಅದು ಭೂತವಾಗಿದ್ದರೂ ಇರಬಹುದು ಎಂದೆನ್ನಿಸದಿರಲಿಲ್ಲ. ಗಿಡದ ನೆರಳಿನ ಮರೆಯಿಂದ ಆ ಆಕೃತಿ ಮೆಲ್ಲನೆ ಈಚೆಗೆ ಬಂದಾಗ ಸಾಕಷ್ಟು ದಪ್ಪಗೆ ಎತ್ತರ ವಾಗಿದ್ದ ರೂಪು ಗೋಚರವಾಯಿತು.

ವಿಶ್ವನಾಥನ ಬಲಗೈ ತಾನಾಗಿಯೆ ಜೇಬಿಗೆ ನುಗ್ಗಿ ಪಿಸ್ತೂಲನ್ನು ಹಿಡಿದು ಕೊಂಡಿತು. ಸ್ತಬ್ಧವಾಗಿ ಕುಳಿತಿದ್ದಂತೆಯೆ ಆತ ಆ ಆಕೃತಿಯ ಚಲನವಲನಗಳ ನ್ನೆಲ್ಲ ನಿರೀಕ್ಷಿಸುತ್ತಿದ್ದ. ಅವನಿಗೆದುರಾಗಿಯೆ ನಡೆದುಬರುತ್ತಿತ್ತು ಅದು. ಕೊಂಚ ಹತ್ತಿರ ಬಂದಾಗ ಆತ ಅಲ್ಲಿ ಕಟ್ಟೆಯ ಮೇಲೆ ಕುಳಿತಿದ್ದುದನ್ನು ಕಂಡೋ ಏನೊ, ಹಠಾತ್ತನೆ ಹಿಂದೆ ಸರಿದು ಗಿಡಗಳ ಗುಂಪಿನಲ್ಲಿ ಮರೆಯಾಯಿತು. ಮೈಯೆಲ್ಲ ಕಣ್ಣಾಗಿ ನೋಡುತ್ತಿದ್ದ ವಿಶ್ವನಾಥನಿಗೆ ಅಚ್ಚರಿಯಾಗದಿರಲಿಲ್ಲ. ಭೂತಗಳು ಅದೃಶ್ಯವಾಗುವ ವಿಚಾರವನ್ನಾತ ಕೇಳಿ ತಿಳಿದಿದ್ದ. ಆದರೆ ಎದುರಿಗಿನ ಆ ಆಕೃತಿ ಅದೃಶ್ಯವಾಗಿರಲಿಲ್ಲ. ಮನುಷ್ಯರ ಹಾಗೇ ಸರಿದುಕೊಂಡು ಅವಿತುಕೊಳ್ಳಲು ಯತ್ನಿಸುತ್ತಿದ್ದಿತು. ಅದು ಭೂತವಲ್ಲವೆಂಬುದಂತೂ ನಿಶ್ಚಿತವಾದಂತಾಯಿತು. ಒಡನೆಯೆ ಇನ್ನೊಂದು ಸಂದೇಹ ಅವನ ಮನದಲ್ಲಿ ಸುಳಿಯಿತು. ತಮ್ಮಿಬ್ಬರನ್ನು ಶೋಧಿಸುತ್ತ ಅಲ್ಲಿಗೆ ಸಿ. ಐ. ಡಿ. ಗಳಾರಾದರೂ ಬಂದಿರಲಿಕ್ಕಿಲ್ಲವಷ್ಟೆ? ಈತ ಅವರಲ್ಲೊಬ್ಬನಾಗಿದ್ದರೂ ಇರಬಹುದೋ ಏನೊ! ಜೇಬಿನಿಂದ ಪಿಸ್ತೂಲನ್ನು ತೆಗೆದು, ಕೈಯಲ್ಲಿ ಹಿಡಿದುಕೊಂಡು, ಆತ ಎದ್ದು ನಿಂತು ಕೂಗಿದ: "ಯಾರು ಅವರು, ಅಲ್ಲಿ ಅಡಗಿಕೊಂಡಿರುವವರು? ಈ ಕಡೆ ಬರ್‍ರಿ."

ಆ ವ್ಯಕ್ತಿ ಗಿಡಗಳ ಮರೆಯಿಂದ ಈಚೆಗೆ ಬರದೆ ಹಾಗೇ ಹಿಂದೆ ಹಿಂದೆ ತಿರುಗತೊಡಗಿದಾಗ ವಿಶ್ವನಾಥನಿಗೆ ಸಂದೇಹ ಬಲಗೊಂಡಿತು. ಪಿಸ್ತೂಲನ್ನು ಬಿಗಿಯಾಗಿ ಹಿಡಿದುಕೊಂಡು ಆ ವ್ಯಕ್ತಿಯಿದ್ದ ಗಿಡದ ಕಡೆಗೆ ನುಗ್ಗಿದ. ಆತ ಮುಂದುವರಿದೊಡನೆ ಆ ವ್ಯಕ್ತಿಯೂ ರಭಸದಿಂದ ಹಿಂದೆ ಹಿಂದೆ ಸರಿಯತೊಡಗಿತು.

ವಿಶ್ವನಾಥ ಓಡುತ್ತ ಹೋಗಿ, ಅದರ ಸಮಿಯಕ್ಕೆ ಬಂದು ಕೂಗಿ ಹೇಳಿದ : "ನಿಲ್ಲು, ನೀನಾರೋ ನೋಡಬೇಕು, ಮುಂದೆ ಹೆಜ್ಜೆ ಇಟ್ಟರೆ ಗುಂಡು ಹಾರಿಸುತ್ತೇನೆ."

ತನ್ನ ಬೆದರಿಕೆಯ ಮಾತಿಗೂ ಸೊಪ್ಪು ಹಾಕದೆ ಆ ವ್ಯಕ್ತಿ ಓಡಿಹೋಗಬಹುದೆಂದು ಆತ ಭಾವಿಸಿಕೊಂಡಿದ್ದ. ಆದರೆ ಅದು ತಪ್ಪಾಯಿತು. ಓಡಲೆಳಸುತ್ತಿದ್ದ ವ್ಯಕ್ತಿ ಹಠಾತ್ತಾಗಿ ನಿಂತುಕೊಂಡು ಹೊರಳಿ ನೋಡಿತು. ಚಂದ್ರನ ಬೆಳಕಿನಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತಿದ್ದ ವಿಶ್ವನಾಥನನ್ನು ಪೂರ್ಣವಾಗಿ ನಿರುಕಿಸಿ ನೋಡಿತು. ಅವನ ಗುರುತು ತಿಳಿದೋ ಏನೊ, ನಿಂತ ಸ್ಥಳದಿಂದಲೆ ಕೂಗಿ ಕೇಳಿತು : "ಯಾರಪ್ಪಾ ಅವರು ? ನಮ್ಮ ದೇಸಾಯರೋ ಏನು ?"

ಆ ದನಿಯ ಗುರುತು ತಿಳಿಯುತ್ತಲೂ ವಿಶ್ವನಾಥನಿಗೆ ಆಶ್ಚರ್ಯದ ಆಘಾತವಾಗದಿರಲಿಲ್ಲ. ಪಿಸ್ತೂಲನ್ನು ಜೇಬಿಗೆ ಬಿಟ್ಟು ಆನಂದದಿಂದ ಆತ ಉದ್ಗಾರ ತೆಗೆದ:

"ಯಾರು ? ಸಂಗಣ್ಣ !"

## ೨೬

ಸಂಗಣ್ಣ, ಪೈಲ್ವಾನ್ ಸಂಗಣ್ಣ, ತಮ್ಮ ಗುಂಪಿನಲ್ಲಿ ಭೀಮಸೇನನೆಂದು ಹೆಸರುಗೊಂಡಿದ್ದ ಶೂರ ಸಂಗಣ್ಣ ಅಂದು ಕಾಹಿಲೆ ಬಿದ್ದಿದ್ದ ತನ್ನ ತಾಯಿಯನ್ನು ಕಂಡು, ಶೇಖರನ ಮನೆಯವರಿಗೂ ಆನಂದದ ಸುದ್ದಿ ತಿಳಿಸಲು ಕಲ್ಲಾಪುರಕ್ಕೆ ಹೋಗಿ, ಅಕಸ್ಮಾತ್ತಾಗಿ ಪೋಲೀಸರ ಕೈಗೆ ಸಿಕ್ಕಿಬಿದ್ದು ಸೆರೆಮನೆ ಸೇರಿದ್ದ ಸಂಗಣ್ಣ, ಎರಡು ವರ್ಷ ಸಶ್ರಮಶಿಕ್ಷೆ ಹೊಂದಿ ಹಿಂಡಲಗಿಗೆ ಹೋದ ಸಂಗಣ್ಣ ಇಲ್ಲಿ, ಈ ಕೊಳ್ಳದಲ್ಲಿ ಒಮ್ಮಿಂದೊಮ್ಮೆಲೆ ಭೆಟ್ಟಿಯಾಗುವದೆಂದರೇನು ! ಎಲ್ಲವೂ ವಿಲಕ್ಷಣವೆ. ಹಿಂಡಲಗಿಯ ಗೋಡೆಗಳ ಮೇಲಿನಿಂದ ಹಾರಿ ಆಕಾಶದಲ್ಲಿ ನಡೆದು ಇಲ್ಲಿಗೆ ಬಂದಿಳಿದನೇನೊ ಎಂದುಕೊಂಡ ವಿಶ್ವನಾಥ.

ಸಂಗಣ್ಣ ಉತ್ಸಾಹದಿಂದ ನೆಗೆಯುತ್ತ ಬಂದು ವಿಶ್ವನಾಥನನ್ನು ಗಟ್ಟಿಯಾಗಿ ತಬ್ಬಿಕೊಂಡ—ಜಟ್ಟಿಗಳ ಪದ್ಧತಿಯಂತೆ. "ಯಾರೋ ಸಿ. ಐ. ಡಿ. ಗಳು ನನ್ನ ನೋಡಿದ್ದರೆಂದು ತಿಳಿದಿದ್ದೆ. ನೀವು ಅಂತ ಗೊತ್ತಾಗುತ್ತಲೂ ಎಷ್ಟು ಆನಂದ ಆಯ್ತು ಅಂತೀರಿ !" ಎಂದ.

"ನಿನ್ನ ಹಾಗೇ ನಾನೂ ನಿನ್ನ ಕಂಡು ಯಾರೋ ಸಿ. ಐ. ಡಿ. ಇರಬಹುದು ಅಂತ ಮಾಡಿದ್ದೆ. ಅದಕ್ಕೇ ಪಿಸ್ತೂಲು ಎತ್ತಿ ಗದರಿಸಿದ್ದು. ಎಲ್ಲಿಂದ ಬಂದೆ ಸಂಗಣ್ಣ, ಇಂಥಾ ರಾತ್ರಿಯೊಳಗ ? ಆಕಾಶದಿಂದ ಇಳಿದು ಬಂದ ಹಾಗೆ ?"

"ಅದೊಂದು ದೊಡ್ಡ ಕತೆ ದೇಸಾಯರು. ಎಲ್ಲಾದ್ರೂ ಕೂತುಕೊಳ್ಳೋಣ ಮೊದಲು. ನಡದು ನಡದು ಸಾಕಾಗೈತಿ. ಮಲಗಬೇಕಂದರ ಹೊರೂದಕ್ಕೇನೂ ಇಲ್ಲ. ಯಾವ ಊರಿಗೂ ಕಾಲಿಡೂ ಹಾಂಗಿಲ್ಲ. ಪೋಲೀಸರು ಸುತ್ತುಮುತ್ತು ತುಂಬಿ ಬಿಟ್ಟಾರಂತ ಸುದ್ದಿ. ಹೌದೇನ್ರಿ ?"

ಅವನನ್ನು ಕಟ್ಟೆಯ ಬಳಿ ಕರೆದುಕೊಂಡು ಬಂದು ವಿಶ್ವನಾಥ ಕುಳಿತು ಕೊಂಡ. "ಕೂಡ್ರು ಸಂಗಣ್ಣ, ನೀ ಕೇಳಿದ ಸುದ್ದಿ ನಿಜ. ಮೀನಗಳನ್ನು ಹಿಡಿಯೂದಕ್ಕೆ ಜಾಲಗಾರ ದೊಡ್ಡ ಬಲೆ ಬೀಸಿದಂತೆ ಸರಕಾರ ಪೋಲೀಸರ ಬಲೆ ಬೀಸಿದೆ. ಎಲ್ಲಿ ನೋಡಿದರೂ ಪೋಲೀಸರು. ನಾವೂ ನಿನ್ನ ಹಾಗೇ ಅವರ ಕಣ್ಣು ತಪ್ಪಿಸಿ ತಿರುಗುತ್ತಾ ಇಲ್ಲಿಗೆ ಬಂದಿದ್ದೇವೆ," ಎಂದು ನುಡಿದು ಅಂದು ಬೆಳಗ್ಗೆ ಹೇಮಾವತಿಯನ್ನೊಡಗೊಂಡು ತಾನು ಅಲ್ಲಿಗೆ ಬಂದುದನ್ನೆಲ್ಲ ವಿವರವಾಗಿ ತಿಳಿಸಿದ.

"ಈಗ ಅವರು ಮಲಗಿದಾರೇನು ? ಆ ಗುಡಿಯೊಳಗ ?"

"ಹೌದು, ಪಾಪ. ಬಹಳ ದಣಿದಿದ್ದಾಳೆ. ಚಳಿ ಬೇರೆ ಬಹಳ."

"ಪಾಪ. ಹೆಣ್ಣುಮಗಳು. ಇಂಥ ವನವಾಸ ಬರಬಾರದು ಅವರಿಗೆ," ಎಂದು ಕನಿಕರದಿಂದ ನುಡಿದ ಸಂಗಣ್ಣ.

"ನಿನ್ನ ಸುದ್ದಿ ಏನು ಸಂಗಣ್ಣ ? ಜೇಲಿನಿಂದ ಪಾರಾಗಿ ಬಂದೆಯೋ ಏನು ?"

"ಹೌದು. ಮೊದಲಿನಿಂದಲೂ ಅದೇ ಹಂಚಿಕೆಯೊಳಗಿದ್ದೆ. ಪ್ರಸಂಗ ಕೈಗೆ ಬಂದ್ಹಾಗ ಪಾರಾಗಿಬಿಟ್ಟೆ."

"ಹ್ಯಾಗಪ್ಪಾ ಹಿಂಡಲಗಿಯಿಂದ ಓಡಿಬಂದೆ ? ದೊಡ್ಡ ಜೇಲು ಅದು....!" ಎಂದು ಬೆರಗುಗೊಂಡು ಕೇಳಿದ ವಿಶ್ವನಾಥ.

"ಅಲ್ಲಿಂದಲ್ಲ ನಾ ತಪ್ಪಿಸಿಕೊಂಡದ್ದು. ನಮ್ಮಲ್ಲಿ ಕೆಲವರನ್ನ ಯರವಡಾ ಕ್ಯಾಂಪ ಜೇಲಿಗೆ ವರ್ಗಾಯಿಸಿದ್ದರು. ಅಲ್ಲಿ ಅಷ್ಟೇನೂ ಬಂದೋಬಸ್ತಿ ಇರಲಿಲ್ಲ. ಪೋಲೀಸರ ಕಣ್ಣು ತಪ್ಪಿಸಿ ಪಾರಾಗಿ ಬಂದೆವು."

"ಎಷ್ಟು ಜನರು ?"

"ಒಟ್ಟು ಇಪ್ಪತ್ತೈದು ಮಂದಿ, ನಮ್ಮ ಕಡೆಯುವರು. ನಮ್ಮ ಸಂಗಡ ಬೆಳಗಾವಿಯ ಕಾಲೇಜು ಹುಡುಗರೂ ಕೆಲವರಿದ್ದರು. ಅವರೂ ನಾವೂ ಎಲ್ಲಾ ಸೇರಿ ಪಾರಾಗಿ ಬಂದೆವು."

"ಪುಣೆಯಿಂದ ಇಲ್ಲಿಯ ತನಕ ಹ್ಯಾಗೆ ಬಂದೆ ?"

"ಪುಣೆಯೊಳಗ ಕಾಂಗ್ರೆಸ್ಸಿನವರೊಬ್ಬರು ನಮಗೆಲ್ಲಾ ಗಾಡಿ ಖರ್ಚು ಕೊಟ್ಟರು. ವೇಷ ಬದಲು ಮಾಡಿಕೊಂಡು ಹ್ಯಾಂಗೋ ಬೆಳಗಾವಿಯ ತನಕ ಬಂದೆ. ಅಲ್ಲಿಂದ ಕಲ್ಲಾಪುರಕ್ಕ ಹೋಗಿ ನಮ್ಮ ಅಪ್ಪನ್ನ ನೋಡಬೇಕಾಗಿತ್ತು. ಆದರ ಅಲ್ಲಿ ಸಿ. ಐ. ಡಿ.ಗಳು ತುಂಬಿದ್ದಾರಂತ ಸುದ್ದಿ ತಿಳಿದ ವ್ಯಾಲ, ಅಲ್ಲಿಗೆ ಹೋಗುವದನ್ನ ನಿಲ್ಲಿಸಿ, ಗೋಕಾವಿಗೆ ಹೋಗಬೇಕಂತ ಹೊರಟೇನಿ."

"ಅಲ್ಲಿಗ್ಯಾಕಪ್ಪ ?"

"ಅದು ನನ್ನ ಹೆಂಡತಿಯ ತವರುಮನೆ. ನಮ್ಮಪ್ಪ ಸತ್ತವ್ಯಾಲ ಆಕೇನ್ನ ತವರಿಗೆ ಕಳಿಸಿದಾನ ಅಪ್ಪ. ನನ್ನ ಪೋಲೀಸರು ಹಿಡಿದಾಗ ತುಂಬು ಬಸುರಿ ಆಕೆ. ನೋಡಬೇಕಂತ ಮನಸಾಗೈತಿ. ಒಮ್ಮೆ ನೋಡಿದರ ಮುಗೀತು. ಆವ್ಯಾಲ ಮತ್ತೆ ಶೇಖರಣ್ಣನ ಕೂಡಿಕೊಳ್ಳೋದು."

"ಮತ್ತೆ ಚಳವಳಿಗೆ ಸೇರುತ್ತೀಯಾ ?"

"ಮತ್ತೆ ? ಸೇರುವದಿಲ್ಲಂತ ತಿಳಿದಿದ್ದಿರೋ ಏನು, ದೇಸಾಯರ ? ಚಳವಳಿಗೆ ಸೇರುವ ವಿಚಾರ ಇರದಿದ್ದರ ಓಡಿಯಾದರೂ ಯಾತಕ್ಕ ಬರ್ತಿದ್ದೆ ನಾನು ? ಅಲ್ಲೇ ಜೇಲಿನೊಳಗ ಇರಲಿಕ್ಕೆ ಬರ್ತಿತ್ತಲ್ಲ ಗಂಜೀ ರೊಟ್ಟೀ ತಿಂದುಕೊಂಡು. ಆದರ ಅಲ್ಲಿ ಸುಮ್ಮನ ಕೊಳೀಲಿಕ್ಕೆ ಮನಸ್ಸಾಗಲಿಲ್ಲ. ಅಲ್ಲದೆ, ಶೇಖ್ರಣ್ಣ ಬ್ಯಾರೆ ನಮಗ ಮತ್ತ ಮತ್ತ ಹೇಳ್ತಿದ್ದ : 'ಜೇಲಿಗೆ ಹೋಗುವ ಚಳವಳಿ ಅಲ್ಲ ಇದು. ಪೋಲೀಸರ ಕಣ್ಣಾಗ ಮಣ್ಣು ಹಾಕಿ, ಹೊರಗೆ ಇದ್ದುಕೊಂಡು ಹೋರಾಡುವ ಚಳವಳಿ' ಅಂತ. ಆ ಪೋಲೀಸರ ಗುಂಡು ಹತ್ತಿ ನಮ್ಮ ಅಪ್ಪ ಕಣ್ಮುಚ್ಚಿದಾಗಲೇ ನಾನು ಪ್ರತಿಜ್ಞೆ ಮಾಡಿದ್ದೇನಿ. ಸ್ವಾತಂತ್ರ್ಯ ಬರೂತನಕ ಹೋರಾಡಬೇಕು— ಇಲ್ಲದಿದ್ದರ ಸಾಯಬೇಕು—ಅಂತ...."

"ಹಾಗೆಲ್ಲಾ ಮಾತಾಡಬೇಡ ಸಂಗಣ್ಣ. ಸ್ವಾತಂತ್ರ್ಯ ಬರದೆ ಎಲ್ಲಿ ಹೋಗುತದ? ನಿನ್ನಂಥ ತರುಣರು ಎಲ್ಲದಕ್ಕೂ ತಯಾರಾಗಿರುವಾಗ ಸ್ವಾತಂತ್ರ್ಯ ಬರದೆ ಇದ್ದೀತೇನು ?"

"ಶ್ರೀಕೃಷ್ಣ ಈಗ ಎಲ್ಲಿದಾನ ದೇಸಾಯರು ?"

"ಎಲ್ಲಿದಾನೋ ನನಗೂ ಗೊತ್ತಿಲ್ಲ. ಶನಿವಾರ ದಿನ ಬೆಳಗಾವಿಯೊಳಗ ಭೆಟ್ಟಿಯಾಗಬೇಕಂತ ಹೇಳಿದಾನ. ಮುಂದೆ ಕೊಲ್ಲಾಪುರಕ್ಕ ಹೋಗಬೇಕಾಗಿದೆ. ಅಲ್ಲೊಂದು ಸಭಾ ಕರೆದಾರ. ಕಾಂಗ್ರೆಸ್ಸಿನವರೆಲ್ಲಾ ಬರ್ತಾರ."

"ಹಿಂಗೇನು ? ನೆಟ್ಟಗಾಯ್ತೇಳ್ರಿ. ಅಷ್ಟರಾಗs ನಾನೂ ಗೋಕಾವಿಗೆ ಹೋಗಿ ಬಂದಿರುತೀನಿ."

"ಯಾವಾಗ ಹೊರಡ್ತೀಯಪ್ಪ ಗೋಕಾವಿಗೆ ?"

"ಈಗ ಹೊರಟೇಬಿಟ್ಟೆದ್ದೆ–ಇಲ್ಲಿ ನೀರು ಕುಡಿದು. ಅಷ್ಟರಾಗs ನೀವು ಭೆಟ್ಟಿ ಆದಿರಿ. ಬೆಳಕಾದ ಮ್ಯಾಲ ಹೊರಗೆ ಅಡ್ಡಾಡುವ ಹಾಂಗಿಲ್ಲ. ನೀವು ಎಲ್ಲಿಗೆ ಹೋಗಬೇಕಂತ ಮಾಡಿದ್ದೀರಿ ?"

"ಸ್ವಾಮಿಗಳ ಮಠಕ್ಕೆ ಹೋಗಿ ಹೇಮಾವತಿಯನ್ನ ಅಲ್ಲಿ ಬಿಟ್ಟು, ನಾ ಬೆಳಗಾವಿಗೆ ಹೋಗಬೇಕಂತ ವಿಚಾರ ಮಾಡಿದ್ದೆ."

"ಹೊರಡೂದಾದರೆ ಈಗಲೇ ಹೊರಡಬೇಕು ದೇಸಾಯರು. ಬೆಳಕು ಆಗೂದರೊಳಗಾಗಿ ಮಠಾ ಸೇರಬಹುದು. ನಾಳೆ ಎಲ್ಲಾ ಅಲ್ಲಿದ್ದು, ರಾತ್ರಿ ನಾವಿಬ್ಬರೂ ಹೊರಟುಬಿಡಬಹುದು."

"ಸರಿ. ಆದರೆ ಹೇಮಾ ಬಹಳ ದಣಿದುಬಿಟ್ಟಾಳ. ಕೂಸು ಮಲಗಿದಂತೆ ಮಲಗಿದಾಳ, ಆಕೀನ್ನ ಪಾಪ ಹ್ಯಾಗೆ ಎಬ್ಬಿಸೂದು ಈಗ ?"

"ಪೋಲೀಸರ ಕೈಗೆ ಸಿಗಬಾರದಂತ ಮನಸ್ಸಿದ್ದರ ಎಬ್ಬಿಸಾಕs ಬೇಕು ದೇಸಾಯರು. ಹಗಲುಹೊತ್ತು ಇಲ್ಲಿರೂದು ನೆಟ್ಟಗಲ್ಲ. ಸಿಕ್ಕರೆ ಸುಮ್ಮನ ಜೇಲಿಗೆ ಹೋಗಿ ಬೀಳಬೇಕು. ಅದೆಲ್ಲಾ ಯಾಕಂತೆ, ಹೊರಟುಬಿಡೋಣ. ಇಲ್ಲಿಂದ ಮಠಾನೂ ದೂರ ಇಲ್ಲ. ಮೂರು ಹರದಾರಿ ನಡದರ ಬರುತೈತಿ."

"ಬೆಳಕು ಹರಿಯುವದರೊಳಗೆ ಅಲ್ಲಿಗೆ ಹೋಗಲಿಕ್ಕಾದೀತೇನು ?"

"ಲಕ್ಷ ಬೆಳದಿಂಗಳೈತಿ. ಲಗೂ ಲಗೂ ನಡೆದುಹೋದರ ಕೋಳಿ ಕೂಗುವದರೊಳಗಾಗಿ ಸೇರಬಹುದು. ಎಬ್ಬಿಸ್ರಿ ಅಕ್ಕಾ ಅವರನ್ನ !"

## ೨೭

ಮಠದ ಪಡಸಾಲೆಯ ಗೋಡೆಯ ಮೇಲೆ ನೇತಾಡುತ್ತಿದ್ದ ಗಡಿಯಾರದಲ್ಲಿ ಹನ್ನೆರಡು ಗಂಟೆಯಾದುದು ಕಂಡುಬಂದಾಗ ಬಾಬಾಸಾಹೇಬರು ಮೇಲಕ್ಕೆದ್ದರು. ಪಕ್ಕದಲ್ಲೇ ಕುಳಿತಿದ್ದ ಕೀರ್ತಿನಾಥನೂ ಎದ್ದು ಮಲಗುವ ಸಿದ್ಧತೆಗೆ ಆರಂಭಿಸಿದ. ಎದುರಿಗಿನ ವೇದಿಕೆಯ ಮೇಲೆ ಗಂಭೀರಮುದ್ರೆಯಿಂದ ಮಂಡಿಸಿದ್ದ ಸ್ವಾಮೀಜಿ ಯವರೂ ಮೇಲಕ್ಕೆದ್ದರು.

"ಅಂತೂ ತಾವು ಯಾವುದಕ್ಕೂ ಒಪ್ಪುವದಿಲ್ಲ ಅಂದ ಹಾಗಾಯ್ತು. ತಮ್ಮ ಇಚ್ಛೆ. ನಾವು ಬೇರೆ ಉಪಾಯವಿಲ್ಲದೆ ತಮ್ಮನ್ನು ಬಂಧಿಸಬೇಕಾಗುವದು," ಎಂದ ಕೀರ್ತಿನಾಥ.

"ಶಿವನ ಮನಸ್ಸಿನಲ್ಲಿದ್ದರೆ ಅದೂ ಆಗಲಿ. ನಮಗೇನೂ ದುಃಖವಿಲ್ಲ," ಎಂದರು ಸ್ವಾಮಿಾಜಿ.

"ತಾವು ಇಂಥ ಹಟ ಯಾಕೆ ಹಿಡೀಬೇಕು ಅನ್ನೋದೇ ನನಗ ತಿಳೀ ಲೊಲ್ಲದು ಸ್ವಾಮೀಜಿ. ತಮ್ಮಂಥವರು ಜೇಲಿಗೆ ಹೋದರೆ ಮಠದ ಮರ್ಯಾದೆಗೆ ಕುಂದಲ್ಲವೇನು?" ಎಂದರು ದೇಸಾಯರು.

ಎದ್ದುಬಿಟ್ಟಿದ್ದ ಸ್ವಾಮೀಜಿ ಪುನಃ ಕುಳಿತುಕೊಂಡು, ದೃಢಸ್ವರದಲ್ಲಿ ನುಡಿದರು: "ಈ ಮಠದ ಇತಿಹಾಸ ಏನು ಅನ್ನೋದನ್ನ ನೀವು ಮರೆತಂತಿದೆ ದೇಸಾಯರೆ. ಮೊದಲಿಂದಲೂ ಸ್ವಾತಂತ್ರ್ಯಪ್ರಿಯ ಮಠ ನಮ್ಮದು. ಕಿತ್ತೂರು ದೇಸಾಯರ ಗುರುಪೀಠ ಇದು. ಈ ಸರಕಾರಕ್ಕ ವಿರುದ್ಧವಾಗಿ ಕತ್ತಿ ಹಿರಿದು ನಿಂತ ಚೆನ್ನಮ್ಮರಾಣಿ ಈ ಮಠದ ಭಕ್ತೆಯಾಗಿದ್ದಳು. ಜೇಲಿಗೆ ಹೋಗುವದ ರಿಂದ ಪೀಠದ ಮರ್ಯಾದೆ ಹೋಗುವದಕ್ಕೆ ಬದಲಾಗಿ ಹೆಚ್ಚಾಗುವದು. ನಮ್ಮ ಪೂಜ್ಯ ಗುರುಗಳ ಪವಿತ್ರ ಆತ್ಮಗಳಿಗೂ ಸಂತೋಷವಾಗುವದು."

"ಒಂದು ಸುದ್ದಿ ತಿಳಿಸಿಬಿಟ್ಟರೇನಾಗುತ್ತೈತಿ ಸ್ವಾಮೀಜಿ? ನಮಗ ಹೆಚ್ಚಿಗೇನೂ ಬೇಡ. ವಿಶ್ವನಾಥ ಮತ್ತು ಆ ಹುಡುಗಿ ಎಲ್ಲಿದಾರ ಅನ್ನೂದನ್ನ ತಿಳಿಸಿದರ ಸಾಕು, ತಮಗೆ ಹೆಚ್ಚು ತೊಂದರೆ ಕೊಡದೆ ಹೊರಟು ಹೋಗುತ್ತೇವೆ," ಎಂದು ದೇಸಾಯರು ಕಾತರರಾಗಿ ಹೇಳಿದರು.

ಅದುವರೆಗೆ ಶಾಂತಚಿತ್ತರಾಗಿ ಮಾತನಾಡುತ್ತಿದ್ದ ಸ್ವಾಮಿಾಜಿಯವರಿಗೆ ಕೊಂಚ ಬೇಸರು ಬಂದಂತಾಯಿತು. ಅವರೆಂದರು: "ನಮಗೆ ಗೊತ್ತಿಲ್ಲ ಅಂತ

ಎಷ್ಟು ಸಲ ಹೇಳೋಣ ? ಒಂದು ಸಲ ಹೇಳಿದರ ಸಾಲದೇನು ? ನಾವು ಸುಳ್ಳು ಹೇಳುತ್ತಿದ್ದೇವೆ ಅಂತ ನಿಮ್ಮ ಅಭಿಪ್ರಾಯವೋ ಏನು ?"

"ಹಾಂಗಲ್ಲ ಬುದ್ಧೀ, ಸಿಟ್ಟಾಗಬೇಡಿ. ಅವ ನನಗ ಒಬ್ಬನಽ ಒಬ್ಬ ಮಗ ಅನ್ನೂದು ತಮಗ ಗೊತ್ತಽ ಐತಿ. ಅವನ್ನ ಬಿಟ್ಟರೆ ಬೇರಾರೂ ನನಗಿಲ್ಲ. ಚಳವಳಿಯೊಳಗ ಸೇರಿ ಏನು ಘಾತ ಮಾಡಿಕೊಳ್ತಾನೋ ಅಂತ ಇಷ್ಟೆಲ್ಲ ಪ್ರಯತ್ನ ಮಾಡ್ತಾ ಇದ್ದೀನಿ. ಎರಡು ಮೂರು ಸಲ ಸಿಕ್ಕ ಅನ್ನೂದರೊಳಗ ತಪ್ಪಿಸಿಕೊಂಡು ಹೋದ. ಈಗ ನಿಮ್ಮ ಮಠದ ಕಡೆ ಹೋಗಿದ್ದಾನಂತ ಸುದ್ದಿ ಬಂದದ್ದರಿಂದ ಬಂದೀವಿ. ಗೊತ್ತಿದ್ದರ ಹೇಳಿಬಿಡಿ ಬುದ್ದೀ...."

ದೇಸಾಯರ ಹೃದಯದಲ್ಲಿ ನಡೆದ ಕೋಲಾಹಲದ ಕಲ್ಪನೆ ಸ್ವಾಮೀಜಿಯವರಿಗಿದ್ದಿತಾದರೂ ಆ ಸಮಯಕ್ಕೆ ಅವರ ಬಗ್ಗೆ ಕನಿಕರ ಬರಲಿಲ್ಲ. ಬಾಳಿನುದ್ದಕ್ಕೂ ತಪ್ಪು ದಾರಿ ತುಳಿಯುತ್ತ ಬಂದು, ಸರಕಾರದ ಬಾಲ ಹಿಡಿದುಕೊಂಡು, ಚಳವಳಿಗಳಿಗೆಲ್ಲ ವಿರೋಧ ಮಾಡುತ್ತ ದಿವಾನ್‌ಬಹದ್ದೂರ್ ಪದವಿಗಾಗಿ ಹಾತೊರೆದು ಕುಳಿತಿದ್ದ ಆ ವ್ಯಕ್ತಿ ಅವರಲ್ಲಿ ಯಾವ ಬಗೆಯ ಅನುಕಂಪವನ್ನೂ ಹುಟ್ಟಿಸಿರಲಿಲ್ಲ; ಅಂಥವರ ಬಗ್ಗೆ ಅವರಿಗೆ ಮರುಕ ಬರುವುದೂ ಸಾಧ್ಯವಿರಲಿಲ್ಲ. ಮಗನನ್ನು ಹುಡುಕುವುದಕ್ಕಾಗಿ ಆತ ಹಾತೊರೆಯುತ್ತಿರುವುದಕ್ಕೆ, ಅವನ ಮೇಲಿನ ಪ್ರೀತಿಗಿಂತಲೂ ಹೆಚ್ಚಾಗಿ ಅವನಿಂದಾಗಿ ತನ್ನ ದಿವಾನ್‌ಬಹದ್ದೂರ್ ಪದವಿಯ ಪ್ರಯತ್ನಕ್ಕೆ ಕಲ್ಲು ಬೀಳಬಾರದೆಂಬ ವ್ಯಾಮೋಹವೇ ಕಾರಣವಾಗಿತ್ತೆಂಬುದನ್ನು ಸ್ವಾಮೀಜಿ ಅರಿತಿರದಿರಲಿಲ್ಲ. ಅಂತೆಯೇ, ಅವರು ಬೇಸರದ ದನಿಯಲ್ಲಿ ನುಡಿದರು :

"ಮಗನನ್ನ ಹುಡುಕುವುದಕ್ಕಾಗಿ ನೀವು ನಡಸಿರುವ ಈ ಪ್ರಯತ್ನಗಳು ಒಂದೂ ನಮ್ಮ ಮನಸ್ಸಿಗೆ ಬರುವದಿಲ್ಲ. ಆತ ಇಲ್ಲಿಗೆ ಬಂದೂ ಇಲ್ಲ. ಬಂದಿದ್ದರೂ ನಾವು ನಿಮಗೆ ತಿಳಿಸುತ್ತಿರಲಿಲ್ಲ. ಸ್ವಾತಂತ್ರ್ಯದ ಸೈನಿಕರಿಗೆ ವಿಶ್ವಾಸ ಘಾತ ಮಾಡುವಷ್ಟು ಅಧಃಪತನ ಹೊಂದಿಲ್ಲ ಈ ಪೀಠ ಇನ್ನು ನೀವು ಮಲಗಿಕೊಳ್ಳಲು ಹೋಗಿರಿ. ಹೆಚ್ಚು ಮಾತನಾಡಿ ಉಪಯೋಗವಿಲ್ಲ."

ದೇಸಾಯರು ತಲೆತಗ್ಗಿಸಿಕೊಂಡು ಹೊರಟುಹೋದರು. ಸ್ವಾಮೀಜಿಯ ದಿವ್ಯ ತೇಜಸ್ಸಿನೆದುರಿಗೆ ಆತ ಮತ್ತೆ ಎದುರಾಗಿ ನಿಲ್ಲುವುದು ಸಾಧ್ಯವಿರಲಿಲ್ಲ. ಕಾಶೀನಾಥನಿಗೂ ನಿರಾಶೆಯಾಗಿದ್ದಿತಾದರೂ ಕೊನೆಯ ಸಲ ಪ್ರಯತ್ನ

ಮಾಡೋಣವೆಂದುಕೊಂಡು "ದಯಮಾಡಿ ನಮ್ಮನ್ನ ಕ್ಷಮಿಸಿರಿ ಸ್ವಾಮೀಜಿ, ನಾಳೆ ಮುಂಜಾನೆ ನಾವು ತಮ್ಮನ್ನು ಅರೆಸ್ಟ್ ಮಾಡಬೇಕಾಗುವದು," ಎಂದ.

"ಯಾವ ಕಾರಣದಿಂದ ಬಂಧಿಸುತ್ತೀರಿ ?"

"ಚಳವಳಿಗಾರರಿಗೆ ಆಶ್ರಯ ಕೊಟ್ಟ ಆಧಾರದ ಮೇಲೆ."

"ಅದಕ್ಕೆ ಸಾಕ್ಷಿಗಳಿದ್ದಾರೆಯೋ ?"

"ಸಾಕ್ಷಿಗಳು ಬೇಕೇ ಬೇಕು ಅಂತೇನೂ ಇಲ್ಲ. ನಾವು ನಿಮ್ಮನ್ನು ಡಿಟೆನ್ಯೂ ಆಗಿ ಇಡಬಹುದು," ಎಂದು ನುಡಿದು, ಆತ ತನ್ನ ಮಾತಿನಿಂದ ಸ್ವಾಮೀಜಿಯವರ ಮುಖದ ಮೇಲೆ ಉಂಟಾಗಬಹುದಾದ ಬದಲಾವಣೆಯನ್ನು ಗುರುತಿಸಲೆಂದು ಅವರನ್ನೇ ಸೂಕ್ಷ್ಮ ದೃಷ್ಟಿಯಿಂದ ನಿರುಕಿಸುತ್ತಿದ್ದ.

ವೇದಿಕೆಯಿಂದಿಳಿದು ಸ್ವಾಮೀಜಿ ಒಂದೆರಡು ಸಲ ಪಡಸಾಲೆಯಲ್ಲಿ ತಿರುಗಾಡಿದರು; ಅನಂತರ ಕೀರ್ತಿನಾಥನ ಹತ್ತಿರ ಬಂದು, ಅವನ ಭುಜದ ಮೇಲೆ ಬಲಗೈಯನ್ನಿಟ್ಟು ಶಾಂತಸ್ವರದಲ್ಲಿಯೆ ನುಡಿದರು: "ನೀವು ನಿಮಗೆ ತಿಳಿದಂತೆ ಮಾಡಬಹುದು. ನಾವು ಏನನ್ನೂ ಹೇಳಬಯಸುವುದಿಲ್ಲ. ಆಗಲಿ. ಈಗ ಮಲಗಿಕೊಳ್ಳಲು ಹೋಗಿರಿ. ಇವೊತ್ತು ನಮ್ಮ ಅತಿಥಿಗಳು ನೀವು. ಸುಖವಾಗಿ ವಿಶ್ರಾಂತಿ ತೆಗೆದುಕೊಳ್ಳಿರಿ. ಬೆಳಗ್ಗೆ ನಾಲ್ಕು ಗಂಟೆಯ ಮೇಲೆ ಯಾವಾಗ ಬೇಕಾದರೂ ನಮ್ಮನ್ನು ಬಂಧಿಸಬಹುದು."

ಕೀರ್ತಿನಾಥ ಅವಾಕ್ಕಾಗಿ ನಿಂತುಕೊಂಡಿದ್ದ. ಬಂಧಿಸುವ ಸಮಾಚಾರ ಖಚಿತವೆಂದು ತಿಳಿದಾಗ ಸ್ವಾಮೀಜಿ ದಾರಿಗೆ ಬಂದಾರೆಂದು ಆತ ತಿಳಿದುಕೊಂಡಿದ್ದುದು ತಪ್ಪಾಗಿ ಪರಿಣಮಿಸಿದ್ದಿತು. ಬಂಧನದ ಬೆದರಿಕೆ ಅವರ ಗಾಂಭೀರ್ಯವನ್ನೂ ಸ್ಥೈರ್ಯವನ್ನೂ ಕದಲಿಸಲು ಸಮರ್ಥವಾಗಿರಲಿಲ್ಲ. ಮರುಮಾತನಾಡದೆ ಆತ ಅಲ್ಲಿಂದ ಹೊರಟು, ತನಗಾಗಿ ಗೊತ್ತುಪಡಿಸಿದ್ದ ಕೊಟಡಿಗೆ ತೆರಳಿದ.

ರಾತ್ರಿ ಬಹಳ ಹೊತ್ತಿನ ವರೆಗೂ ಆತ ಎಚ್ಚರವಾಗಿಯೇ ಇದ್ದ. ಸ್ವಾಮೀಜಿಯವರನ್ನು ಬಂಧಿಸುವುದೇ, ಬಿಡುವುದೇ ಎಂದು ಹೊಯ್ದಾಡುತ್ತಿದ್ದಿತು ಮನಸ್ಸು. ನೂರಾರು ಹಳ್ಳಿಗಳಿಗೆಲ್ಲ ಧಾರ್ಮಿಕ ಗುರುಗಳಾಗಿದ್ದ ಅವರನ್ನು ಬಂಧಿಸಿಕೊಂಡೊಯ್ದಲ್ಲಿ ಜನರ ಮನಸ್ಸಿನ ಮೇಲೆ ಎಂಥ ಪರಿಣಾಮವಾದೀತೆಂಬುದನ್ನು ಆತ ಅರಿಯದಿರಲಿಲ್ಲ. ಸರಕಾರದ ವಿರುದ್ಧ ಸಾರ್ವಜನಿಕರಲ್ಲಿ

ಹುಟ್ಟಿಕೊಂಡಿದ್ದ ದ್ವೇಷದ ಉರಿ ಇನ್ನೂ ಹೆಚ್ಚಾಗಬಹುದಾಗಿದ್ದಿತು. ಆ ಘಟನೆಯಿಂದ. ಆದರೇನು ಮಾಡುವುದು? ಬೇರಾವ ಉಪಾಯವೂ ಇರಲಿಲ್ಲ. ಶೇಖರನನ್ನೂ ಅವನ ಗುಂಪಿನವರನ್ನೂ ಸದೆ ಬಡಿಯಬೇಕಾದರೆ ಎಂಥ ಕೃತ್ಯಕ್ಕೂ ಆತ ಕೈಹಾಕಬೇಕಾದುದು ಅಗತ್ಯವಾಗಿತ್ತು. ಆ ತಂಡವನ್ನೆಲ್ಲ ಬೇಟೆಯಾಡಿ ಎಲ್ಲರನ್ನೂ ಬಂಧಿಸಿ, ಜಿಲ್ಲೆಯಲ್ಲಿನ ಚಳವಳಿಯನ್ನ ನಿರ್ಮೂಲಗೊಳಿಸುವುದಾಗಿ ಆತ ನಿರ್ಧರಿಸಿ ಆ ವಿಭಾಗಕ್ಕೆ ಬಂದಿದ್ದ. ಇದುವರೆಗೆ ಹೇಳಿಕೊಳ್ಳುವಂಥ ಯಶಸ್ಸೇನೂ ದೊರೆತಿರಲಿಲ್ಲ. ಅಲ್ಲೊಬ್ಬ ಇಲ್ಲೊಬ್ಬ ಕಾರ್ಯಕರ್ತ ಸಿಕ್ಕುಬಿದ್ದಿದ್ದರೂ ಮುಖ್ಯ ಮುಖ್ಯ ಜನರಾರೂ ಸಿಕ್ಕಿರಲಿಲ್ಲ. ವಿಶ್ವನಾಥ ವಿದ್ಯಾವಂತ ಯುವಕ, ಪುಸ್ತಕ ಇತ್ಯಾದಿ ಓದಿಕೊಂಡವ, ಬುದ್ಧಿವಂತ. ಶೇಖರನ ಗುಂಪು ಇಷ್ಟೊಂದು ಚಾತುರ್ಯದಿಂದ ಕೆಲಸ ಮಾಡಲು ವಿಶ್ವನಾಥನ ಕುಶಾಗ್ರ ಬುದ್ಧಿಯೇ ಮುಖ್ಯ ಕಾರಣವೆಂದು ಕೀರ್ತಿ ನಂಬಿಕೊಂಡಿದ್ದ. ಗುಂಪಿನ ಮೆದುಳಿನಂತಿದ್ದ ಆತನನ್ನು ಅವರಿಂದ ದೂರಗೊಳಿಸಿಬಿಟ್ಟರೆ, ಕರಪತ್ರಗಳ ಕೆಲಸಕ್ಕಾರಂಭಿಸಿದ್ದ ಆ ಹುಚ್ಚು ಹುಡುಗಿಯನ್ನು ಹಿಡಿದು ಬೆಳಗಾವಿಗೆ ಕಳುಹಿಸಿದರೆ ಮುಂದೆ ಕೆಲದಿನಗಳಲ್ಲಿಯೇ ಶೇಖರನನ್ನೊಳಗೊಂಡು ಎಲ್ಲರನ್ನೂ ಬಂಧಿಸಲು ಸುಲಭವಾದೀತೆಂದು ಆತ ತಿಳಿದಿದ್ದ. ಅಂತೆಯೆ, ಬಾಬಾಸಾಹೇಬರಿಗೆ ಆಸೆ ಹುಟ್ಟಿಸಿ, ಅವರ ಮೂಲಕವಾದರೂ ವಿಶ್ವನಾಥನನ್ನು ಕದಲಿಸಲು ಸಾಧ್ಯವಾಗುವುದೇನೋ ಎಂದು ಪ್ರಯತ್ನಿಸುತ್ತಿದ್ದ. ಆಗಾಗ ಅವರೆಲ್ಲರೂ ಸ್ವಾಮಿಗಳ ಹತ್ತಿರ ಬರುವರೆಂಬ ಸುದ್ದಿಯನ್ನು ಕೇಳಿ ಅವನಿಗೊಂದು ಆಶಾ ಕಿರಣ ಕಾಣಿಸಿದಂತಾಗಿದ್ದಿತು. ಲಂಬಾಣಿ ತಾಂಡೆಯಿಂದ ತಪ್ಪಿಸಿಕೊಂಡು ಪಾರಾಗಿ ಹೋದ ಹೇಮಾ ಮತ್ತು ವಿಶ್ವನಾಥರು ಖಂಡಿತವಾಗಿಯೂ ಮಠಕ್ಕೆ ಬರುವರೆಂದು ಆತ ಊಹಿಸಿಕೊಂಡಿದ್ದ. ಎಲ್ಲ ಕಡೆಗಳಲ್ಲೂ ಪೋಲೀಸರು ಸುತ್ತುತ್ತಿದ್ದುದರಿಂದ ಅವರು ಬೇರಾವ ಊರಿಗೂ ಹೋಗುವುದು ಸಾಧ್ಯವಾಗಲಾರದೆಂಬುದೂ ಅವನಿಗೆ ಗೊತ್ತಿದ್ದಿತು. ಕಲ್ಲಾಪುರಕ್ಕಂತೂ ಕಾಲಿಡಲಾರರು ಅವರು. ಅಲ್ಲಿ ಸಿ. ಐ. ಡಿ.ಗಳಿರುವುದು ಅವರಿಗೆ ಗೊತ್ತಿರಲೇಬೇಕು. ಬೆಳಗಾವಿಗೂ ಹೋಗುವ ಹಾಗಿಲ್ಲ. ಶಾಮರಾಯರ ಮನೆಯ ಮುಂದೆ ಕಾವಲು ಇಡಲಾಗಿದೆ. ಮಠಕ್ಕೆ ಅವರು ಬಂದು ಹೋಗುವ ವಿಚಾರ ತಮಗೆ ತಿಳಿದಿದೆಯೆನ್ನುವುದು ಅವರಿಗಿನ್ನೂ ಗೊತ್ತಾಗಿರಲಿಕ್ಕಿಲ್ಲ. ಅಂತೆಯೆ, ಅವರು ಖಂಡಿತವಾಗಿಯೂ ಇಲ್ಲಿಗೆ ಬಂದಿರಬೇಕೆಂದು ತಿಳಿದು ದೇಸಾಯಿ

ಯವರನ್ನು ಕರೆದುಕೊಂಡು ಆತ ಅಲ್ಲಿಗೆ ಬಂದಿದ್ದ. ಉಪಾಯವಾಗಿ ಅವರ ಮನಸ್ಸನ್ನು ಒಲಿಸಿಕೊಂಡು ಸುದ್ದಿ ತಿಳಿದುಕೊಳ್ಳಬೇಕೆಂದು ಅವರಿಬ್ಬರೂ ಪ್ರಯತ್ನಿಸಿದುದೆಲ್ಲ ವ್ಯರ್ಥವಾಗಿತ್ತು. ಬೆದರಿಕೆ ಹಾಕಿದರೂ ಅವರು ಬಾಗಿರಲಿಲ್ಲ. ಆಗ ತಾನು ನುಡಿದಂತೆ ಬೆಳಗಿನ ಜಾವದಲ್ಲಿ ಅವರನ್ನು ಬಂಧಿಸುವುದೇ ಬೇಡವೇ ಎಂದು ಯೋಚಿಸುತ್ತಲೇ ಆತ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದ. ಬೆಳಗಿನ ಐದು ಗಂಟೆಗೆ ಐವತ್ತು ಜನ ಪೋಲೀಸರು ಅಲ್ಲಿಗೆ ಬರಬೇಕೆಂದು ಮೊದಲೇ ತಿಳಿಸಿಯಾಗಿದ್ದಿತು. ಅವರು ಬಂದ ಮೇಲೆ ಏನನ್ನು ಮಾಡುವುದು, ಫೌಜದಾರರಿಗೆ ಏನು ಹೇಳುವುದು ಎಂದು ಯೋಚಿಸುತ್ತಿದ್ದಾಗ ಅವನಿಗೆ ಯಾವಾಗ ನಿದ್ರೆ ಬಂದಿತೋ ತಿಳಿಯಲಿಲ್ಲ.

ಮರುದಿನ ಬೆಳಗಿನ ಜಾವದಲ್ಲಿ ಪೋಲೀಸರು ಬಂದು ಮಠದ ಹತ್ತಿರ ಗಿಡಗಳ ಕೆಳಗೆ ವಿರಮಿಸಿ ಆಜ್ಞೆಗಾಗಿ ಕಾಯುತ್ತಿದ್ದರು. ಫೌಜದಾರ ಮಠದೊಳಗೆ ಪ್ರವೇಶಿಸಿ ಸಾಹೇಬರನ್ನು ಎಚ್ಚರಿಸತೊಡಗಿದ್ದ.

ಅದೇ ಸಮಯಕ್ಕೆ ಆ ಊರಿನ ಬಳಿ ಬಂದ ಸಂಗಣ್ಣ, ವಿಶ್ವನಾಥ ಮತ್ತು ಹೇಮಾ ಒಮ್ಮೆಲೆ ಊರನ್ನು ಪ್ರವೇಶಿಸುವುದು ಉಚಿತವೇ ಅಲ್ಲವೇ ಎಂದು ಚರ್ಚಿಸುತ್ತ ಅಗಸೆಯ ಹತ್ತಿರ ನಿಂತಿದ್ದರು.

"ನಾ ಹೋಗಿ ಮಠದ ಸುತ್ತುಮುತ್ತು ತಿರುಗಾಡಿ ನೋಡಿ ಬರ್ತೇನೆ. ಯಾರೂ ಇರದಿದ್ದರ ಅಲ್ಲಿಂದ ಸಿಳ್ಳು ಹಾಕ್ತೇನೆ. ಆಮ್ಯಾಲ ನೀವು ಬರ್ರಿ. ಅದುವರೆಗೂ ಇಲ್ಲೇ ಇರ್ರಿ" ಎಂದು ಹೇಳಿ ಸಂಗಣ್ಣ ಮುಂದುವರಿಯುತ್ತಿರುವಷ್ಟರಲ್ಲಿ ವಿಶ್ವನಾಥ ಅವನನ್ನು ತಡೆದು ನಿಲ್ಲಿಸಿ—"ನಾನೇ ಹೋಗ್ತೀನಿ ಸಂಗಣ್ಣ. ನೀ ಇಲ್ಲಿರು. ಇಲ್ಲಿಗೆ ಬರಬೇಕಂತ ಹೊರಟವರು ನಾವು, ನೀನಲ್ಲ. ನೀ ಗೋಕಾವಿಗೆ ಹೋಗಬೇಕು ಇನ್ನೂ, ಅಲ್ಲಿಗೆ ಹೋಗಿ ನಿಮ್ಮ ಮನೆಯವರನ್ನ ಭೆಟ್ಟಿಯಾಗುವ ತನಕ ಯಾವ ಗಂಡಾಂತರಕ್ಕೂ ಹೋಗಬೇಡ" ಎಂದು ನುಡಿದು ತಾನೇ ಮುಂದೆ ಸಾಗಿದ.

ಊರಿನ ಅಗಸೆಯಿಂದ ಎಡಗಡೆಗೆ ತಿರುಗಿದರೆ ಎರಡು ಫರ್ಲಾಂಗ್ ದೂರದಲ್ಲಿ ಗಿಡಗಳ ಮರೆಯಲ್ಲಿ ಮಠವಿರುವುದು. ಬೆಳಗಿನ ಜಾವದ ಮಬ್ಬು ಕತ್ತಲೆಯಲ್ಲಿ ಹೇಗೋ ಕಾಲುದಾರಿಯನ್ನು ಹುಡುಕಿಕೊಂಡು ವಿಶ್ವನಾಥ ಮುಂದೆ ಸಾಗಿದ. ಮಠದ ಹಿಂದುಗಡೆಗಿದ್ದ ಪತ್ರಿಯ ಬನದ ಹತ್ತಿರ ಹಾಯ್ದು ಬಂದು,

ಒಂದೆರಡು ಕ್ಷಣ ಅಲ್ಲಿಯೇ ನಿಂತುಕೊಂಡು ಸುತ್ತಲೂ ದೃಷ್ಟಿ ಓಡಿಸಿದ. ಕತ್ತಲೆಯಲ್ಲಿ ಏನೂ ಗೋಚರವಾಗುಪಂತಿರಲಿಲ್ಲ. ಮತ್ತೆ ಮುಂದೆ ಸಾಗಿ, ಮಠದ ಪಕ್ಕದಲ್ಲಿದ್ದ ಗಿಡಗಳ ಬಳಿ ಬರುತ್ತಿದ್ದ ಹಾಗೆಯೆ ಒಮ್ಮೆಲೆ ಕೂಗು ಕೇಳಿಸಿತು.

"ಹಾಲ್ಟ್! ಹು ಕಂಸ್ ದೇರ್? (Who comes there ?)"

ಅಪರಿಚಿತ ಆಕೃತಿಯೊಂದು ನಡೆದು ಬರುತ್ತಿದ್ದುದನ್ನು ಗುರುತಿಸಿ ಪೋಲೀಸನೊಬ್ಬ ಬಂದೂಕನ್ನೆತ್ತಿ ಹಿಡಿದು ಪ್ರಶ್ನಿಸಿದ್ದ.

ಒಂದು ಕ್ಷಣ ನಿಂತಲ್ಲಿಯೆ ನಿಂತಿದ್ದ ವಿಶ್ವನಾಥ. ಗಿಡದ ಅಡಿಯಲ್ಲಿ ಪೋಲೀಸರಿರುವುದಂತೂ ಗೊತ್ತಾದ ಹಾಗಾಯಿತು. ಇನ್ನೇನು ಮಾಡುವುದು, ಅವರ ಕೈಯಿಂದ ಹೇಗೆ ಪಾರಾಗುವುದು ಎಂದು ಯೋಚಿಸುತ್ತಿದ್ದ ಹಾಗೇ ಮತ್ತೆ ಪೋಲೀಸ ಕೂಗಿದುದು ಕೇಳಿಸಿತು.

"ಕೌನ್ ಹೈ?"

ಯಾವ ಉತ್ತರವನ್ನೂ ಕೊಡಲರಿಯದ ವಿಶ್ವನಾಥ ಗೊಂದಲದಲ್ಲಿ ಬಿದ್ದು ಬಂದ ದಾರಿಯಿಂದ ಓಡತೊಡಗಿದ. ಒಡನೆಯೇ ಗುಂಡು ಹಾರಿದ ಸದ್ದು ಕೇಳ ಬಂದಿತು. ಅದರಿಂದಾಗಿ ಆತ ಇನ್ನೂ ದಿಗಿಲುಗೊಂಡು ಕಾಲುದಾರಿಯನ್ನು ಬಿಟ್ಟು, ಕಾಲು ಎಳೆದತ್ತ ಧಾವಿಸತೊಡಗಿದ.

ಆತ ಬಹುದೂರ ಹೋಗಲು ಸಾಧ್ಯವಾಗಲಿಲ್ಲ. ಮೊದಲನೆಯ ಗುಂಡು ಗುರಿ ತಪ್ಪಿಹೋದೊಡನೆ ಪೋಲೀಸ ಎರಡನೆಯ ಸಲ ಸರಿಯಾಗಿ ಗುರಿಹಿಡಿದು ಗುಂಡುಹಾರಿಸಿದ್ದ. ಪತ್ರಿಯ ಬನದಲ್ಲಿ ಹಾಯ್ದು ಓಡುತ್ತಿದ್ದ ವಿಶ್ವನಾಥ ಒಮ್ಮೆಲೆ ನೆಲಕ್ಕುರುಳಿದ—ಗುಂಡು ಅವನ ಬೆನ್ನಿಗೇ ಏಟು ಹಾಕಿದ್ದಿತು.

ಗುಂಡು ಹಾರಿದ ಸದ್ದು ಕೇಳಿಸುತ್ತಲೂ ಮಠದಲ್ಲಿ ಮಲಗಿಕೊಂಡಿದ್ದ ಸ್ವಾಮಿಗಳೂ, ದೇಸಾಯಿಯವರೂ, ಕೀರ್ತಿನಾಥ ಮತ್ತು ಅವನನ್ನೆಬ್ಬಿಸಲು ಹೋಗಿದ್ದ ಫೌಜದಾರರೂ ಧಾವಿಸಿಬಂದರು. "ಯಾರು? ಯಾರವರು? ಗುಂಡು ಹಾರಿಸಿದವರಾರು?" ಎಂದು ವಿಚಾರಣೆಗಾರಂಭವಾಯಿತು. ಫೌಜದಾರರ ಕೈಯಲ್ಲಿದ್ದ ಟಾರ್ಚ್ ಸುತ್ತುಮುತ್ತಲಿನ ಪ್ರದೇಶವನ್ನೆಲ್ಲ ಬೆಳಗಿಸತೊಡಗಿತು.

ಅಗಸೆಯ ಹತ್ತಿರ ವಿಶ್ವನಾಥನ ಸಿಳ್ಳು ಮೊಳಗುವುದನ್ನೇ ಕಾಯುತ್ತ ನಿಂತಿದ್ದ ಹೇಮಾ ಸಂಗಣ್ಣ ಇಬ್ಬರಿಗೂ ಗುಂಡು ಹಾರಿದ ಸದ್ದು ಕೇಳಿಸಿದಾಗ ಗಾಬರಿಯಾಗದಿರಲಿಲ್ಲ.

“ ಏನಾಯ್ತಪ್ಪಾ ಸಂಗಣ್ಣಾ, ಯಾರು ಗುಂಡು ಹಾರಿಸಿದರೋ! ಪೋಲೀಸರು ಬಂದಾರೋ ಏನೋ. ವಿಶ್ವನಾಥನಿಗೇನಾಯಿತೋ!” ಎಂದು ಕಳವಳದಿಂದ ನುಡಿದಳು ಹೇಮಾ. ಅವಳ ಕತ್ತು ಬಿಗಿದು ಬಂದಿದ್ದಿತು, ಕಣ್ಣುಗಳೂ ಕಂಬನಿಗಳಿಂದ ತುಂಬಿಹೋಗಿದ್ದುವು.

“ ಹಾಂಗೆಲ್ಲಾ ಪೋಲೀಸರ ಕೈಯಾಗ ಸಿಗುವವರೇನು ನಮ್ಮ ದೇಸಾಯರು! ಅವರೇ ಗುಂಡು ಹಾರಿಸಿರಬೇಕು. ಅಲ್ಲಿಗೆ ಹೋಗಿ ನೋಡಿ ಬರಲೇನು ನಾನು?” ಎಂದ ಸಂಗಣ್ಣ.

“ ನಡೀ. ಇಬ್ಬರೂ ಹೋಗೋಣ.”

ಅವರು ಮುಂದಕ್ಕೆ ಅಡಿಯಿಡುತ್ತಿದ್ದ ಹಾಗೇ ದೂರದಿಂದ ಕೀರ್ತಿನಾಥ ಕೂಗುತ್ತಾ ಪೋಲೀಸರಿಗೆ ಆಜ್ಞೆಯಿಯುತ್ತಿದ್ದುದು ಕೇಳಬಂದಿತು. ಕ್ಷಣ ಮಾತ್ರದಲ್ಲಿ, ಅವರಿಗೆ ತೀರ ಸನಿಯದಲ್ಲೇ ಟಾರ್ಚ್‌ನ ಬೆಳಕೂ ಸುರಿಯ ತೊಡಗಿತು. ವಿಶ್ವನಾಥನನ್ನು ಗುರುತಿಸಿದ ಬಳಿಕ ಅವನೊಂದಿಗೆ ಹೇಮಾವತಿಯೂ ಇದ್ದುದನ್ನು ನೆನಪು ಮಾಡಿಕೊಂಡು ಅವರು ಅವಳನ್ನೂ ಶೋಧಿಸಲು ಹೊರಟಿದ್ದುದು ಸ್ಪಷ್ಟವಾಗಿದ್ದಿತು.

ಮಠದ ಕಡೆಗೆ ಹೊರಟಿದ್ದವರಿಬ್ಬರೂ ಒಮ್ಮೆಲೆ ನಿಂತುಕೊಂಡರು. ಮುಂದೆ ಏನನ್ನು ಮಾಡಬೇಕೆನ್ನುವುದು ತೋಚಲಿಲ್ಲ. ವಿಶ್ವನಾಥನನ್ನು ಪೋಲೀಸರ ಕೈಯಲ್ಲಿ ಬಿಟ್ಟು ಹಾಗೇ ಹೊರಟುಬಿಡಲು ಒಬ್ಬರಿಗೂ ಮನಸ್ಸಿರಲಿಲ್ಲ. ತನ್ನ ಪ್ರಾಣ ಹೋದರೂ ಚಿಂತೆಯಿಲ್ಲ, ಅವನನ್ನು ಬಿಡಿಸಿ ತರಲೇಬೇಕೆಂದು ಸಂಗಣ್ಣ ನಿರ್ಧರಿಸಿ ಹೊರಡುತ್ತಿದ್ದ ಹಾಗೇ ಯಾರೋ ಅವನನ್ನು ಗಟ್ಟಿಯಾಗಿ ಹಿಡಿದು ಕೊಂಡಂತಾಯಿತು. ಆತ ಬಾಯಿ ತೆರೆಯುವಷ್ಟರಲ್ಲಿಯೆ ಆ ವ್ಯಕ್ತಿ ಮೆಲ್ಲಗಿನ ದನಿಯಲ್ಲಿ—“ ನೀವಿಬ್ಬರೂ ಇಲ್ಲಿಂದ ಹೊರಟು, ಗುಡ್ಡದಾಗಿನಿಂದ ಹಾದು ಗೋಕಾವಿಯ ಕಡೆ ನಡೀರಿ. ನಾ ಅವರನ್ನ ಬೆಳಗಾವಿಯ ಹಾದಿಯ ಕಡೆ ಹೊರಳಿಸಿ ಬರ್ತೀನಿ” ಎಂದ. ದನಿಯ ಮೇಲಿನಿಂದ ಆತ ಶೇಖರನೆಂಬುದು ತಿಳಿಯುತ್ತಲೂ ಅವರಿಗೆ ಅಂಥ ಪರಿಸ್ಥಿತಿಯಲ್ಲೂ ಕೊಂಚ ಸಮಾಧಾನವಾಗದಿರಲಿಲ್ಲ. ವಿಶ್ವನಾಥನನ್ನು ಬಿಡಿಸಿಕೊಳ್ಳಬೇಕೆಂಬ ಅಪೇಕ್ಷೆ ಬಲವಾಗಿದ್ದಿತಾದರೂ ಶೇಖರನ ಮಾತಿನಂತೆ ಅವರಿಬ್ಬರೂ ತಕ್ಷಣ ಹೊರಟುಬಿಡಬೇಕಾಗಿದ್ದಿತು.

ಹೇಮಾವತಿಗೆ ಕರುಳು ಕೊರೆಯುತ್ತಿತ್ತು; ಸಂಗಣ್ಣನಿಗೆ ಹುಚ್ಚು ಹಿಡಿದಂತಾಗಿದ್ದಿತು.

ಫೌಜದಾರನ ವೇಷ ಹಾಕಿ ಕೈಯಲ್ಲಿ ಪಿಸ್ತೂಲನ್ನು ಹಿಡಿದುಕೊಂಡಿದ್ದ ಶೇಖರ ಮತ್ತೊಂದು ಸಲ ನುಡಿದ: "ಹೊರಡಿರಿ ನೀವಿಬ್ಬರೂ, ಒಂದೆರಡು ಮೈಲು ದೂರ ನಡದರ ಒಂದು ಕಾಳಮ್ಮನ ಗುಡಿ ಸಿಗುತ್ತೈತಿ. ಅಲ್ಲಿ ಕೂತಿರ್ರಿ. ನಾ ಬರ್ತೀನಿ. ಹೂಂ ನಡೀರಿ—ತಡ ಮಾಡಬ್ಯಾಡ್ರಿ."

ಅವರಿಬ್ಬರೂ ಅಲ್ಲಿಂದ ಹೊರಟು ಅಗಸೆಯನ್ನು ಬಿಟ್ಟು ಗಿಡಗಳ ನೆರಳಿನಲ್ಲಿ ಮರೆಯಾಗುವುದಕ್ಕೂ ಪೋಲೀಸರ ಟಾರ್ಚ್‌ನ ಬೆಳಕು ಅಗಸೆಯ ಮೇಲೆ ಬೀಳುವುದಕ್ಕೂ ಸರಿಹೋಯಿತು. ಬೆಳಕು ಕಾಣಿಸುತ್ತಲೂ ಅವರಿಬ್ಬರೂ ಭರದಿಂದ ನಡೆಯತೊಡಗಿದರು. ಮುಖ್ಯ ರಸ್ತೆಯನ್ನು ಬಿಟ್ಟು ಕಾಲುದಾರಿ ಹಿಡಿದು ಓಡುತ್ತ ಓಡುತ್ತಲೇ ಮುಂದುವರಿದರು.

ಅವರು ದೂರ ಹೋಗುವವರೆಗೂ ಸುಮ್ಮನಿದ್ದು, ಶೇಖರ ಫೌಜದಾರನ ಹಾಗೆ ಸೆಟೆದು ನಿಂತ. ಹೇಮಾವತಿಯನ್ನು ಶೋಧಿಸುತ್ತಿದ್ದ ಪೋಲೀಸರ ಟಾರ್ಚ್‌ನ ಬೆಳಕು ಅವನ ಮೇಲೆ ಸುರಿದು, ಆತ ಧರಿಸಿದ್ದ ಫೌಜದಾರೀ ವೇಷವನ್ನು ತೋರಿಸುತ್ತಿತ್ತು. ಪೋಲೀಸರ ದೃಷ್ಟಿ ತನ್ನ ಮೇಲೆ ಬಿದ್ದುದು ತಿಳಿಯುತ್ತಲೂ ಆತ ದರ್ಪದ ದನಿಯಲ್ಲಿ ಕೂಗಿ ಹೇಳಿದ, ಹಿಂದುಸ್ತಾನಿಯಲ್ಲಿ:

"ಅಲ್ಲ್ಯಾಕ ಸಾಯ್ತೀರೋ! ಈ ಕಡೆ ಹೋದಳು ಆ ಹುಡುಗಿ, ಬೆಳಗಾವಿಯ ರಸ್ತೇದ ಗುಂಟ. ಹೂ, ಹೊರಡ್ರಿ ಆ ಕಡೆಗೆ. ಎಲ್ಲಾರೂ ಹೊರಡಿರಿ. ಕ್ವಿಕ್ ಮಾರ್ಚ್!"

ಒಡನೆಯೆ ಎಲ್ಲ ಪೋಲೀಸರೂ ಬೆಳಗಾವಿಯ ರಸ್ತೆಗೆ—ಎಂದರೆ ಸಂಗಣ್ಣ ಹೇಮಾ ಹೊರಟ ದಿಕ್ಕಿನ ವಿರುದ್ಧ ದಿಶೆಗೆ ಓಡಿದರು. ಕೀರ್ತಿನಾಥ, ಫೌಜದಾರ, ದೇಸಾಯಿ ಮುಂತಾದವರೆಲ್ಲ ವಿಶ್ವನಾಥನ ಹತ್ತಿರ ಇದ್ದುದರಿಂದ ವೇಷಧಾರಿ ಶೇಖರ ಉಪಯೋಗಿಸಿದ ತಂತ್ರ ಅವರಿಗೆ ತಿಳಿಯಲಿಲ್ಲ. ಕೆಲಸ ಮುಗಿದೊಡನೆ ಆತ ಅಲ್ಲಿಂದ ಜಾರಿಕೊಂಡು ಗೋಕಾವಿಯ ದಾರಿ ಹಿಡಿದ.

ಪತ್ರಿಯ ಬನದಲ್ಲಿ ಗುಂಡು ತಾಕಿ ಬಿದ್ದಿದ್ದ ವಿಶ್ವನಾಥ ಕೊನೆಯುಸಿರು ಬಿಡುವುದರಲ್ಲಿದ್ದ. ಬಾಬಾಸಾಹೇಬರಿಗೆ ಹುಚ್ಚು ಹಿಡಿದಂತಾಗಿದ್ದಿತು. ಒಂದು ರೀತಿಯಲ್ಲಿ ಅವರ ರಾಜನಿಷ್ಠೆಯ ಹುಚ್ಚು ತೊಲಗಿ ಹೋಗಿದ್ದಿತೆಂದರೂ

ಸಲ್ಲುವುದು. ಮಗನನ್ನು ಚಳವಳಿಯಿಂದ ಬಿಡಿಸಿ ಕರೆದುಕೊಂಡು ಹೋಗು ವುದಕ್ಕಾಗಿ ತಾವು ನಡೆಸಿದ ಪ್ರಯತ್ನಕ್ಕೆ ಇಂಥ ಕಹಿಫಲ ದೊರೆಯಬಹುದೆಂದು ಅವರ ಕನಸುಮನಸಿನಲ್ಲೂ ಬಂದಿರಲಿಲ್ಲ. ತಮ್ಮ ಬಾಳಿನ ಏಕಮಾತ್ರ ಆಶಾ ಕಿರಣವಾಗಿದ್ದ, ತಮ್ಮ ವಂಶದ ಆಧಾರಸ್ತಂಭವಾಗಿದ್ದ ಮಗನನ್ನೇ ಕಿತ್ತುಕೊಂಡು ದೈವ ತಮ್ಮನ್ನು ವಿಕಟವಾಗಿ ಅಣಕಿಸುತ್ತಿದ್ದ ಹಾಗೆ ಅವರಿಗೆ ಭಾಸವಾಯಿತು. ಮಗನ ಮೇಲಿದ್ದ ಪ್ರೀತಿ, ಮೋಹ, ಅಕ್ಕರತೆ ತುಂಬಿ ಬಂದು ಅವರ ಕಣ್ಣುಗಳಿಂದ ಕಂಬನಿಯಾಗಿ ಹರಿಯುತ್ತಿತ್ತು. ಗದ್ಗದಿತವಾದ ದನಿಯಲ್ಲಿ ಅವರು ಆಕ್ರೋಶ ಮಾಡುತ್ತಿದ್ದರು.

"ಅಯ್ಯೋ ಮಗನೇ, ವಿಶ್ವನಾಥಾ, ಎಂಥ ನೀಚ ಕೆಲಸ ಮಾಡಿದೆ ನಾನು ಪಾಪಿ! ನಾನೇ ನಿನ್ನ ಸಾವಿಗೆ ಕಾರಣವಾದಂತಾಯ್ತು. ನಿಮ್ಮನ್ನು ಹಿಡಿಯು ವುದಕ್ಕೆಂತಲೇ ಆ ಪೋಲೀಸರನ್ನ ನಾನು ಕರೆಯಿಸಿದ್ದು. ನಿನ್ನನ್ನು ಹಿಡಿಸಿ ಮನೆಗೆ ಕರೆದೊಯ್ಯಬೇಕಂತ ಮಾಡಿದ್ದೆ. ಹೀಗಾದೀತೆಂದು ಯಾರು ತಿಳಿದಿದ್ದರು, ಅಯ್ಯೋ...."

ವಿಶ್ವನಾಥ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಅವನ ಶರೀರದಲ್ಲಿ ಭೀಕರ ವೇದನೆಗಾರಂಭವಾಗಿದ್ದಿತು. ಗುಂಡು ಬಡಿದಿದ್ದ ಸ್ಥಳವನ್ನು ಬಟ್ಟೆಯಿಂದ ಬಿಗಿದು ಕಟ್ಟಿದ್ದರೂ ರಕ್ತ ಧಾರೆಧಾರೆಯಾಗಿ ಸುರಿಯುತ್ತಿತ್ತು. ಮೃತ್ಯುವಿಗೆ ಮೊದಲಿನ ಅರ್ಧ ಚೇತನಾವಸ್ಥೆಯಲ್ಲಿ ಆತ ತೂಗಾಡುತ್ತಿದ್ದ. ದೇಸಾಯಿಯವರ ಆಕ್ರೋಶ ದಲ್ಲಿ ಅವನಿಗೆಷ್ಟು ಅರ್ಥವಾಗುತ್ತಿದ್ದಿತೋ!

"ಏನಾದರೂ ಮಾಡಿರಿ. ನನ್ನ ಮಗನನ್ನ ಉಳಿಸಿಕೊಡಿರಿ ಸ್ವಾಮೀಜಿ ಯವರೆ. ತಮ್ಮ ಪಾದಕ್ಕೆ ಬೀಳ್ತೇನೆ—ನನ್ನ ಮುದ್ದು ಮಗನ ಜೀವವನ್ನ ಹಿಂದಿರುಗಿ ಕೊಡಿಸಿರಿ. ಇವನ ತಾಯಿ ತೀರಿಕೊಂಡಾಗಿನಿಂದ ಒಂದು ಹೂವು ಬೆಳಸಿದ ಹಾಗೆ ಇವನ್ನ ಬೆಳಸಿದ್ದೆ. ನಾನೇ ನನ್ನ ಕೈಯಾರ ನನ್ನ ಮುದ್ದು ಮಗನ ಬಲಿ ತಗೊಳ್ಳಬಹುದಂತ ಯಾರಿಗೆ ಗೊತ್ತಿತ್ತು ಸ್ವಾಮೀಜಿ! ಎಂಥ ನೀಚ ನಾನು! ನಿನ್ನೆ ರಾತ್ರಿ ತಾವು ಎಷ್ಟು ಬುದ್ಧಿ ಹೇಳಿದರೂ—ನಾನು ಮೂರ್ಖ—ನನ್ನ ಕಣ್ಣು ತೆರೀಲಿಲ್ಲ. ಈಗ—ಎಲ್ಲಾ ಸರ್ವನಾಶವಾಗಿ ಹೋದ ಮ್ಯಾಲ—ತೆರೀತು ಕಣ್ಣು....ವಿಶ್ವನಾಥ....ನನ್ನ ವಿಶ್ವನಾಥ...."

"ಶಿವನ ಇಚ್ಛೆ ಇದ್ದ ಹಾಂಗ ಆಗುತದ ಬಾಬಾಸಾಹೇಬರೆ. ಏಳಿ ವ್ಯಾಲ. ಅವನ್ನ ಒಳಗ ಒಯ್ದು ಉಪಚಾರ ಮಾಡೋಣ. ಡಾಕ್ಟರಿಗೆ ಹೇಳಿಕಳಿಸಿದ್ದೇವೆ ಹೊಂಗಲಕ್ಕೆ. ನೆಟ್ಟಗಾದರೂ ಆದಾನು. ಏಳ್ರಿ," ಎಂದು ಬಲವಂತದಿಂದಲೇ ಅವರನ್ನು ದೂರಗೊಳಿಸಿ ವಿಶ್ವನಾಥನ ಶರೀರವನ್ನು ಮಠದೊಳಗಡೆ ಸಾಗಿಸುವ ವ್ಯವಸ್ಥೆ ಮಾಡಿದರು ಸ್ವಾಮೀಜಿ.

ತಾವು ಕುಳಿತುಕೊಳ್ಳುವ ಪೀಠದ ಮೇಲೆ ಅವನನ್ನು ಮಲಗಿಸಿ ಸ್ವಾಮೀಜಿ ಅವನ ನಾಡಿಗಳನ್ನು ಪರೀಕ್ಷಿಸಿ ನೋಡಿದರು. ವೇಗ ತೀರ ಕಡಿಮೆಯಾಗಿದ್ದುದು ಕಂಡುಬರುತ್ತಲೂ ಅವರಿಗೂ ನಿರಾಶೆಯಾಗದಿರಲಿಲ್ಲ. ತಕ್ಷಣವೇ ಡಾಕ್ಟರಿಂದ ಚಿಕಿತ್ಸೆ ಮಾಡಿಸಿದರೆ ಆತ ಬದುಕಬಹುದೆಂಬ ಆಸೆ ಅವರಿಗಿತ್ತು. ಆದರೆ— ಸಮೀಪದಲ್ಲಿ ಎಲ್ಲೂ ಡಾಕ್ಟರರು ಸಿಕ್ಕುವಂತಿರಲಿಲ್ಲ.

ದೇಸಾಯಿಯವರ ಬಡಬಡಿಕೆ ನಡದೇ ಇತ್ತು. ನಿದ್ರೆಯಲ್ಲಿ ಕನವರಿಸುವವ ರಂತೆ ಅವರು ಒಂದೇ ಸಮನೆ ಕೂಗಿಕೊಳ್ಳುತ್ತಿದ್ದರು : "ಏನು ಎಣಿಸಿದ್ದೆ ನಾನು! ಏನಾಗಿ ಹೋಯಿತು! ದಿವಾನಬಹದ್ದೂರ್ ಆಗಬೇಕಂತ ಹೊರಟಿದ್ದೆ. ಅದಕ್ಕಾಗಿ ಮಾಡಬಾರದು ಕೆಲಸಗಳನ್ನೆಲ್ಲಾ ಮಾಡಿದೆ. ಮೂವತ್ತು ವರ್ಷ ಈ ಸರಕಾರದ ಬೂಟು ಒರೆಸಿದೆ. ಬಂದ ಬಂದ ಕೆಂಪು ಮೋರೀ ಸಾಬರಿಗೆಲ್ಲಾ ಪಾರ್ಟಿ ಕೊಟ್ಟು, ರೊಕ್ಕಾ ನೀರಿನ ಹಾಂಗ ಖರ್ಚು ಮಾಡಿದೆ. ಚಳವಳಿಗಳಿಗೆಲ್ಲಾ ವಿರೋಧ ಮಾಡಿದೆ. ಯುದ್ಧಕ್ಕ ಸಹಾಯ ಮಾಡಿದೆ. ರಿಕ್ರೂಟಿಗೆ ಹಳ್ಳಿಯ ಮಂದೀನ್ನ ಬಲಾತ್ಕಾರದಿಂದ ಹಿಡಿದು ಕೊಟ್ಟೆ. ನನ್ನ ಮಗನೇ ಚಳವಳಿಗೆ ಬಿದ್ದಾಗ ಅವನನ್ನು ಅದರಿಂದ ಬಿಡಿಸೋದಕ್ಕ ಪ್ರಯತ್ನಿಸಿದೆ. ಈ ಸಿ. ಐ. ಡಿ. ಮತ್ತು ಆ ರಂಗಪ್ಪನ ಮಾತು ಕೇಳಿ ಅವರು ಹೇಳಿದ್ದಕ್ಕೆಲ್ಲಾ ಹೂಂಗುಟ್ಟೆದೆ. ಅವನ್ನ ಮನೆಗೆ ಕರೆದುಕೊಂಡು ಹೋಗಬಹುದು ಅಂತ ಇಷ್ಟೆಲ್ಲಾ ಮಾಡಿದೆ. ಇವರು ಅವನನ್ನು ಗುಂಡು ಹಾಕಿ ಕೊಲ್ಲುತ್ತಾರಂತ ತಿಳಿದಿದ್ದರ ನಾ ಯಾವುದನ್ನೂ ಒಪ್ಪುತ್ತಿರಲಿಲ್ಲ. ನನ್ನನ್ನಿಲ್ಲಿ ಕರೆದುತಂದರು....ನನ್ನೆದುರಿಗೇ ನನ್ನ ಮಗನ್ನ.... ಗುಂಡು ಹಾಕಿ....ಕೊಂದರು... "

ಇದುವರೆಗೆ ಮೌನವಾಗಿ ಕುಳಿತಿದ್ದ ಕೀರ್ತಿನಾಥ ಮೆಲ್ಲನೆ ತಲೆಯೆತ್ತಿ "ಗುಂಡು ಹಾಕಬೇಕಂತ ಮೊದಲೇ ಯಾರೂ ನಿಶ್ಚಯ ಮಾಡಿರಲಿಲ್ಲ ದೇಸಾಯರೆ. ತಪ್ಪು ತಿಳಕೋಬ್ಯಾಡ್ರಿ. ನಾನು ಮತ್ತು ಈ ಫೌಜದಾರರಿಬ್ಬರೂ

ಮಠದೊಳಗಡೆ ಇದ್ದಾಗ ಹೊರಗೆ ಈ ದುರಂತ ನಡೀತು. ‘ ಹಾಲ್ಟ್ ’ ಅಂದ ಕೂಡಲೆ ಅವರು ಓಡಲಿಕ್ಕೆ ಹತ್ತಿದರಂತೆ. ಓಡಬಾರದಾಗಿತ್ತು. ಉತ್ತರ ಕೊಡದೆ ಓಡಿದವರನ್ನ ಹೊಡೀಬೇಕಂತ ಆರ್ಡರ್ಸ್ ಇದೆ ಪೋಲೀಸರಿಗೆ. ಅವರದೂ ಏನೂ ತಪ್ಪಿಲ್ಲ ಇದರೊಳಗ. ನಾವು ಹೊರಗಡೆ ಇದ್ದಿದ್ದರಂತೂ ಗುಂಡು ಹಾಕ ಗೊಡುತ್ತಿರಲಿಲ್ಲ...."

ಮಗನ ಹತ್ತಿರ ಕುಳಿತುಕೊಂಡು ರೋದಿಸುತ್ತಿದ್ದ ದೇಸಾಯಿಯವರು ಕೆರಳಿದ ಸಿಂಹದಂತೆ ಕೀರ್ತಿನಾಥನ ಕಡೆಗೆ ತಿರುಗಿ ರೋಷಾವೇಷದಿಂದ ಕಿರಿಚಿದರು: “ ನಡೀ. ನೀ ಹೋಗು. ಇಲ್ಲಿಂದ ತೊಲಗು. ನನ್ನ ಕಣ್ಮುಂದೆ ಬೇಡ ನೀನು. ನಿನ್ನ ಮಾತು ಕೇಳಿಯೇ ನಾನೀ ಬಲೆಯೊಳಗೆ ಬಿದ್ದೆ. ನನ್ನ ಮಗನನ್ನೂ ಕೆಡವಿದೆ, ನಿಮ್ಮ ಬಲೆಯೊಳಗ. ನಡೀ. ಇನ್ನೊಮ್ಮೆ ನನ್ನ ಕಣ್ಣಿಗೆ ಬೀಳಬ್ಯಾಡ. ನೀನೂ ನಡೀ ಫೌಜದಾರ್ ! ನಡೀರಿ ಇಬ್ಬರೂ...."

ಅಧಿಕಾರಿಗಳಿಬ್ಬರೂ ತಬ್ಬಿಬ್ಬಾಗಿ ಏನೂ ತೋಚದೆ ನಿಂತುಕೊಂಡಿದ್ದರು. ದೇಸಾಯಿಯವರು ಪುನಃ ಗರ್ಜಿಸಿದರು : “ ನಡೀರಿ ಅಂತೀನಿ, ಹೊರಟುಹೋಗ್ರಿ. ಇಲ್ಲಾಂದ್ರ ನಾನಃ ಎದ್ದು ಗುಂಡು ಹಾಕಬೇಕಾದೀತು ನಿಮಗೆ. ಜಾವ್ ! ಚಲೇ ಜಾವ್ ! ನಡೀರಿ ಹೊರಗೆ !”

ನೂರಾರು ವರ್ಷಗಳಿಂದ ಪರಕೀಯರ ಕಾಲಿನ ಕೆಳಗೆ ಸಿಕ್ಕುಬಿದ್ದು ತೊಳಲುತ್ತಿದ್ದ ಭಾರತವೇ ಆವೇಶದಿಂದ ಎದ್ದು ದೇಸಾಯಿಯವರ ವಾಣಿಯ ಮೂಲಕ ವಿದೇಶೀಯ ಸರಕಾರಕ್ಕೆ ಗದರಿಸುತ್ತಿದ್ದ ಹಾಗಿದ್ದಿತು. ‘ ಜಾವ್ ! ಚಲೇ ಜಾವ್ ! ನಡೀರಿ ಹೊರಗೆ !’ ಎಂಥ ಕೆಚ್ಚು, ಎಂಥ ಶಕ್ತಿ, ಎಂಥ ಆವೇಶ, ಎಂಥ ದರ್ಪ ತುಂಬಿತ್ತು ಆ ಮಾತಿನಲ್ಲಿ ! ಮರುಮಾತನಾಡದೆ ಅಧಿಕಾರಿಗಳಿಬ್ಬರೂ ಮಠದಿಂದ ಹೊರಟು ನಡೆದರು.

‘ ಚಲೇ ಜಾವ್ ’ ಎಂಬ ಆ ಸ್ಫೂರ್ತಿಮಂತ್ರ ವಿಶ್ವನಾಥನ ಕಿವಿಗೆ ಸೇರಿ ಅವನ ಚೈತನ್ಯವನ್ನೂ ಬಡಿದೆಬ್ಬಿಸಿದ ಹಾಗಿದ್ದಿತು. ಅಷ್ಟು ಹೊತ್ತಿನವರೆಗೂ ಮೂರ್ಛೆಹೋಗಿ ಬಿದ್ದಿದ್ದ ಆತನಲ್ಲಿ ಹೊಸ ಶಕ್ತಿ ಸಂಚರಿಸಿದಂತಾಯಿತು. ಅವನ ಮುಖದ ಮೇಲೆ ಮಿಂಚಿನ ಗೆರೆಯೊಂದು ಸುಳಿದಂತಾಯಿತು. ಮೆಲ್ಲನೆ ಕಣ್ಣು ತೆರೆದು ಸ್ವಾಮೀಜಿಯನ್ನೂ ತನ್ನ ತಂದೆಯನ್ನೂ ದಿಟ್ಟಿಸಿ ನೋಡಿದ. ತಾನು ಎಲ್ಲಿ, ಎಂಥ ಸ್ಥಿತಿಯಲ್ಲಿ ಮಲಗಿಕೊಂಡಿರುವೆನೆಂಬುದರ ಅರಿವಾಗುತ್ತಲೂ ಆತ—

"ಹೇಮಾ ಸಹ ಸಿಕ್ಕಳೇನು ಸ್ವಾಮೀಜಿ?" ಎಂದು ಕೇಳಿದ.

"ಇಲ್ಲ. ನೀ ಏನೂ ಚಿಂತೆ ಮಾಡಬ್ಯಾಡ."

ಮಗನು ಮಾತನಾಡತೊಡಗಿದುದನ್ನು ಕಂಡು ದೇಸಾಯರ ಹೃದಯ ಕ್ಷಣಿಕ ಆನಂದದಿಂದ ನರ್ತಿಸತೊಡಗಿತು. ಅಕ್ಕರೆಯಿಂದ ಅವನ ಕೆನ್ನೆಗಳ ಮೇಲೆ ಕೈಯನ್ನಾಡಿಸುತ್ತ—"ಕಡೆಗೂ ಮಾತು ಬಂತಲ್ಲ ಮಗನೇ ನಿನಗೆ! ಅಯ್ಯೋ, ಅಯ್ಯೋ ಎಂಥ ಪಾಪಿ ನಾನು! ನನ್ನಿಂದಲೇ ನಿನಗೆ ಹೀಗಾಯಿತು!" ಎಂದರು.

ವಿಶ್ವನಾಥನಿಗೆ ಆ ಮಾತು ಅರ್ಥವಾದಂತೆ ತೋರಲಿಲ್ಲ. ಆತ ಸ್ವಾಮೀಜಿ ಯವರನ್ನೆ ನೆಟ್ಟ ದಿಟ್ಟಿಯಿಂದ ನಿರುಕಿಸುತ್ತ ತೀರ ಕಷ್ಟದಿಂದ ಒಂದೊಂದೇ ಶಬ್ದ ಗಳನ್ನುಚ್ಚರಿಸುತ್ತಿದ್ದ:

"ಹೇಮಾ ಅವರ ಕೈಗೆ ಸಿಗಬಾರದು ಸ್ವಾಮೀಜಿ....ಶೇಖರನೂ ಸಿಗ ಬಾರದು....ಸಂಗಣ್ಣ ಸಿಗಬಾರದು....ಅವ ತಪ್ಪಿಸಿಕೊಂಡು ಬಂದಾನ ಜೇಲಿನಿಂದ ....ಅವನ್ನ ಗೋಕಾವಿಗೆ ಕಳಿಸಬೇಕು....ಇನ್ನೂ ಕೆಲಸ ಬಹಳ ಇದಾವೆ ಸ್ವಾಮೀಜಿ ....ಸ್ವಾತಂತ್ರ್ಯ ಬಂದ ಮೇಲೆ ಅದನ್ನ ಕಂಡು ಕಣ್ಣು ಮುಚ್ಚಬೇಕಂತ ನನಗಾಸೆ ಇತ್ತು....ಅದುವರೆಗೂ ಹೋರಾಡಬೇಕಾಗಿತ್ತು....ಆದರೆ ದೈ ವ ದಿ ಚ್ಛೆ....ನಾ ಹೊರಟೆ....ಸ್ವಾಮೀಜೀ....ಹೋರಾಟ ಮುಂದೆ ಸಾಗಿಸಲು ತಿಳಿಸಿರಿ ಶೇಖರಣ್ಣಗೆ ....ಅಪ್ಪಾ...."

"ಏನು ವಿಶ್ವನಾಥ?"

"ಕಣ್ಣೊಳಗೆ ನೀರು ತರಬೇಡಿರಿ ಅಪ್ಪ? ದೇಸಾಯರ ಮನೆತನಕ್ಕ ಅದು ಶೋಭಿಸೂದಿಲ್ಲ....ನಾ ತೀರಿಕೊಂಡೆ ಅಂತ ಶೋಕಿಸ್ತಾ ಕೂಡ್ರಬೇಡಿರಿ. ಧೈರ್ಯ ತಂದುಕೊಳ್ಳಿ....ಅಪ್ಪಾ...."

"ಇಲ್ಲಪ್ಪಾ. ಧೈರ್ಯ ಬಿಡೋದಿಲ್ಲ. ಈಗ ನನ್ನ ಕಣ್ಣು ತೆರೆದಾವೆ. ಇನ್ನುಮ್ಯಾಲ ನಾನೂ ನಿನ್ನ ಕೆಲಸಕ್ಕ ಬೀಳತೀನಿ. ಆ ಸರಕಾರ ನಮ್ಮ ದೇಶದಿಂದ ತೊಲಗುವ ತನಕ ಹೋರಾಡುತೀನಿ...."

ವಿಶ್ವನಾಥನ ಮುಖ ಆನಂದದಿಂದ ಅರಳಿದ ಹಾಗೆ ತೋರಿತು. "ಅಪ್ಪಾ, ನೀವು....ನೀವು ಚಳವಳಿಗೆ ಸೇರ್ತೀರಾ? ಆಹಾ! ಹಾ! ಹಾ! ಹಾ! ಹಾ! ಎಷ್ಟು ಚಲೋ ಆಯ್ತು ಸ್ವಾಮೀಜಿ....ಎಷ್ಟು ಚಲೋ ಆಯ್ತು! ಒಂದಿಲ್ಲೊಂದು ದಿವಸ ನಮ್ಮಪ್ಪ ನಮ್ಮನ್ನ ಕೂಡಿಕೊಳ್ಳುವರಂತ ನನಗ ಮೊದಲೇ ಅನ್ನಿಸಿತ್ತು.

ನಮ್ಮ ವಂಶದ ರಕ್ತನೂ ಹಾಗೆ ಅಲ್ಲೇನ್ರಿ ? ಇದು ತನಕ ನಮ್ಮಪ್ಪನನ್ನ ಪಂಜರ ದೊಳಗಿಟ್ಟ ಸಿಂಹದ ಹಾಗೆ ಏನೇನೋ ಆಸೆಯ ಬಲೀ ಒಡ್ಡಿ ಇಟ್ಟಿದ್ದರು ಆ ಸರಕಾರದವರು. ಈಗ ಆ ಪಂಜರ ಮುರಿದುಹೋಯಿತು. ಅಪ್ಪ ಸ್ವತಂತ್ರನಾದ.... ಸ್ವತಂತ್ರನಾದ....ಸ್ವಾಮೀಜಿ....ನನ್ನ ಕಿಸೇದೊಳಗ ಪಿಸ್ತೂಲು ಅದ....ತುಂಬಿದ ಪಿಸ್ತೂಲು....ಅಪ್ಪನಿಗೆ ಕೊಡಿರಿ' ಅದನ್ನ. ನೀವೇ ಅಪ್ಪಣೆ ಮಾಡ್ರಿ ಅವಗೆ. ಇಂದಿನಿಂದ ನಮ್ಮ ಅಪ್ಪನೂ ಸ್ವಾತಂತ್ರ್ಯದ ಸೈನಿಕ....ಅಪ್ಪಾ....ಅಪ್ಪಾ...." ಎಂದು ನುಡಿಯುತ್ತ ಆತ ಆವೇಶದಿಂದ ಮೇಲಕ್ಕೆದ್ದ: ಎದ್ದುದೆಷ್ಟೋ ಅಷ್ಟೆ ! ಅವನ ಶರೀರ ಒಂದು ಕ್ಷಣ ಹಾಗೇ ನೆಟ್ಟಗೆ ಕುಳಿತಿದ್ದಿತು—ಅನಂತರ ಹಠಾತ್ತಾಗಿ ಕೆಳಕ್ಕೆ ಬಾಗಿತು. ಅವನ ಪ್ರಾಣಪಕ್ಷಿ ಹಾರಿಹೋದುದನ್ನು ಗುರುತಿಸಿ ಸ್ವಾಮೀಜಿ ಮುಂದುವರಿದು ಆ ಬಾಗಿದ ಶಿರವನ್ನು ಹಾಸಿಗೆಯ ಮೇಲೊರಗಿಸಿದರು.

ಮಗನ ಕಳೇಬರವನ್ನು ಕೆಲಕಾಲ ದಿಙ್ಮೂಢನಂತೆ ದಿಟ್ಟಿಸುತ್ತಿದ್ದ ದೇಸಾಯರು ಎದ್ದು ನಿಂತರು, ರಕ್ತದಿಂದ ತೊಯ್ದಿದ್ದ ಅವನ ಅಂಗಿಯ ಜೇಬಿನಲ್ಲಿ ಕೈ ಹಾಕಿ ಅದರೊಳಗಿನಿಂದ ಪಿಸ್ತೂಲನ್ನು ತೆಗೆದುಕೊಂಡರು. ಗಾಯದಿಂದ ಸುರಿಯುತ್ತಿದ್ದ ನೆತ್ತರಿನಿಂದ ಪಿಸ್ತೂಲು ರಂಜಿತವಾಗಿದ್ದಿತು. ಬಲಗೈಯಲ್ಲಿ ಅದನ್ನು ಹಿಡಿದುಕೊಂಡು ಸ್ವಾಮೀಜಿಯವರ ಪಾದಗಳಿಗೆ ಮಣಿದರು. ಅನಂತರ ಮೇಲಕ್ಕೆದ್ದು ಸೈನಿಕರ ಹಾಗೆ ಸೆಟೆದು ನಿಂತು ಪ್ರತಿಜ್ಞೆ ಸ್ವೀಕರಿಸುವಂಥ ಗಂಭೀರ ದನಿಯಲ್ಲಿ ನುಡಿದರು:

"ನಿನ್ನ ಕಡೆಯ ಮಾತಿನಂತೆ ನಾ ಸಾಯುವ ತನಕ ಸ್ವಾತಂತ್ರ್ಯಕ್ಕಾಗಿ ದುಡೀತೇನೆ ವಿಶ್ವನಾಥ. ಸ್ವಾಮಿಗಳ ಪಾದ ಮುಟ್ಟಿ ಪ್ರತಿಜ್ಞೆ ಮಾಡಿದ್ದೇನೆ. ನಿನ್ನ ಆತ್ಮಕ್ಕೆ ಸಮಾಧಾನ ಸಿಗಲಿ!"

## ೨೮

ಸಂಗಣ್ಣ ಹೇಮಾ ಇಬ್ಬರೂ ಕಾಳಮ್ಮನ ಗುಡಿಯಲ್ಲಿ ಶೇಖರನಿಗಾಗಿ ಆತುರದಿಂದ ಕಾಯುತ್ತಿದ್ದರು. ಕಾಡುಪ್ರದೇಶವಾದರೂ ಬಂಧನದ ಭೀತಿ ಇರದಿರಲಿಲ್ಲ. ಸುತ್ತುಮುತ್ತಲಿನ ಪ್ರದೇಶದಲ್ಲೆಲ್ಲ ಪೋಲೀಸರು ಅಲೆಯುತ್ತಿದ್ದ ರಾದುದರಿಂದ ಹಗಲುಹೊತ್ತು ಗುಡಿಗುಂಡಾರಗಳಲ್ಲಿ ವಿರಮಿಸುವುದು ಗಂಡಾಂತರದ ಕೆಲಸವೇ ಆಗಿದ್ದಿತು.

ತಾಸು ಹೊತ್ತೇರಿದಾಗ ಶೇಖರ ಗುಡಿಯ ಬಳಿ ಬಂದ. ಮೊದಲು ಆ

ಫೌಜದಾರೀ ವೇಷವನ್ನು ಗೆತೆದು ಸಾದಾ ಬಟ್ಟೆ ಬರೆ ತೊಟ್ಟುಕೊಂಡ. ಜತೆಗಿದ್ದ ಕೈಚೀಲದಲ್ಲಿ ಮೊದಲಿನ ವೇಷವನ್ನು ತುಂಬಿ—"ಇನ್ನು ಹೊರಡೋಣ ಹಾಂಗಾದರs" ಎಂದ.

"ವಿಶ್ವನಾಥಗೇನಾಯ್ತು ಶೇಖರಣ್ಣ ?" ಎಂದು ಕಳವಳದಿಂದ ಕೇಳಿದಳು ಹೇಮಾ.

ಶೇಖರ ಕನಿಕರದಿಂದಲೂ, ವಿಷಾದದಿಂದಲೂ ಆಕೆಯನ್ನು ದಿಟ್ಟಿಸುತ್ತ ಹೇಳಿದ. "ಆತ ತನ್ನ ಕೆಲಸ ತೀರಿಸಿ ಸ್ವರ್ಗಕ್ಕೇರಿದ ಹೇಮಾ. ಹುತಾತ್ಮ ಆದ...."

ಎಷ್ಟು ತಡೆಹಿಡಿದರೂ ಹೇಮಾಗೆ ಅಳು ಉಕ್ಕಿ ಬರದಿರಲಿಲ್ಲ. ಮುನ್ನಾ ದಿನದ ರಾತ್ರಿ, ಆ ರಮ್ಯ ನಿಸರ್ಗದ ಸನ್ನಿಧಿಯಲ್ಲಿ ತಮ್ಮಿಬ್ಬರಲ್ಲಿ ನಡೆದ ಮಾತು ಕತೆಗಳೆಲ್ಲ ಅವಳ ಮನದೆದುರಿಗೆ ಹಾಯ್ದುಹೋಗತೊಡಗಿದವು. ಚಳಿಯನ್ನು ತಡೆಯಲಾರದೆ ತಾನು ನಡುಗತೊಡಗಿದಾಗ ಆತ ತನ್ನ ಕಂಬಳಿಯನ್ನು ಹೊದೆಸಿದುದು, ಚಳವಳಿಗೆ ತನ್ನನ್ನು ಸೇರಿಸಿದ ಸ್ಫೂರ್ತಿಯೆಂದು ಬಣ್ಣಿಸಿದುದು, ತಾನು ಮಲಗಿ ನಿದ್ರೆಹೋದಾಗ ಆತ ಕಾವಲು ನಡಸುತ್ತ ನಿಂತದ್ದು....ನಾಲ್ಕೈದು ಗಂಟೆಗಳಿಗೆ ಮೊದಲು ಜೀವಂತವಾಗಿ ಉತ್ಸಾಹದಿಂದ ತುಂಬಿದ್ದ ಆ ತರುಣ ಜೀವ ಈ ಜಗತ್ತಿನಲ್ಲಿಲ್ಲ! ಗುಂಡು ತಾಕಿದ ಒಡನೆ ಆತ ಕೆಳಕ್ಕುರುಳಿ ಬಿದ್ದು ಎಷ್ಟು ನರಳಿದನೊ! ಕೊನೆಯುಸಿರು ಬಿಡುವಾಗ ತನ್ನನ್ನು ಜ್ಞಾಪಿಸಿಕೊಂಡನೊ ಏನೊ! ಅವನ ಅಂತ್ಯದರ್ಶನವೂ ತನಗೆ ಆಗಲಿಲ್ಲವಲ್ಲ! ಎಂಥ ದುರ್ದೈವಿ ತಾನು!

"ನೀ ಯಾವಾಗ ಬಂದಿದ್ದೆ ಅಲ್ಲಿಗೆ, ಶೇಖರಣ್ಣ ?"

"ನೀ ಬಂದ ಸ್ವಲ್ಪ ಹೊತ್ತಿನವ್ಯಾಲ. ಸೂರನಗೌಡ ಬ್ಯಾರೆ ಘಾತ ಮಾಡಿದ ನಿನ್ನೆ. ಮಾಸ್ತರರನ್ನ ಕೂಡಿಕೊಂಡು ಇಪ್ಪತ್ತು ಮಂದಿ ಸಿಕ್ಕರು ಪೋಲೀಸರ ಕೈಯಾಗ. ನಾ ಒಬ್ಬನs ತಪ್ಪಿಸಿಕೊಂಡು ಬಂದಿದ್ದೆ. ಹಾದಿ ಯೊಳಗs ಪೋಲೀಸರು ಮಠದ ಕಡೆಗೆ ಹೊರಟದ್ದು ಕಾಣಿಸಿತು. ಅವರ ಹಿಂದಿನಿಂದಲೇ ಬಂದೆ. ಅವರು ಗಿಡದ ಕೆಳಗೆ ಕುಳಿತುಕೊಂಡರು. ನಾ ಅಲ್ಲೇ ಸುತ್ತುತ್ತ ಮುಂದೇನು ಮಾಡಬೇಕಂತ ಲೆಕ್ಕ ಹಾಕುತ್ತಿದ್ದೆ. ಅಷ್ಟರೊಳಗ ವಿಶ್ವನಾಥ ಮಠದ ಕಡೆಗೆ ಬಂದ. ಗುಂಡು ಹಾರಿತು. ದೇಸಾಯರು ಹೊರಗ ಬಂದು ಅಳಲಿಕ್ಕೆ ಹತ್ತಿದಾಗ ಅವ ವಿಶ್ವನಾಥ ಅನ್ನೋದೂ ಗೊತ್ತಾಯಿತು ನನಗೆ."

"ದೇಸಾಯರೂ ಇದ್ದರೇನು ಅಲ್ಲಿ ? ಅವರ್ಯಾಕ ಬಂದಿದ್ದರೋ !"

"ಏನೋ. ಅಂತೂ ಮಗ ಸಾಯುವಾಗ ಅಲ್ಲೇ ಇದ್ದರು. ಈಗಲಾದರೂ ಅವರ ತಲೆಯೊಳಗಿನ ಹುಚ್ಚು ಇಳಿದಿರಬೇಕು. ಚಳವಳಿಯಿಂದ ಮಗನ್ನ ಬಿಡಿಸಿಕೊಂಡು ಕರಕೊಂಡು ಹೋಗಬೇಕಂತ ಒದ್ದಾಡುತ್ತಿದ್ದ ಮುದುಕ...."

"ನಾವು ಅಗಸೆಯ ಹತ್ತಿರ ನಿಂತದ್ದು ನಿನಗ ಹ್ಯಾಂಗ ಗೊತ್ತಾಯ್ತು ಶೇಖರಣ್ಣ ?"

"ವಿಶ್ವನಾಥ ಗುಂಡು ಹತ್ತಿ ಬಿದ್ದ ಕೂಡಲೆ, ಅವ ವಿಶ್ವನಾಥ ಅನ್ನೋದು ಗೊತ್ತಾದ ಕೂಡಲೆ ಅವನ ಸಂಗಡ ಹೇಮಾ ಇದ್ದದ್ದು ನೆನಪಾಯ್ತು ನನಗ. ನೀ ಮಾತ್ರ ಜೇಲಿನಿಂದ ಓಡಿಬಂದಿರಬಹುದು ಅಂತ ನನಗ ಕಲ್ಪನಾ ಇರಲಿಲ್ಲ. ಆ ಕೀರ್ತಿನಾಥ ಬ್ಯಾರೆ ಹೇಮಾ ಹೆಸರು ತಕ್ಕೊಂಡು ಪೋಲೀಸರಿಗೆ ಆರ್ಡರ್ ಕೊಡ್ತಾ ಇದ್ದ. ಇವಳೂ ಸಿಕ್ಕಿಬಿಟ್ಟಾಳಂತ ಹಿಂದಿನಿಂದ ಹಾಯ್ದು ನಾ ನಿಮ್ಮ ಹತ್ತಿರ ಬಂದೆ...."

"ನೀ ಬರದಿದ್ದರ ಏನಾಗತಿತ್ತು ಗೊತ್ತೇನು ?"

"ನೀವಿಬ್ಬರೂ ಸಿಕ್ಕಿಬಿಡುತಿದ್ದಿರಿ ?"

"ಗುಂಡು ಹಾರಿದ ಸಪ್ಪಳ ಕೇಳಿ ನನಗಂತೂ ಅಲ್ಲಿ ನಿಲ್ಲೂದಕ್ಕಾಗಲಿಲ್ಲ. ಪ್ರಾಣ ಹೋದರೂ ವಿಶ್ವನಾಥನ್ನ ಬಿಡಿಸಿ ತರಬೇಕಂತ ಹೊರಟಿದ್ದೆ."

"ಹಾಂಗೆಲ್ಲ ಉದ್ರೇಕದಿಂದ ದುಡುಕಬಾರದು ಸಂಗಣ್ಣ. ಒಂದು ಜೀವ ಅಂತೂ ಹೋಗಿರುತ್ತೈತಿ. ಅದಕ್ಕ ಸಿಟ್ಟಾಗಿ ಇನ್ನುಳಿದ ಜೀವಗಳನ್ನು ಬಲಿಕೊಡ ಬಾರದು. ಈಗ ನಾವೇನು ಮಾಡಿದರೂ ವಿಶ್ವನಾಥ ತಿರುಗಿ ಬರೋದು ಸಾಧ್ಯ ಐತೇನು ? ಹೋದವ ಹೋದ. ಪುಣ್ಯವಂತ ಅವ. ಮಾಡಿದ–ಮಡಿದ. ದೇಶ ಕ್ಕಾಗಿ ಪ್ರಾಣ ಕೊಟ್ಟ. ನಮ್ಮ ಗುಂಪಿನ ರತ್ನ ಕಳೆದುಹೋಯ್ತು. ನಮ್ಮ ಬೆಳಕು ಆರಿಹೋಯ್ತು...." ಎಂದು ನುಡಿದು ಶೇಖರ ತಲೆಬಾಗಿಸಿಕೊಂಡು ದಾರಿ ನಡೆಯ ತೊಡಗಿದ.

ಕೆಲಕಾಲ ಮೂವರೂ ಮೌನವಾಗಿ ದಾರಿ ತುಳಿಯುತ್ತಿದ್ದರು. ಹೇಮಾ ಅತ್ಯಂತ ಕಷ್ಟದಿಂದ ತನ್ನ ಭಾವನೆಗಳನ್ನು ಬಿಗಿಹಿಡಿದುಕೊಂಡಿದ್ದಳು.

ಪುಟ್ಟ ಗುಡ್ಡವೊಂದನ್ನು ಹತ್ತಿ ಇಳಿದು ಅವರು ಕವಲುದಾರಿಯೊಂದರ ಬಳಿ ಬಂದರು. ಶೇಖರ ಕೊಂಚ ಹೊತ್ತು ತಡೆದು ನಿಂತು ಸಂಗಣ್ಣನನ್ನು

ಕುರಿತು—"ನಾ ಜೆಳಗಾವಿಗೆ ಹೋಗುತೀನಿ ಸಂಗಣ್ಣ. ನಾಳೆ ಕೊಲ್ಲಾಪುರ ದೊಳಗ ಸಭಾ ಐತಿ. ಅದಕ್ಕ ಹೋಗಬೇಕು," ಎಂದ.

"ಗೋಕಾವಿಯು ಮ್ಯಾಲಿಂದಲೇ ಹೋದರಾಯ್ತಲ್ಲ?"

"ಹೋಗಬಹುದು. ಆದರ ಹೀಂಗ ಮೂವರೂ ಕೂಡಿ ಹೋಗೂದು ನೆಟ್ಟಗಲ್ಲ. ನೀವಿಬ್ಬರೂ ಗೋಕಾವಿಗೆ ಹೋಗಿ. ಅಲ್ಲೇ ಇರ್ರಿ ಎರಡು ದಿನ. ನಾ ಬರುವಾಗ ಹಾಂಗ ಹಾಯ್ದು ಬರ್ತೀನಿ. ಎಲ್ಲಾರೂ ಕೂಡೇ ಬರೋಣವಂತೆ. ಸಭಾದಾಗ ಏನೇನಾಗುತೈತಿ ನೋಡಿಕೊಂಡು ಮುಂದಿನ ಕಾರ್ಯಕ್ರಮ ತಯಾರು ಮಾಡೋಣವಂತೆ. ಆ ಸಭಾಕ್ಕ ಹೋಗಬಾರದು ಅಂತ ಈಗಲೂ ಅನಿಸುತೈತಿ ನನಗ. ಯಾತಕ್ಕಾದರೂ ಮಾಡುತಾರೋ ಸಭಾ? ಇಷ್ಟರ ತನಕ ಸುಮ್ಮಗ ಇದ್ದ ಮುಖಂಡರೆಲ್ಲಾ ಈಗ ಅಲ್ಲಿಗೆ ಬರ್ತಾರಂತ. ಬಂದು ಏನು ಗುಡ್ಡಾ ಕಡೀ ತಾರೊ ನೋಡಬೇಕು. ಕೆಲಸ ಮಾಡೂದಕ್ಕ ಸಭಾ ಕರದಾರೋ, ಇಲ್ಲ, ಮಾಡ್ತಾ ಇರೂದನ್ನ ಕೆಡಿಸೂದಕ್ಕ ಕರದಾರೋ ಯಾವುದೂ ತಿಳೀದಾಂಗಾಗೈತಿ...."

ಅವನ ಆಶಂಕೆಯೂ ವ್ಯರ್ಥವಾದುದಾಗಿರಲಿಲ್ಲ. ಮಾರನೆಯ ದಿನ ಮಧ್ಯಾಹ್ನ ಕೊಲ್ಲಾಪುರದಲ್ಲಿ, ಊರ ಹೊರಗಿನ ಬಂಗಲೆಯೊಂದರಲ್ಲಿ ಸಭೆ ಕೂಡಿ ದಾಗ ಅವನು ಯೋಚಿಸಿದ್ದ ಹಾಗೇ ಮಾತಿಗಾರಂಭವಾಯಿತು.

ಆ ಸಭೆಗೆ ಕರ್ನಾಟಕದ ಎಲ್ಲ ಕಡೆಗಳಿಂದಲೂ ಕಾಂಗ್ರೆಸ್ ಕಾರ್ಯಕರ್ತರು ಬಂದಿದ್ದರು. ಅಲ್ಲಲ್ಲಿ ತಮತಮಗೆ ತಿಳಿದ ರೀತಿಯಲ್ಲಿ ಚಳವಳಿಯ ಕೆಲಸ ನಡಸುತ್ತಿದ್ದ ಅಜ್ಞಾತವಾಸಿ ವೀರರೂ ಆಗಮಿಸಿದ್ದರು. ಪುಣೆ, ಮುಂಬಯಿ, ಬೆಂಗಳೂರು, ಮದರಾಸು ಇತ್ಯಾದಿ ದೊಡ್ಡ ನಗರಗಳಲ್ಲಿ ತಲೆ ಮರೆಸಿಕೊಂಡು ಸುಮ್ಮನೆ ಕಾಲ ಕಳೆಯುತ್ತಿದ್ದ ಮುಖಂಡರೂ ಬಂದಿದ್ದರು. ಶಾಮರಾಯರೂ ಬಂದಿದ್ದರೆಂದು ಬೇರೆ ಹೇಳಬೇಕಾಗಿಲ್ಲ.

ಅವರ ಅಧ್ಯಕ್ಷತೆಯಲ್ಲಿಯೆ ಸಭೆಯ ಕೆಲಸಕ್ಕಾರಂಭವಾಯಿತು. ಪ್ರಾಂತೀಯ ಕಾಂಗ್ರೆಸ್ಸಿನ ಅಧಿಕಾರಿಯಾಗಿದ್ದವರೊಬ್ಬರು ಆಗಸ್ಟ್ ತಿಂಗಳಿನಿಂದ ಇದುವರೆಗೆ ನಡೆದ ಘಟನೆಗಳ ಸಿಂಹಾವಲೋಕನ ಮಾಡಿ ಕರ್ನಾಟಕದ ಬೇರೆ ಬೇರೆ ಕಡೆ ಗಳಲ್ಲಿ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದವರೆಲ್ಲ ತಮ್ಮ ವರದಿಗಳನ್ನೊಪ್ಪಿಸ ಬೇಕೆಂದು ತಿಳಿಸಿದರು.

ಶೇಖರನಿಗೂ, ಅವನ ಹಾಗೆಯೆ ಸಮರಭೂಮಿಯಲ್ಲಿ ಹೋರಾಡುತ್ತಿದ್ದವರಿಗೂ ಅದೊಂದು ಅನವಶ್ಯಕ ಚರ್ಚೆಯೆಂದೆನ್ನಿಸದಿರಲಿಲ್ಲ. "ವರದಿ ಕೊಡಬೇಕಂತೆ! ಏನು ವರದಿ ಕೊಡುವುದು ಇವರಿಗೆ ?"

"ಶೇಖರಪ್ಪ, ನಿಮ್ಮ ಗುಂಪಿನಲ್ಲಿ ಎಷ್ಟು ಜನರಿದ್ದಾರೆ ?" ಎಂದು ಕೇಳಿದರು ಕಲ್ಲಪ್ಪನವರು.

ಅದೇ ಕಲ್ಲಪ್ಪನವರೆ, ಮುಂಬಯಿಯಲ್ಲಿ ಅಂದು ತಾವೆಲ್ಲ ಸೇರಿದ್ದಾಗ ಹಣೆಗೆ ಕೈ ಇಟ್ಟುಕೊಂಡು ಹೇಡಿಯ ಹಾಗೆ ಕುಳಿತಿದ್ದರು! ಗಾಂಧೀ, ನೆಹರೂ ಇತ್ಯಾದಿ ಮುಖಂಡರನ್ನೆಲ್ಲ ಬಂಧಿಸಿ ಸರಕಾರ ಭಾರತೀಯರಿಗೆ ಆಹ್ವಾನ ಕೊಟ್ಟಿದ್ದಿತು, ಮಾಡಬೇಕು–ಇಲ್ಲ–ಮಡಿಯಬೇಕು ಎಂದು ಅಪ್ಪಣೆ ಕೊಟ್ಟು ಹೋಗಿದ್ದರು ಮಹಾತ್ಮಾಜೀ. ಅವರ ಅಪ್ಪಣೆಯಂತೆ ಎಲ್ಲ ಪ್ರಾಂತಗಳಲ್ಲೂ ಹೋರಾಟಕ್ಕಾರಂಭವಾಗಬೇಕಾಗಿದ್ದಿತು. ಹೋರಾಟದ ನಾಯಕತ್ವವನ್ನು ವಹಿಸಿ ಈ ಮುಖಂಡರು ತಮ್ಮಂಥ ಸೈನಿಕರಿಗೆ ಮಾರ್ಗದರ್ಶನ ಮಾಡಬೇಕಾಗಿದ್ದಿತು. ಅವರು ನಾಯಕತ್ವ ವಹಿಸುವರೆಂದು ನಂಬಿಕೊಂಡು ತಾವೆಲ್ಲ ಅವರನ್ನು ವಿಚಾರಿಸಿದ್ದಾಗಿದ್ದಿತು. ಆಗ ಏನನ್ನೂ ಹೇಳದೆ ತೆಪ್ಪಗೆ ಕುಳಿತಿದ್ದ ಅದೇ ಕಲ್ಲಪ್ಪನವರೇ ದೊಡ್ಡ ಮುಖಂಡರಂತೆ ಜವಾಬು ಕೇಳುತ್ತಿದ್ದಾರೆ! ಅವರೆಲ್ಲ ಹೇಡಿಗಳಂತೆ ತೆಪ್ಪಗೆ ಕುಳಿತಿದ್ದರೂ ತಾವು ನಿರಾಶರಾಗಲಿಲ್ಲ. ತಮಗೆ ತಿಳಿದ ರೀತಿಯಲ್ಲಿ ಸಾಧ್ಯವಾದಷ್ಟು ಉತ್ತಮವಾಗಿ ಕೆಲಸ ಮಾಡಿದ್ದಾಗಿದೆ. ಚಳವಳಿಯಲ್ಲಿ ಒಂದು ಕಡ್ಡಿಯನ್ನೂ ಅಲುಗಾಡಿಸದ ಇವರಿಗೆ ನಮ್ಮನ್ನು ಈ ರೀತಿ ಕೇಳಲು ಏನು ಅಧಿಕಾರ–ಎಂದು ಶೇಖರ ಕುದಿಯುತ್ತಿದ್ದ.

"ಬಂದೂಕು, ಪಿಸ್ತೂಲು ಎಷ್ಟಿದಾವೆ ಶೇಖರಪ್ಪ ?" ಈ ಸಲ ಶಾಮರಾಯರು ಪ್ರಶ್ನಿಸಿದರು.

ಉತ್ತರವೀಯುವ ಮನಸ್ಸಿರದಿದ್ದರೂ ಶೇಖರ ಉತ್ತರವಿತ್ತ :

"ನೂರರ ಮ್ಯಾಲ ಇದಾವೆ."

"ಅವನ್ನೆಲ್ಲ ಎಲ್ಲಿಂದ ತಂದೀರಿ ?" ಕಲ್ಲಪ್ಪ ಕೇಳಿದರು.

"ಸಿಕ್ಕಿದಲ್ಲಿಂದ ತಂದೀವಿ."

"ನೀವು ಮಾಡುತ್ತಿರುವ ಕೆಲಸಗಳ ಸುದ್ದೀ ಎಲ್ಲಾ ನಾವು ಪೇಪರಿನಾಗ

ಓದಿದ್ದೀವಿ. ಮೊನ್ನೆ ಹಪ್ತೆ ವಸೂಲೀ ಸೆಂಟರ್ ಲೂಟಿ ಮಾಡಿದಿರಂತಲ್ಲ?"— ಎಂದರು ಶ್ಯಾಮರಾಯರು.

"ಹೌದು. ನಮ್ಮ ಕಂದಾಯುದ ಹಣ ವಸೂಲ್ಮಾಡೋದಕ್ಕೆ ಆ ಸರಕಾರಕ್ಕ ಏನೂ ಅಧಿಕಾರ ಇಲ್ಲ. ಅದಕ್ಕs ಅದನ್ನು ಲೂಟಿ ಮಾಡಿದೆವು."

"ಎಷ್ಟು ರೂಪಾಯಿ ಬಂದವು ಅದರಾಗ?"—ಎಂದರು ಕಲ್ಲಪ್ಪ.

"ನಿಮಗ ಕೇಳುವ ಅಗತ್ಯ ಆದರೂ ಏನು?" ಎಂದ ಶೇಖರ.

ಒಡನೆಯೆ ಮೊದಲು ಮಾತನಾಡಿದ್ದ ಕಾಂಗ್ರೆಸ್ ಅಧಿಕಾರಿ ಶಾಂತಸ್ವರದಲ್ಲಿ ನುಡಿದರು: "ಹೇಳಾಕ ಬೇಕು ಶೇಖರಪ್ಪ. ಇದನ್ನೆಲ್ಲಾ ನೀವು ಕಾಂಗ್ರೆಸ್ಸಿನ ಹೆಸರಿನಲ್ಲಿ ನಡಸಿದ್ದೀರಿ ಅಂದ ಮ್ಯಾಲ ಕಾಂಗ್ರೆಸ್ಸಿನ ಅಧಿಕಾರಿಗಳಿಗೆ ತಿಳಿಸಾಕs ಬೇಕಾಗುತೈತಿ."

ಕೋಪದಿಂದ ಕನಲಿ ಶೇಖರನೆಂದ: "ಕಾಂಗ್ರೆಸ್ ಅಧಿಕಾರಿಗಳು ಅಂತ ಈಗ ಮೂಗು ಮ್ಯಾಲ ಮಾಡಿಕೊಂಡು ಬಂದಿರುವ ನೀವೆಲ್ಲಾ ಕಾಂಗ್ರೆಸ್ಸಿನ ಮಾನ ಉಳಿಸುವದಕ್ಕಾದರೂ ಸ್ವಲ್ಪಾದರೂ ಕೆಲಸ ಮಾಡಿದ್ದೀರಾ ಇಷ್ಟರತನಕ? ಆಗಸ್ಟ್ ಒಂಬತ್ತರಿಂದ ಇದುವರೆಗೆ ನೀವು ದೊಡ್ಡ ಮುಖಂಡರಂತೆ ಮೆರೆಯು ವವರು ಏನು ಮಾಡೀರಿ ಹೇಳ್ರಿ. ಅವೊತ್ತು ಮುಂಬಯಿಯೊಳಗ ಸಭಾ ಕೂಡಿ ದಾಗ ನೀವ್ಯಾರೂ ಬಾಯಿ ಬಿಚ್ಚಲಿಲ್ಲ. ಕೈಯೊಳಗ ಬಳೀ ತೊಟ್ಟವರ್ಹಾಂಗ ಸುಮ್ಮಗ ಕೂತಿದ್ದಿರಿ. ನಿಮ್ಮನ್ನ ನೋಡಿ ನಾವೂ ಸುಮ್ಮನs ಕೂತಿದ್ದರ ಕರ್ನಾಟಕದ ಮರ್ಯಾದೆಯೆಲ್ಲಾ ಹಾಳಾಗಿಹೋಗುತಿತ್ತು. ಕಾಂಗ್ರೆಸ್ಸಿನ ಹೆಸರೂ ಹಳ್ಳಾ ಕೂಡಿ ಹೋಗುತಿತ್ತು. ನಾವು, ಹಳ್ಳಿಯ ಮಂದಿ ಸುಮ್ಮನೆ ಕೂಡ್ರದೆ ನಮಗ ತಿಳಿದ ಹಾಂಗ ಕೆಲಸ ಮಾಡಿದ್ದೀವಿ. ಈಗ ಬಂದಿರೇನು ನೀವು ಕಾಂಗ್ರೆಸ್ ಅಧಿಕಾರಿಗಳು, ನಮ್ಮ ತಲೆಯ ಮೇಲೆ ಮೆಣಸು ಅರೆಯೋದಕ್ಕೆ?"

ಕೆಲಕಾಲ ಸಭಿಕರೆಲ್ಲ ಮೌನವಾಗಿ ಕುಳಿತುಕೊಂಡಿದ್ದರು. ಶೇಖರ ಆಡಿದ ಮಾತುಗಳಲ್ಲಿ ಸತ್ಯಾಂಶ ತುಂಬಿದ್ದುದರಿಂದ ಅದಕ್ಕುತ್ತರವೀಯಲು ಯಾರಿಗೂ ಸಾಧ್ಯವಿರಲಿಲ್ಲ. ಶೇಖರನನ್ನು ಸಮಾಧಾನಗೊಳಿಸಲೆಂದು ಉಪಾಯವಾಗಿ ಮಾತ ನಾಡತೊಡಗಿದರು ಶಾಮರಾಯರು.

"ಇಲ್ಲಿ ನೋಡು ಶೇಖರಪ್ಪ. ನೀವು ಕೆಲಸ ಮಾಡಿದ್ದೀರಿ, ಸಾಕಷ್ಟು ಕೆಲಸ ಮಾಡಿದ್ದೀರಿ ಅಂಬೂದನ್ನ ನಾವು ಒಪ್ಪುತ್ತೇವೆ. ನಾವು ಯಾರೂ ಏನೂ

ಮಾಡಿಲ್ಲ ಅಂಬೂದನ್ನೂ ಒಪ್ಪುತ್ತೇವೆ. ನಾವು ಯಾಕ ಮಾಡಲಿಲ್ಲ ಗೊತ್ತೇನು ನಿನಗೆ ?"

ಶೇಖರ ತಲೆಯನ್ನು ಮೇಲಕ್ಕೆತ್ತದೆ ಸುಮ್ಮನೆ ಕುಳಿತಿದ್ದ. ರಾಯರು ಹೇಳುತ್ತಿದ್ದರು :

"ಯಾಕೆ ಅಂದರೆ ಒಂದೇ ಕಾರಣ. ಗಾಂಧೀಜಿ, ನೆಹರೂ ಎಲ್ಲರ ಬಂಧನ ಆದಷ್ಯಾಲ ಏನು ಮಾಡಬೇಕು ಅನ್ನೋದೇ ನಮಗೆ ಹೊಳೆಯಲಿಲ್ಲ. ಮೊದಲಿನ ಹಾಗೆ ಸತ್ಯಾಗ್ರಹ ಮಾಡಿ ಜೇಲಿಗೆ ಹೋಗುವ ಕಾರ್ಯಕ್ರಮವೂ ಇರಲಿಲ್ಲ. ಹಾಗಾದರ ಏನು ಮಾಡಬೇಕು ಅನ್ನೋದೇ ಪ್ರಶ್ನೆಯಾಗಿತ್ತು. ನೀವು ತರುಣರು ವಿಧ್ವಂಸಕ ಕೃತ್ಯಗಳಿಗೆ ಕೈಹಾಕಿದಿರಿ...."

"ವಿಧ್ವಂಸಕ ಅಂದರೇನು ರಾಯರs ! ಸರಕಾರದ ಯಂತ್ರವನ್ನು ಮುರಿಯ ಬೇಕಂತ ಮಾಡಿದ್ದು ಅದೆಲ್ಲಾ," ಎಂದು ಒಬ್ಬರು ನಡುವೆಯೆ ನುಡಿದರು.

"ಅದನ್ನು ನಾನು ಒಪ್ಪುತ್ತೇನೆ. ಸರಕಾರದ ಯಂತ್ರ ಮುರಿಯಬೇಕಂತ ನೀವು ಸ್ಟೇಶನ್ ಸುಡುವದು, ಪೂಲು ಒಡೆಯುವದು, ತಾರತಂತಿ ಕಟ್ ಮಾಡು ವದು, ದಪ್ತರು ಚಾವಡಿ ಸುಡುವದು, ಟಪಾಲು ಲೂಟಿ ಮಾಡುವದು ಮೊದ ಲಾದುವನ್ನೆಲ್ಲ ಮಾಡಿದಿರಿ. ಪರದೇಶೀಯರ ವಿರುದ್ಧ ಬಂಡೆದ್ದ ಪ್ರತಿಯೊಂದು ದೇಶದೊಳಗೂ ಕ್ರಾಂತಿಕಾರರು ಇಂಥ ವಿಧ್ವಂಸಕ ಕೃತ್ಯ ಮಾಡಿದ್ದಾರೆ. ಅಯರ್ಲಂಡ್, ರಶಿಯಾ, ಅಮೇರಿಕಾ ಎಲ್ಲ ಕಡೆಗಳಲ್ಲೂ ಇಂಥ ಕೆಲಸ ನಡೆದಾವ. ಆದರs ಈ ಎಲ್ಲಾ ದೇಶಗಳಿಗೂ ಹಿಂದುಸ್ಥಾನಕ್ಕೂ ಇರೋ ವ್ಯತ್ಯಾಸವನ್ನು ಮಾತ್ರ ನಾವು ಮರೆಯಬಾರದು. ಅವರು ನಡಸಿದ ಸ್ವಾತಂತ್ರ್ಯ ಚಳವಳಿ ಗಳಿಗೂ ನಮ್ಮ ಗಾಂಧೀಜಿ ನಡಸಿದ ಚಳವಳಿಗೂ ಇರುವ ಭೇದವನ್ನು ನಾವು ಮರೆಯಬಾರದು. ಸ್ವಾತಂತ್ರ್ಯಕ್ಕಾಗಿ ಎಂಥ ಕೃತ್ಯ ಮಾಡುವದಕ್ಕೂ ಅವರು ಹಿಂಜರಿಯುವದಿಲ್ಲ. ಆದರs ಗಾಂಧೀಜಿಯವರ ದಾರಿ ಹಾಗಲ್ಲ. ಸತ್ಯ, ಅಹಿಂಸೆ ಗಳ ಆಧಾರದ ಮೇಲೆ ಅವರ ಚಳವಳಿ ರೂಪುಗೊಂಡದ್ದು. ನಮ್ಮ ಚಳವಳಿಗಳಲ್ಲಿ ಸ್ವಲ್ಪ ಕೂಡಾ ಹಿಂಸೆಗೆಡೆಯಿರಬಾರದು ಅಂತ ಅವರ ಹಟ...."

"ನಾವೇನೂ ಹಿಂಸಾ ಮಾಡಲಿಲ್ಲ ರಾಯರ ?"

"ಮಾಡಿರಲಿಕ್ಕಿಲ್ಲ. ಆದರs ಗಾಂಧೀ ತತ್ವದ ದೃಷ್ಟಿಯಿಂದ ಈ ವಿಧ್ವಂಸಕ

ಕೃತ್ಯಗಳೂ ಹಿಂಸೆಯೇ. ಈ ಬಂದೂಕು, ಈ ಗುಂಡು, ಈ ಪಿಸ್ತೂಲು, ಈ ಬಾಂಬು...."

"ಸರಕಾರದ ಯಂತ್ರವನ್ನ ಮುರಿಯುವದಕ್ಕೆ ಮಾತ್ರ ನಾವು ಅವುಗಳನ್ನು ಉಪಯೋಗಿಸಿಕೊಂಡಿದ್ದೇವೆ ರಾಯರs. ಒಬ್ಬರಿಗೂ ಅಪಾಯ ಮಾಡಿಲ್ಲ ಅವುಗಳಿಂದ!"

"ಇರಬಹುದು. ಆದರೂ ಚಳವಳಿಯೊಳಗ ಈ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವದನ್ನ ಗಾಂಧೀಜಿ ಎಂದೂ ಒಪ್ಪಿಲ್ಲ ಇನ್ನು ಮುಂದೂ ಒಪ್ಪಲಿಕ್ಕಿಲ್ಲ. ಒಂದು ರೀತಿಯಿಂದ ಇದೂ ಹಿಂಸೆಯೇ....ಪಿಸ್ತೂಲು ಗುರಿ ಹಿಡಿದು, ಸ್ಟೇಶನ್ ಮಾಸ್ತರನ್ನ ಹೆದರಿಸಿ, ಸ್ಟೇಶನ್ ಸುಡೋದು ಹಿಂಸಾ ಅಲ್ಲೇನು ?"

"ಅವರ ಒಂದು ಕೂದಲಿಗೂ ಧಕ್ಕೆ ಆಗದ ಹಾಂಗ ನೋಡಿಕೊಂಡಿರುತೀವಿ ರಾಯರs. ಸ್ಟೇಶನ್ನು ಸರಕಾರದ ಆಸ್ತಿ. ಅದನ್ನ ಸುಡೋದು ಮಾತ್ರ ನಮ್ಮ ಕೆಲಸ. ಸ್ಟೇಶನ್ ಮಾಸ್ತರರ ಮ್ಯಾಲ ನಮಗಾವ ದ್ವೇಷವೂ ಇರೋದಿಲ್ಲ. ಇರಬೇಕಾದ ಅಗತ್ಯವೂ ಇಲ್ಲ."

"ಆ ಮಾತು ಇರಲಿ. ಇದುವರೆಗೆ ಆದದ್ದು ಆಗಿಹೋಯ್ತು. ದೇಶಪ್ರೀತಿಗಾಗಿ ನೀವೆಲ್ಲಾ ಜೀವದ ಹಂಗು ತೊರೆದು ಹೋರಾಡಿದ್ದೀರಿ ಅನ್ನೂದು ನಮಗೂ ಗೊತ್ತು. ನಿಮ್ಮ ಬಗ್ಗೆ ನಮಗೂ ಅಭಿಮಾನ ಅದ. ಆದರs ಇನ್ನು ಮುಂದೆ ಮಾತ್ರ ಇಂಥಾ ಕೆಲಸ ಮಾಡಬಾರದು. ನಿಲ್ಲಿಸಿಬಿಡಬೇಕು. ಗಾಂಧೀಜಿಯವರಿಗೆ ಇದ್ಯಾವದೂ ಒಪ್ಪಿಗೆಯಿಲ್ಲ."

"ಈ ಮಾತು ನಿಮಗ ಹ್ಯಾಂಗ ಗೊತ್ತಾಯ್ತು, ರಾಯರs ?"

"ಹ್ಯಾಗೋ ಗೊತ್ತಾಯ್ತು. ಅವರ ಭೆಟ್ಟಿಗೆ ಹೋದವರೊಬ್ಬರು ಬಂದು ನನಗೆ ಹೇಳಿದರು."

"ಮತ್ತೇನು ಮಾಡಬೇಕಂತೆ ನಾವು ?"

"ಎಲ್ಲರೂ ಸತ್ಯಾಗ್ರಹ ಮಾಡಿ ಸೆರೆಮನೆಗೆ ಹೋಗಬೇಕಂತೆ."

ಶೇಖರ ಹತಾಶನಾಗಿ ಕುಳಿತುಕೊಂಡ. ಮತ್ತೆ ಸತ್ಯಾಗ್ರಹದ ಮಾತು! ಮತ್ತೆ ಸೆರೆಮನೆಯ ಮಾತು!

"ಗಾಂಧೀಜಿಯವರು ಹೀಂಗ ಹೇಳಿದ್ದಾರು ಅಂತ ನಾವು ನಂಬುವದಕ್ಕಾಗುವದಿಲ್ಲ ರಾಯರs. ಭಾಷಣದೊಳಗ ಅವರು ಹೇಳಿದ್ದೇನು ? ಎಲ್ಲರೂ

ಇಂದಿನಿಂದ ಸ್ವತಂತ್ರರು, ಈ ಸರಕಾರಕ್ಕ ತಲೆಬಾಗಿಸಬಾರದು, ಸ್ವತಂತ್ರ ಸರಕಾರವನ್ನು ಸ್ಥಾಪಿಸಬೇಕು ಅಂತ ಹೇಳಿದರೋ ಇಲ್ಲೋ ?"

"ಹೌದು. ಹೇಳಿದರು."

"ಅದರ ಅರ್ಥ ಏನು ಹೆಂಗಾದರ? ನಾವು ಸ್ವತಂತ್ರರು ಅಂದ ಮ್ಯಾಲ ನಮ್ಮನ್ನ ಹಿಡಿದು ಜೇಲಿಗೆ ಹಾಕೋದಕ್ಕ ಈ ಸರಕಾರಕ್ಕ ಏನು ಅಧಿಕಾರ? ಅವರ ಜೇಲುಗಳಿಗೆ ನಾವ್ಯಾಕ ಹೋಗಬೇಕು? ಅವರ ಅಧಿಕಾರವನ್ನೇ ಒಪ್ಪಬಾರದು ನಾವು. ಅಂದ ಮ್ಯಾಲ ಸತ್ಯಾಗ್ರಹದ ಮಾತೆಲ್ಲಿ ಬರುತ್ತೈತಿ ?"

"ನೀ ಹೇಳೂದೂ ನಿಜ ಶೇಖರಪ್ಪ. ಆದರ ಯಾವುದನ್ನ ಮಾಡಿದರೂ ಅಹಿಂಸೆಯ ಅಳವಿನೊಳಗೇ ಮಾಡಬೇಕು ಅಂತ ಗಾಂಧೀಜಿಯವರ ಅಪೇಕ್ಷೆ. ಈ ಶಸ್ತ್ರಾಸ್ತ್ರ ಹಿಡಿಯದೆ ಏನಾದರೂ ಮಾಡಲಿಕ್ಕೆ ಸಾಧ್ಯ ಇದ್ದರ ಮಾಡಬಹುದು ನೀವು."

"ಮಾಡಬಹುದು ಅನ್ನೂದಕ್ಕಿಂತಲೂ ಆತ್ಮಹತ್ಯ ಮಾಡಿಕೊಳ್ಳಬಹುದು ಅಂದರ ನೆಟ್ಟಗ ರಾಯರ! ಕೈಯೊಳಗ ಪಿಸ್ತೂಲು ಇದ್ದರ ಪೋಲೀಸರು ಹೆದರಿ ಸುಮ್ಮನಾಗಿರ್ತಾರ. ಏನೂ ಇಲ್ಲದೆ ಹಾಂಗ ನಾವು ಹಪ್ತೆ ವಸೂಲೀ ಕೇಂದ್ರ ಸುಲಿಯೋದಕ್ಕ ಹೋದರೆ, ಹೋದವರೆಲ್ಲಾ ಅವರ ಬಂದೂಕಿಗೆ ಬಲಿಯಾದ ಹಾಂಗೇ. ನಾವೆಲ್ಲಾ ಏನಾದರೂ ಕೆಲಸ ಮಾಡಬೇಕು ಅಂತೀರೋ, ಸಾಯಬೇಕು ಅಂತೀರೋ ನೀವು ?"

"ನಿಮ್ಮಂಥ ಶೂರ ತರುಣರನ್ನ ಕಳೆದುಕೊಂಡರೆ ನಮಗೇನು ಆನಂದ ಆಗುತದ ಶೇಖರಪ್ಪ? ಈ ದಾರಿ ನಮಗ ಹಿಡಿಸುವದಿಲ್ಲ ಅಂತ ನಿಮಗ ಹೇಳುತೀವಿ. ನಮ್ಮ ಮಾತು ಕೇಳಬೇಕಂತ ನಿಮಗೆ ಇಚ್ಛೆ ಇದ್ದರ ಕೇಳಬಹುದು ಇಲ್ಲಾಂದರ ಬಿಡಬಹುದು...."

"ಕೇಳದಿದ್ದರ ನಾಳೆ ನಿಮ್ಮ ಮ್ಯಾಲ ಕ್ರಿಮಿನಲ್ ಕೇಸ್ ಆಗತಾವ," ಎಂದು ಮಾಜಿ ಮಂತ್ರಿ ಮಹಾಶಯರು ಬೆದರಿಕೆ ಹಾಕಿದರು.

ಶೇಖರ ಉತ್ತೇಜಿತನಾಗಿ ಕಲ್ಲಪ್ಪನವರ ಕಡೆಗೆ ತಿರುಗಿ "ನಮಗ ಕ್ರಿಮಿನಲ್ ಬೆದರಿಕೀ ಹಾಕ್ತೀರೇನ್ರಿ ಮಂತ್ರಿಗಳೆ? ಮನೆಮಾರು, ಹೆಂಡರು ಮಕ್ಕಳು, ಊಟ ಉಡಿಗೆ, ಪ್ರಾಣ ಗೀಣ ಯಾವುದನ್ನೂ ಲೆಕ್ಕಿಸದೆ ಕೆಲಸ ಮಾಡ್ತಾ ಇರುವ ನಮಗೆ ಕ್ರಿಮಿನಲ್ ಹೆದರಿಕೀ ಹಾಕ್ತೀರಾ? ಅಂದಮಾನಕ್ಕ ಹೋಗಬೇಕಾಗಿ

ಬಂದರೂ ಹೆದರುವವರು ಯಾರೂ ಇಲ್ಲ ನಮ್ಮೊಳಗೆ. ದೇಶಕ್ಕಾಗಿ ಸಂತೋಷ ದಿಂದ ಹೋಗುತಾರ. ಅದನ್ನ ಮರೀಬ್ಯಾಡ್ರಿ...." ಎಂದ.

"ಸಿಟ್ಟಾಗಬ್ಯಾಡ ಶೇಖರಪ್ಪ!" ಎಂದು ನುಡಿದು ಶಾಮರಾಯರು ಕಲ್ಲಪ್ಪ ನವರ ಕಡೆಗೆ ತಿರುಗಿ—"ನೀವು ಹಾಗೆಲ್ಲ ಮಾತಾಡಬಾರದು ಕಲ್ಲಪ್ಪನವರೆ! ಬಹಳ ಅನ್ಯಾಯದ ಮಾತು ಅದು. ನೀವು ನಾವು ಏನೂ ಮಾಡದೆ ಸುಮ್ಮನೆ ಕೂತಾಗ ಇವರು ಜೀವದ ಹಂಗುದೊರೆದು ಕೆಲಸ ಮಾಡಿದ್ದಾರ. ಅವರು ಮಾಡಿದ ರೀತಿ ನಮಗೆ ಒಪ್ಪಿಗೆಯಾಗಲಿಕ್ಕಿಲ್ಲ. ಆದರೂ ಅವರು ಮಾಡಿದ್ದು ಏನೂ ಸುಳ್ಳಲ್ಲವಲ್ಲ? ಆ ಕೆಲಸಕ್ಕ ಬೆಲೆ ಇದ್ದೇ ಇದೆ. ಆದ್ದರಿಂದ ಅವರನ್ನು ನಾವು ವೀರರಿಗೆ ತಕ್ಕ ಸನ್ಮಾನದಿಂದ ನಡಿಸಿಕೋಬೇಕು," ಎಂದು ನುಡಿದರು.

ಅಂದು ಸಭೆ ಅಷ್ಟಕ್ಕೇ ಕೊನೆಗಂಡಿತು. ಮರುದಿನ ಮತ್ತೆ ಸೇರಿ ಕೊನೆಯ ದಾಗಿ ಎಲ್ಲವನ್ನೂ ನಿರ್ಧರಿಸಬೇಕೆಂದು ಗೊತ್ತಾಗಿದ್ದಿತು. ಆದರೆ ಸಭೆ ನಡೆಯುವ ಯೋಗವೇ ಒದಗಿಬರಲಿಲ್ಲ. ಕರ್ನಾಟಕದ ಕಾಂಗ್ರೆಸ್ ಕಾರ್ಯಕರ್ತರು ಅಲ್ಲಿ ಸೇರಿರುವ ವಿಷಯ ಹೇಗೋ ಗುಪ್ತ ಪೋಲೀಸು ಖಾತೆಗೆ ತಿಳಿದುಹೋದುದರಿಂದ ಬೆಳಗಾಗುವುದರೊಳಗಾಗಿ ಶಾಮರಾಯರನ್ನೊಳಗೊಂಡು ಅನೇಕರು ಬಂಧಿಸ ಲ್ಪಟ್ಟರು. ಶೇಖರನೂ ಇನ್ನಿತರ ಕೆಲವರು ಸೈನಿಕರು ಮಾತ್ರ ಪೋಲೀಸರ ಕೈಗೆ ಸಿಕ್ಕಿಬೀಳದೆ ತಪ್ಪಿಸಿಕೊಂಡರು. ಆ ಊರಿನ ಮಠದಲ್ಲಿ ಅವರು ಬಿಡಾರ ಹೂಡಿದುದೇ ಅದಕ್ಕೆ ಕಾರಣವಾಗಿತ್ತು. ಸ್ವಾಮಿಗಳ ಮಠದಲ್ಲಿ ಅವರು ಉಳಿದು ಕೊಂಡಿರಬಹುದೆಂಬ ಕಲ್ಪನೆ ಪೋಲೀಸರಿಗೆ ಬರಲಿಲ್ಲ.

ಬೆಳಗಾವಿ, ಧಾರವಾಡ, ವಿಜಾಪುರ ಜಿಲ್ಲೆಗಳ ಬೇರೆ ಬೇರೆ ಭಾಗಗಳಲ್ಲಿ ಹೋರಾಟ ನಡಸುತ್ತಿದ್ದ ಹತ್ತು ಜನ ಕಾರ್ಯಕರ್ತರೆಲ್ಲ ಅಂದು ಮಠದಲ್ಲಿಯೆ ಕುಳಿತುಕೊಂಡು ಪರಸ್ಪರ ಚರ್ಚೆ ನಡಸಿ ಮುಂದಿನ ಕಾರ್ಯಕ್ರಮವನ್ನು ಕುರಿತು ಯೋಚಿಸಿದರು. ಸತ್ಯಾಗ್ರಹ ಮಾಡಿ ಸೆರೆಮನೆಗೆ ಹೋಗಬೇಕೆಂಬ ಸೂಚನೆ ಯನ್ನಾಗಲಿ, ಶಸ್ತ್ರಾಸ್ತ್ರಗಳನ್ನು ಧರಿಸದೆ ಹಾಗೇ ಕೆಲಸ ಮಾಡಬೇಕೆಂಬ ಸಲಹೆ ಯನ್ನಾಗಲಿ ಅವರಲ್ಲೊಬ್ಬರೂ ಒಪ್ಪಿಕೊಳ್ಳಲು ಸಿದ್ಧರಾಗಲಿಲ್ಲ. ಅಂತೆಯೆ ಮುನ್ನಾದಿನದ ಸಭೆಯಲ್ಲಿ ನಡೆದ ಮಾತುಗಳನ್ನು ಗಮನಕ್ಕೆ ತಂದುಕೊಳ್ಳದೆ, ಅದುವರೆಗೆ ಕಾರ್ಯ ನಡಸಿದ ರೀತಿಯಲ್ಲೇ ಕೊನೆಯವರೆಗೂ ಚಳವಳಿ ನಡಸ

ಬೇಕೆಂದು ನಿರ್ಧರಿಸಿದರು. ಗಾಂಧೀಜಿಯವರ ಅಧಿಕೃತ ಪ್ರಕಟನೆ ಹೊರಡದ ವಿನಾ ಯಾರೂ ಹೋರಾಟ ನಿಲ್ಲಿಸಕೂಡದೆಂದು ತೀರ್ಮಾನವಾಯಿತು.

## ೨೯

ತಾಲೂಕಿನ ಸ್ಥಳದಿಂದ ನಾಲ್ಕು ಮೈಲು ಅಂತರದಲ್ಲಿದ್ದ ಒಂದು ಹಳ್ಳಿಯಲ್ಲಿ ಶೇಖರನ ಗುಂಪು ಬಿಡಾರ ಹೂಡಿದ್ದಿತು.

ಕೊಲ್ಲಾಪುರದಿಂದ ಮರಳಿದ ತರುವಾಯ ಶೇಖರ ಮೊದಲಿನಕ್ಕಿಂತಲೂ ಹೆಚ್ಚು ಉತ್ಸಾಹದಿಂದ ಗುಂಪಿನ ಸಂಘಟನೆಗೆ ತೊಡಗಿದ್ದ. ಕಂದಾಯ ವಸೂಲೀ ಕೇಂದ್ರವನ್ನು ಲೂಟಿ ಮಾಡುವಾಗ ಅವನ ಜತೆಗಿದ್ದ ಬಸವಣ್ಣೆಪ್ಪ ಮತ್ತು ಅವನ ಗುಂಪಿನ ಜನರೂ ತಮ್ಮ ಪ್ರದೇಶವನ್ನು ಬಿಟ್ಟು ಶೇಖರನ ವಿಭಾಗಕ್ಕೇ ಬಂದಿದ್ದ ರಾದುದರಿಂದ ಗುಂಪಿಗೆ ಬಲ ಬಂದಿದ್ದಿತು. ಒಂದು ತಿಂಗಳಿನೊಳಗಾಗಿ ನೂರು ಜನರಿಗಿಂತಲೂ ಹೆಚ್ಚು ಯುವಕರನ್ನೊಳಗೊಂಡ ಪ್ರಚಂಡ ಪಡೆ ಸಿದ್ಧವಾಗಿದ್ದಿತು. ಈಚೆಗೆ ಬಾಬಾಸಾಹೇಬ ದೇಸಾಯಿಯವರೂ ಶೇಖರನನ್ನು ಅನೇಕ ಸಲ ಭೆಟ್ಟಿ ಯಾಗಿ ಗುಂಪಿಗೆ ನಾನಾರೀತಿಯಲ್ಲಿ ನೆರವು ನೀಡಿದ್ದರು. ಅವರೆಲ್ಲರ ಊಟ ತಿಂಡಿಗಳಿಗೆ ಕೊರತೆಯಾಗದಂತೆ ಹಣದ ಸಹಾಯವನ್ನೂ ನೀಡುತ್ತಿದ್ದರು. ದೇಸಾಯಿಯವರಲ್ಲಾದ ಈ ಆಕಸ್ಮಿಕ ಬದಲಾವಣೆ ಅನೇಕರಿಗೆ ಆಶ್ಚರ್ಯ ವನ್ನುಂಟುಮಾಡಿದ್ದಿತಾದರೂ ಅದಕ್ಕೆ ಕಾರಣವೇನೆಂಬುದನ್ನು ಅರಿತಿದ್ದ ಶೇಖರ ನಿಗೂ ಹೇಮಾ, ಸಂಗಣ್ಣ ಮೊದಲಾದ ಪರಿಚಿತರಿಗೂ ಅವರ ನಡತೆ ಚೆನ್ನಾಗಿ ಅರ್ಥವಾಗಿದ್ದಿತು. ವಿಶ್ವನಾಥನೇ ತನ್ನ ತಂದೆಯ ರೂಪದಲ್ಲಿ ತಮಗೆ ನೆರವಾಗು ತ್ತಿದ್ದ ಹಾಗೆ ಭಾಸವಾಗುತ್ತಿತ್ತು ಅವರಿಗೆ.

ಒಂದು ತಿಂಗಳಿನ ಅವಧಿಯಲ್ಲಿ ಆ ತಾಲೂಕಿನಲ್ಲೂ, ಅದರ ಸುತ್ತು ಮುತ್ತಲಿನ ಪ್ರದೇಶಗಳಲ್ಲೂ ಸರಕಾರದ ಆಡಳಿತೆ ಪೂರ್ಣವಾಗಿ ಕುಸಿದುಹೋಗಿ ದ್ದಿತು. ಪೋಲೀಸರ ಸಹಾಯವಿಲ್ಲದೆ ಯಾವ ಯಂತ್ರವೂ ನಡೆಯದಾಗಿದ್ದಿತು. ಹಳ್ಳಿಗಳಂತೂ ಸರಕಾರದ ವಿರುದ್ಧ ಅಸಹಕಾರವನ್ನೇ ಸಾರಿದಂತಾಗಿದ್ದಿತು. ಗೌಡ ಕುಲಕರ್ಣಿಯರಲ್ಲಿ ಯಾರೂ ರಾಜೀನಾಮೆ ಕೊಟ್ಟಿರಲಿಲ್ಲವಾದರೂ ಸರಕಾರದ ಕೆಲಸ ಕಾರ್ಯಗಳನ್ನೂ ನಡಸಿಕೊಂಡು ಹೋಗಲು ಸಮರ್ಥರಾಗಿರಲಿಲ್ಲ. ಅವರ ಕಾಗದಪತ್ರಗಳನ್ನೆಲ್ಲ ಸುಟ್ಟುಬಿಡಲಾಗಿದ್ದಿತು. ಆಯುಧಗಳನ್ನು ಕಸಿದುಕೊಳ್ಳ

ಲಾಗಿದ್ದಿತು. ಚಾವಡಿಗಳನ್ನು ಸುಡಲಾಗಿದ್ದಿತು. ಸರಕಾರಕ್ಕೆ ನೆರವಾಗಿ ಚಳವಳಿಗೆ ದ್ರೋಹ ಬಗೆಯುವವರ ಹೊಲಗಳನ್ನೆಲ್ಲ ನಾಶಗೊಳಿಸಲಾಗಿದ್ದಿತು. ಅಂದು ಶೇಖರನ ಗುಂಪಿನವರನ್ನು ಊಟಕ್ಕೆ ಆಮಂತ್ರಿಸಿ ಮೋಸ ಮಾಡಿ ಇಪ್ಪತ್ತೊಂದು ಜನರನ್ನು ಪೋಲೀಸರಿಗೆ ಹಿಡಿದುಕೊಟ್ಟ ದ್ರೋಹಿ ಸೂರನಗೌಡನ ತೋಟವನ್ನೆಲ್ಲ ಸುಟ್ಟು ಹಾಳುಗೆಡವಲಾಗಿದ್ದಿತು. ಆ ಸಮಾಚಾರ ಊರಿಂದ ಊರಿಗೆ ತಿಳಿದು ಗೌಡ ಯಾರಿಗೂ ಮುಖ ತೋರಿಸದಂತಾಗಿದ್ದಿತು. ಅವನ ಊರಿನಲ್ಲೇ ಜನ ಸಾರ್ವತ್ರಿಕ ಬಹಿಷ್ಕಾರ ಹಾಕಿಬಿಟ್ಟಿದ್ದಿತು. ಅವನ ಮನೆಗೆ ಯಾರೂ ಕಾಲು ಹಾಕುತ್ತಿರಲಿಲ್ಲ; ಯಾರೂ ಅವನೊಂದಿಗೆ ಮಾತನಾಡುತ್ತಿರಲಿಲ್ಲ.

ದ್ರೋಹಿಗಳಿಗೆ ಈ ಬಗೆಯ ಬಹಿಷ್ಕಾರ ವಿಧಿಸಿದ್ದುದರಿಂದ ಪಿತೂರಿ ನಡೆಯುವುದೂ ನಿಂತುಹೋಗಿದ್ದಿತು. ಚಳವಳಿಗಾರರ ಹೆಸರು ಕೇಳಿದರೆ ಗೌಡ ಕುಲಕರ್ಣಿಯರು ಹೆದರಿ ತೆಪ್ಪಗಿರುವಂತಾಗಿದ್ದಿತು. ಪೋಲೀಸರ ಹೆದರಿಕೆಯಿಂದಾಗಿ ತಮ್ಮ ಕರ್ತವ್ಯವನ್ನು ಹೇಗೋ ನೆರವೇರಿಸಿಕೊಂಡು ಹೋಗುವ ಅಭಿನಯ ಮಾಡುತ್ತಿದ್ದರಷ್ಟೆ; ಯಾರಿಗೂ ಅದರಲ್ಲಿ ಆಸಕ್ತಿ ಉಳಿದಿರಲಿಲ್ಲ.

ಪೋಲೀಸರಿಗೂ ಅಷ್ಟೆ; ಐದಾರು ತಿಂಗಳುಗಳಿಂದ ಹಳ್ಳಿಪಳ್ಳಿ ಗುಡ್ಡ ಬೆಟ್ಟ ತಿರುಗಿ, ನಿದ್ರೆಯಿಲ್ಲದೆ ವಿರಾಮವಿಲ್ಲದೆ ದುಡಿದು ಅವರೂ ಬೇಸರುಗೊಂಡಿದ್ದುದು ಸ್ಪಷ್ಟವಾಗಿ ಗೊತ್ತಾಗುವಂತಿದ್ದಿತು. ಜನದ ಅಸಹಕಾರ, ತಿರಸ್ಕಾರ, ವಿರೋಧ ಬೇರೆ. ಗುಡ್ಡ ಬೆಟ್ಟ ತಿರುಗಿ ಹಸಿದು, ನೀರಡಿಸಿ ಯಾವುದಾದರೂ ಹಳ್ಳಿಗೆ ಹೋದರೆ ಅನ್ನ ಸಿಕ್ಕುವ ಮಾತಿರಲಿ, ನೀರು ಸಹ ಸಿಕ್ಕುತ್ತಿರಲಿಲ್ಲ. ಗೌಡ ಕುಲಕರ್ಣಿಯರ ಮುಖದ ಮೇಲೂ ಬೇಸರವನ್ನೇ ಕಾಣಬೇಕಾಗುತ್ತಿದ್ದಿತು. ಎಂಟು ಹತ್ತು ಜನ ಪೋಲೀಸರು ಸೇರಿಕೊಂಡು ಎಲ್ಲಿಯೂ ತಿರುಗಲು ಸಾಧ್ಯವಿರಲಿಲ್ಲ. ಚಳವಳಿಯ ಜನ ಬಂದು ಬಂದೂಕು ಕಸಿದುಕೊಂಡು ಹೋಗುವರೆಂಬ ಭೀತಿ ಯಾವಾಗಲೂ ಇತ್ತು. ಅದರಿಂದಾಗಿ ನೂರಾರು ಜನ ಒಟ್ಟಿಗೇ ಕೂಡಿ ಅಲೆಯಬೇಕಾಗಿತ್ತು. ಅವರಲ್ಲಿ ಅನೇಕ ಜನರು ದೂರದ ಊರುಗಳಿಂದ, ದೂರದ ಜಿಲ್ಲೆಗಳಿಂದ ಬಂದವರು. ಹೆಂಡರು ಮಕ್ಕಳ ಮುಖ ನೋಡದೆ ಯಾವಾಗಲೂ ಮನೆಯ ಕಡೆಗೇ ಲಕ್ಷ್ಯವನ್ನುಳ್ಳವರು. ತಿಂಗಳಿಗೆ ದೊರೆಯುವ ಇಪ್ಪತ್ತು ರೂಪಾಯಿಗಳಿಗಾಗಿ ಈ ಬಗೆಯ ಉಪವಾಸ ವನವಾಸಗಳನ್ನವರು ಸಹಿಸಬೇಕಾಗಿದ್ದಿತು. ಚಳವಳಿಗಾರರನ್ನು ಬೇಟೆಯಾಡುತ್ತ ಅಲೆಯುವ ಈ ಕೆಲಸದಲ್ಲಿ

ಕೊಂಚವೂ ಆಸಕ್ತಿಯಿರದಿದ್ದರೂ ಪರಕೀಯ ಸರಕಾರದ ಗುಲಾಮರಾದುದರಿಂದ ಯಂತ್ರವತ್ತಾಗಿ ತಮ್ಮ ಕರ್ತವ್ಯವನ್ನು ನೆರವೇರಿಸಬೇಕಾಗಿದ್ದಿತು.

ಬಡ ಪೋಲೀಸರಿಗೆ ಬೇಸರು ಬಂದಿದ್ದುದು ನಿಜವಾದರೂ ಮೇಲಧಿಕಾರಿಗಳಲ್ಲಿ ಅ ನೇ ಕ ರಿ ಗೆ ಕೊಂಚವೂ ನಿರಾಶೆಯಾಗಿರಲಿಲ್ಲ. ಕೀರ್ತಿನಾಥನಂಥ ಮಹತ್ವಾಕಾಂಕ್ಷಿ ಅಧಿಕಾರಿಗಳು ಮುಂದೆ ದೊರೆಯಬಹುದಾದ ದೊಡ್ಡ ಸ್ಥಾನಗಳ ಮೇಲೆ ದೃಷ್ಟಿಯನ್ನಿರಿಸಿ ಹಟದಿಂದ ಕೆಲಸ ಮಾಡುತ್ತಿದ್ದರು. ಎಷ್ಟು ಜನ ಪೋಲೀಸರನ್ನುಪಯೋಗಿಸಿದರೂ ಸರಿಯೆ, ಎಂಥ ದಬ್ಬಾಳಿಕೆ ನಡಸಬೇಕಾದರೂ ಸರಿಯೆ, ಎಷ್ಟು ಪ್ರಾಣಗಳನ್ನು ಬಲಿ ತೆಗೆದುಕೊಂಡರೂ ಸರಿಯೆ ; ಸಾಧ್ಯವಿದ್ದಷ್ಟು ಬೇಗನೆ ಈ ವಿಭಾಗದಲ್ಲಿನ ಚಳವಳಿಗಾರರನ್ನೆಲ್ಲ ಮಟ್ಟ ಹಾಕಿ ಆಂಗ್ಲ ಅಧಿಕಾರಿಗಳಿಂದ ಶಿಫಾರಸು ಪಡೆದು ಮೇಲಕ್ಕೇರಲೇಬೇಕೆಂದು ಅವರು ನಿರ್ಧರಿಸಿದ ಹಾಗಿದ್ದಿತು.

ಅಧಿಕಾರಿಗಳ ನಿರ್ಧಾರದಂತೆಯೆ ಚಳವಳಿಗಾರರ ನಿರ್ಧಾರವೂ ಅಷ್ಟೇ ಹಟದಿಂದ ಕೂಡಿದುದಾಗಿತ್ತು. ಸಾವಿರಾರು ಜನ ಪೋಲೀಸರು ಬಂದರೂ ಸರಿಯೆ, ಈ ವಿಭಾಗವನ್ನೆಲ್ಲ ಅವರು ಸುತ್ತುಗಟ್ಟಿದರೂ ಸರಿಯೆ, ಹಲವಾರು ಜನರ ಪ್ರಾಣ ತೆಗೆದುಕೊಂಡರೂ ಸರಿಯೆ–ಎಂಥ ಪ್ರಸಂಗ ಬಂದರೂ ಹೋರಾಟವನ್ನು ನಿಲ್ಲಿಸದೆ ಮುಂದುವರಿಸುವುದೆಂದು ಅವರು ದೃಢಪ್ರತಿಜ್ಞೆ ಮಾಡಿದ್ದರು. ದಿನ ಕಳೆಯುತ್ತ ಬಂದೆ ಹಾಗೆ, ಹೋರಾಟದ ಕಾವು ಹೆಚ್ಚಿದ ಹಾಗೆ ಗುಂಪಿನ ಯುವಕರ ಉತ್ಸಾಹವೂ ಹೆಚ್ಚುತ್ತಿತ್ತು.

ಅಂಥ ಉತ್ಸಾಹದಿಂದ ತುಂಬಿದವರಾಗಿ ಅವರೆಲ್ಲರೂ ಅಂದು ರಾತ್ರಿ ಆ ಹಳ್ಳಿಯಲ್ಲಿ ಬಿಡಾರ ಹೂಡಿದ್ದರು. ಮಾರನೆಯ ದಿನ ಬೆಳಗಿನ ಜಾವದಲ್ಲಿ ತಾಲೂಕು ಕಚೇರಿಯ ಮೇಲೆ ದಾಳಿ ನಡೆಸಬೇಕೆಂದು ಮೊದಲೇ ಗೊತ್ತಾಗಿದ್ದಿತು. ಅದು ಅತ್ಯಂತ ಮಹತ್ವದ ಹಾಗೂ ಗಂಡಾಂತರದ ಕೆಲಸವಾದುದರಿಂದ ಅದಕ್ಕಾಗಿ ಅಗತ್ಯವಿರುವ ಸಿದ್ಧತೆಗಳನ್ನೆಲ್ಲ ಮೊದಲೇ ಬಹು ಜಾಣತನದಿಂದ ಯೋಜಿಸಲಾಗಿದ್ದಿತು. ಆ ಸಮಯದಲ್ಲಿ ತಾಲೂಕಿನ ಸ್ಥಳದಲ್ಲಿ ಹೆಚ್ಚು ಜನ ಪೋಲೀಸರಿರಲಿಲ್ಲವೆಂಬ ವಿಷಯವೂ ಮೊದಲೇ ತಿಳಿದಿದ್ದಿತು. ಅಂತೆಯೆ, ದಾಳಿಯ ವಿಚಾರವನ್ನು ಗುಪ್ತವಾಗಿರಿಸಿ, ಅವರು ಅಲ್ಲಿ ಬಿಡಾರ ಹೂಡಿದ್ದರು.

ಗೊತ್ತಾದ ಮೇರೆಗೆ ಬೆಳಗಿನ ಜಾವದಲ್ಲಿ ಗುಂಪಿನವರೆಲ್ಲ ಎದ್ದು ತಾಲೂಕಿನ ಸ್ಥಳದ ಕಡೆಗೆ ಸಾಗಿದರು. ಚಿಕ್ಕೆಗಳ ಬೆಳಕಿನಲ್ಲಿ ಕಾಲುದಾರಿ ಹಿಡಿದು ಇಬ್ಬಿಬ್ಬರಂತೆ ಸಾಲುಸಾಲಾಗಿ, ಅರ್ಧ ಮೈಲಿನವರೆಗೂ ಪುಟ್ಟದೊಂದು ದಂಡಿನ ಹಾಗೆ ನಡೆದಿತ್ತು ಆ ಗುಂಪು. ಎಲ್ಲರ ಕೈಯಲ್ಲೂ ಬಗೆಬಗೆಯ ಆಯುಧಗಳಿದ್ದುವು. ಎಲ್ಲರಿಗೂ ಮುಂದೆ ಪೈಲ್ವಾನ್ ಸಂಗಣ್ಣ ಹೆಗಲ ಮೇಲೆ ಒಂದು ರೈಫಲ್ ತೂಗ ಹಾಕಿಕೊಂಡು ಸೇನಾಪತಿಯಂತೆ ಠೀವಿಯಿಂದ ಅಡಿಯಿಡುತ್ತ ನಡೆದಿದ್ದ. ಹೇಮಾ, ಶೇಖರ, ಬಸವಣ್ಣೆಪ್ಪ ಮೊದಲಾದವರು ಅವನ ಹಿಂದಿನಿಂದ ನಡೆದುಬರುತ್ತಿದ್ದರು.

ಅರ್ಧ ತಾಸಿನೊಳಗಾಗಿ ಎರಡು ಮೈಲು ಹಾದಿ ತುಳಿದು ಅವರು ತಾಲೂಕಿನ ಸ್ಥಳವನ್ನು ಸಮೀಪಿಸಿ ಮುಖ್ಯ ರಸ್ತೆಯ ಹತ್ತಿರ ಬಂದುಬಿಟ್ಟಿದ್ದರು. ಇನ್ನುಳಿದ ಎರಡು ಮೈಲುಗಳನ್ನೂ ಆ ರಸ್ತೆಯ ಮೇಲೇ ಹಾಯ್ದು ಕಳೆಯಬೇಕಾಗಿದ್ದಿತು. ಬೇರಾವ ದಾರಿಯೂ ಇರಲಿಲ್ಲ. ಗಂಡಾಂತರದ ಪ್ರದೇಶ ಬರುತ್ತಲೂ ಎಲ್ಲರೂ ಸದ್ದುಮಾಡದೆ ಮೌನವಾಗಿ ನಡೆಯತೊಡಗಿದರು.

ಇನ್ನೇನು ಊರು ಹತ್ತಿರ ಬಂದುಬಿಟ್ಟದ್ದಿತು—ಅಷ್ಟರಲ್ಲಿಯೇ ಎದುರಿನಿಂದ ಮೋಟಾರು ಲಾರಿಗಳು ಬರುವ ಸದ್ದು ಕೇಳಿಸತೊಡಗಿತು. ಒಂದೆರಡು ನಿಮಿಷಗಳಲ್ಲಿ ಅವುಗಳ ಪ್ರಖರ ಬೆಳಕೂ ಕಾಣಿಸಿತು. ಗುಂಪಿನವರೆಲ್ಲ ರಸ್ತೆಯನ್ನು ಬಿಟ್ಟು ಪಕ್ಕಕ್ಕೆ ಸರಿದು ಗಿಡಗಳ ಕೆಳಗೆ ನಿಂತುಕೊಂಡರು. ಶೇಖರ, ಬಸವಣ್ಣೆಪ್ಪ, ಹೇಮಾ ಮೂವರೂ ಒಂದೆಡೆ ಸೇರಿ ಲಾರಿಗಳನ್ನು ಎಲ್ಲಿಂದ, ಏತಕ್ಕಾಗಿ ಬರುತ್ತಿರಬಹುದೆಂಬುದನ್ನು ಕುರಿತು ಚರ್ಚಿಸತೊಡಗಿದರು.

"ಪೋಲೀಸರು ಬರುತ್ತಿರಬಹುದು!" ಎಂದಳು ಹೇಮಾ.

"ಅಲ್ಲಿಂದ ಹ್ಯಾಂಗ ಬರ್ತಾರ ಪೋಲೀಸರು ? ರಾತ್ರಿ ಅಂತೂ ಅಲ್ಲಿರಲಿಲ್ಲ ಅವರು!" ಎಂದ ಬಸವಣ್ಣೆಪ್ಪ.

"ರಾತ್ರಿ ಇರದಿದ್ದರೇನಾಯ್ತು ? ಹ್ಯಾಗೋ ಸುದ್ದಿ ತಿಳಿದಿರಬಹುದು ಅವರಿಗೆ. ಬಂದಿರಬಹುದು."

"ಇದ್ದರೂ ಇರಬಹುದು. ನನಗೂ ಸಂಶಯ ಇದ್ದs ಇತ್ತು. ನೂರಾರು ಜನ ಆ ಹಳ್ಳಿಯೊಳಗ ಕೂಡಿದಾಗಲೇ ನನಗ ಎದೆಗುದಿ ಇತ್ತು. ಈಗಂತೂ ಎಲ್ಲಾ ಕಡೆಗೂ ಸಿ. ಐ. ಡಿ.ಗಳಿದ್ದಾರ," ಎಂದ ಶೇಖರ.

“ ಹಾಂಗಾದರ ಗೊತ್ತಾಗಿರಬಹುದಂತ ನಿನ್ನ ಅಭಿಪ್ರಾಯವೇನು ?” ಎಂದ ಬಸವಣ್ಣೆಪ್ಪ.

“ ಹ್ಯಾಂಗ ಹೇಳಾಕ ಬರ್ತೈತಿ ? ಅಂತೂ ನಮ್ಮ ತಯಾರಿಯೊಳಗ ನಾವಿರೂದೂ ನೆಟ್ಟಗ. ತಾಲೂಕ ಕಚೇರಿಗೂ ಕಾವಲು ಇಟ್ಟಾರೇನೊ.”

“ ಈಗ ನಮ್ಮನ್ನ ಹಿಡೀಲಿಕ್ಕೆ ಬರತಾ ಇದ್ದರೆ ?” ಎಂದ ಸಂಗಣ್ಣ.

“ ಯಾರೂ ಅವರ ಕೈಗೆ ಸಿಗೂಹಾಂಗಿಲ್ಲ. ಇಂದು ಕೆಲಸ ಆಗುವ ಯೋಗ ಇಲ್ಲದಿದ್ದರ ಇಲ್ಲ, ಇನ್ನ್ಯಾವಾಗಾದರೂ ಆದೀತು.”

“ ಅಂದರ ? ಈಗ ಅವರನ್ನ ತಪ್ಪಿಸಿ ಓಡಿಹೋಗಬೇಕು ಅಂತೀ ಏನು ಶೇಖರಣ್ಣ ?” ಎಂದ ಸಂಗಣ್ಣ.

“ ಓಡಿಹೋಗಬೇಕಂತ ಯಾರು ಹೇಳಿದರು ಸಂಗಣ್ಣ ? ಇದೂ ಒಂದು ಯುದ್ಧ ಅನ್ನೂದನ್ನ ಮರೀಬ್ಯಾಡ. ಯುದ್ಧ ಅಂದ ಮ್ಯಾಲ ಒಂದೊಂದು ಸಲ ಮುನ್ನುಗ್ಗಬೇಕಾಗುತ್ತೈತಿ, ಒಂದೊಂದು ಸಲ ಹಿಂದಕ್ಕೂ ಸರಿಯಬೇಕಾಗುತ್ತೈತಿ. ಇದೇ ಪ್ರಚಂಡ ಬ್ರಿಟಿಷ್ ಸರಕಾರದ ದಂಡು ಸಿಂಗಾಪೂರ ಬರ್ಮಾದಿಂದ ಹಿಂದೆ ಸರಿದು ಬಂದೈತಿ. ಇನ್ನು ನಮ್ಮದೇನು ! ನಮಗಿಂತ ವೈರಿ ಬಲವಾಗಿದ್ದಾಗ ಹುಂಬತನ ಮಾಡಿ ಮುಂದೆ ಬಿದ್ದರೆ ಕೆಲಸ ಎಲ್ಲಾ ಹಾಳಾಗುತ್ತೈತಿ. ಅದರ ಬದಲು, ಈಗ ಸರಿದುಕೊಂಡು ಸ್ವಲ್ಪ ದಿನಾ ಸುಮ್ಮನಿದ್ದು, ಮತ್ತೆ ಪ್ರಸಂಗ ನೋಡಿ ಮೇಲೆ ಬೀಳಬೇಕು. ಒಟ್ಟಾರೆ ನಮ್ಮ ಕೆಲಸ ಸಾಧಿಸಿರಬೇಕು.”

“ ಅಂತೂ ಇಷ್ಟು ಹುರುಪಿನಿಂದ ಇಲ್ಲಿಯತನಕ ಬಂದು ಹೀಂಗ ಹಿಂದೆ ಹೋಗೂದು ನನಗಂತೂ ಮನಸ್ಸಿಗೆ ಬರೂದಿಲ್ಲ,” ಎಂದ ಸಂಗಣ್ಣ. ಅವನ ತೋಳುಗಳೆರಡೂ ಸ್ಫುರಿಸುತ್ತಿದ್ದುವು. ರಕ್ತ ಬಿಸಿಯೇರಿದ್ದಿತು. ಅಂದು ಪೋಲೀಸರ ಗುಂಡಿಗೆ ಆಹುತಿಯಾಗಿ ಮಡಿದ ತನ್ನ ತಾಯಿಯ ಮೂರ್ತಿ ಅವನ ಬಗೆಗಣ್ಣಿನೆದುರಿಗೆ ಬಂದು ನಿಂತು, ಅವನನ್ನು ಕಾಳಗಕ್ಕಾಗಿ ಹುರಿದುಂಬಿಸುತ್ತಿದ್ದ ಹಾಗಿದ್ದಿತು. ‘ ಮುಂದಿಟ್ಟ ಹೆಜ್ಜೆಯನ್ನು ಹಿಂದಿಡುವುದೇ ! ಛೆ ! ನಿನ್ನಂಥ ಪೈಲ್ವಾನನಿಗೆ, ನೂರಾರು ಜಟ್ಟಿಗಳನ್ನು ಸೋಲಿಸಿ ಹೆಸರುವಾಸಿಯಾದ ವೀರ ತರುಣನಿಗೆ ಇದು ಶೋಭಿಸುವುದೇ ! ಹೇಗೂ ಪೋಲೀಸರು ಬರುತ್ತಿದ್ದ ಹಾಗಿದೆ. ನಿನ್ನ ಶಕ್ತಿಯನ್ನು, ನಿನ್ನ ಕಲಿತನವನ್ನು ಪರೀಕ್ಷಿಸಲೆಂದೇ ಬರುತ್ತಿದ್ದಾರೆ ಅವರು. ಇದೂ ಒಂದು ಕುಸ್ತಿಯ ಕಣ, ಸಂಗಣ್ಣ ! ಎದುರಾಳು ಸಡ್ಡು ಹೊಡೆದು

ಕಣ್ಣಿಕ್ಕಿಳಿದಿರುವಾಗ ಹಿಂದೆ ಜಾರಿಳಿಹೋಗುತ್ತೀಯಾ ನೀನು!' ಎಂದು ಯಾರೋ ಅವನ ಕಿವಿಗಳಲ್ಲಿ ಕೂಗಿ ಹೇಳಿದಂತಾಯಿತು.

"ನಾನಂತೂ ಇಲ್ಲಿಂದ ಕದಲೂದಿಲ್ಲ!" ಎಂದ ಸಂಗಣ್ಣ. ರೈಫಲನ್ನು ಬಲಗೈಯಲ್ಲಿ ಹಿಡಿದುಕೊಂಡು.

ಲಾರಿಗಳ ಬೆಳಕು ಹತ್ತಿರ ಹತ್ತಿರ ಬರುತ್ತಿತ್ತು. ಒಂದೆರಡು ಕ್ಷಣಗಳೊಳಗಾಗಿ ಅವರೆಲ್ಲರೂ ಅಲ್ಲಿಂದ ಕಾಲ್ತೆಗೆಯಬೇಕಾಗಿದ್ದಿತು.. ಗುಂಪಿನವರಿಗೆಲ್ಲ ಹೊರಡುವ ಸೂಚನೆ ಕೊಟ್ಟು ಶೇಖರ ಸಂಗಣ್ಣನ ಮನಸ್ಸನ್ನು ಒಲಿಸತೊಡಗಿದ. ಹೇಮಾ, ಬಸವಣ್ಣೆಪ್ಪ ಯಾರು ಎಷ್ಟು ಹೇಳಿದರೂ ಸಂಗಣ್ಣ ಒಪ್ಪಲಿಲ್ಲ. "ನೀವು ಹೋಗಿಬಿಡ್ರಿ. ನಾನೊಬ್ಬನೇ ಇರ್‍ತೀನಿ ಇಲ್ಲಿ. ಒಂದು ಕೈ ನೋಡಿಬಿಡ್ತೀನಿ ಅವರನ್ನ. ನಮ್ಮ ಮುದುಕಿಯನ್ನ ಗುಂಡು ಹಾಕಿ ಕೊಂದ ಆ ಪೋಲೀಸರಿಗೆ ಬುದ್ಧೀ ಕಲಿಸುತೀನಿ!" ಎಂದು ಆತ ಸ್ಪಷ್ಟವಾಗಿ ನುಡಿದ.

ಸಂಗಣ್ಣ ಭಾವನಾವಶನಾಗಿ ಆ ರೀತಿ ಆಚರಿಸುತ್ತಿರುವನೆಂಬುದು ಗೊತ್ತಾಗುತ್ತಲೂ ಸಂಗಡಿಗರಿಗೆಲ್ಲ ಚಿಂತೆಗಿಟ್ಟುಕೊಂಡಿತು. ಅಲ್ಲಿ ಹೆಚ್ಚು ಹೊತ್ತು ನಿಲ್ಲುವಂತಿರಲಿಲ್ಲ. ಉದ್ರೇಕಿತನಾದ ಸಂಗಣ್ಣ ಪೋಲೀಸರ ಮೇಲೆ ಗುಂಡು ಹಾರಿಸದಿರಲಾರನೆಂಬುದೂ ಸ್ಪಷ್ಟವಾಗಿದ್ದಿತು. ಗುಂಡು ಹಾರಿಸುವುದೆಂದರೆ ಮೃತ್ಯುವನ್ನು ಬರಮಾಡಿಕೊಂಡ ಹಾಗೇ ಆಗುತ್ತಿತ್ತು.

ಮುಂದಿನ ಲಾರಿಯ ಪ್ರಖರವಾದ ಬೆಳಕು ಅವರು ಅವಿತುಕೊಂಡಿದ್ದ ಸ್ಥಳವನ್ನೆಲ್ಲ ಬೆಳಗಿಸಿತು. "ನಡೀ ಸಂಗಣ್ಣಾ, ಹೋಗೋಣ ನಡೀ, ಹುಡುಗರ ಹಾಂಗ ಹಟಾ ಮಾಡಬ್ಯಾಡಪ್ಪಾ ಓಡು," ಎಂಬುದಾಗಿ ಶೇಖರ ಹೇಳುತ್ತಿದ್ದ ಹಾಗೇ ಸಂಗಣ್ಣ ಅವನ ಕೈ ಕೊಡಹಿಕೊಂಡು ರಭಸದಿಂದ ರಸ್ತೆಗೆ ನುಗ್ಗಿದ. 'ನಿಲ್ಲು, ನಿಲ್ಲು' ಎಂದು ಎಲ್ಲರೂ ಕೂಗುತ್ತಿದ್ದ ಹಾಗೆಯೆ ರೈಫಲ್ ಎತ್ತಿ ಲಾರಿಯ ಕಡೆಗೆ ಗುಂಡು ಹಾರಿಸತೊಡಗಿದ.

ಎಂಟು ಹತ್ತು ಮಾರು ದೂರದಲ್ಲಿದ್ದ ಲಾರಿ ಒಮ್ಮೆಲೆ ನಿಂತುಕೊಂಡಿತು. ಲಾರಿಯ ಬ್ರೇಕುಗಳ ಘೋರ ಗರ್ಜನೆಯ ಜತೆಯಲ್ಲೇ 'ಅಯ್ಯೋ' ಎಂಬ ಕರ್ಕಶ ಆರ್ತನಾದವೂ ಕೇಳಿಸಿತು. ಸಂಗಣ್ಣನ ಗುಂಡು ಯಾರನ್ನೋ ಆಹುತಿಯಾಗಿ ತೆಗೆದುಕೊಂಡದ್ದು ಸ್ಪಷ್ಟವಾಗಿದ್ದಿತು. "ಕೀರ್ತಿನಾಥನ ದನಿಯ ಹಾಗೆ ಕೇಳಿಸುತದಲ್ಲ ಶೇಖರಣ್ಣ ?" ಎಂದಳು ಹೇಮಾ.

"ಏನೋ. ಇದ್ದರೂ ಇರಬಹುದು. ಫ್ರಂಟ್ ಸೀಟಿನಾಗ ಕೂತಿದ್ದನೋ ಏನೋ ಅವ!" ಎಂದು ಶೇಖರ ಹೇಳುತ್ತಿದ್ದ ಹಾಗೇ ಲಾರಿಯ ಕಡೆಯಿಂದ ಗುಂಡುಗಳ ಮಳೆ ಸುರಿಯಲಾರಂಭವಾಯಿತು.

ರೈಫಲನ್ನೆತ್ತಿಕೊಂಡು ಒಂದೆ ಸಮನೆ ಗುಂಡು ಹಾರಿಸುತ್ತ ನಿಂತಿದ್ದ ಸಂಗಣ್ಣ ಹಠಾತ್ತಾಗಿ ನೆಲಕ್ಕುರುಳಿದ. "ಇಂದಿಗೆ ನನ್ನ ಪಣಾ ಮುಗಿದಂಗಾಯ್ತು. ಒಂದು ಜೀವಕ್ಕ ಒಂದು ಜೀವಾ ತಕ್ಕೊಂಡೆ. ಹಾ! ಹಾ! ಹಾ! ನನ್ನ ಅವ್ವ! ಅವ್ವಾ...." ಎಂದು ಆತ ಕಿರಿಚಿಕೊಳ್ಳುವುದೂ ಕೇಳಿಸಿತು. ಇನ್ನು ಅವನ ಆಸೆ ಮುಗಿಯಿತೆಂದು ತಿಳಿದು ಗಿಡದ ಮರೆಗೆ ಅಡಗಿಕೊಂಡಿದ್ದವರೆಲ್ಲ ಓಡತೊಡಗಿದರು.

ಒಮ್ಮೆಲೆ, ಬೆಳಕಿನ ಅಳವಿನಲ್ಲಿ ಬಂದ ಮೂರು ಆಕೃತಿಗಳು ಕಣ್ಣಿಗೆ ಬೀಳುತ್ತಲೂ ಪೋಲೀಸರು ಲಾರಿಯಿಂದಿಳಿದು ಗುಂಡು ಹಾರಿಸುತ್ತಾ ಓಡಿಬರ ತೊಡಗಿದರು.

ಶೇಖರ, ಹೇಮಾ, ಬಸವಣ್ಣೆಪ್ಪ ಮೂವರೂ ವಾಯುವೇಗದಿಂದ ಓಡುತ್ತಿದ್ದರು. ಇಳುಕಲನ್ನು ಮುಗಿಸಿ ಮುಂದೆ ಸಾಗಿದರೆ ಪುಟ್ಟ ಗುಡ್ಡವೊಂದನ್ನು ಸೇರಬಹುದಾಗಿತ್ತು. ಅಲ್ಲಿಯವರೆಗೆ ತಪ್ಪಿಸಿಕೊಂಡು ಹೋಗುವುದು, ಅದೂ ಜೀವಸಹಿತವಾಗಿ ಪಾರಾಗುವುದು ತೀರ ಕಷ್ಟಸಾಧ್ಯವಾದ ವಿಷಯವಾಗಿದ್ದಿತು. ಸಂಗಣ್ಣನ ಉದ್ರೇಕದಿಂದಾಗಿ ತಮ್ಮ ಗುಂಪಿಗೆಲ್ಲ ಇಂಥ ಗಂಡಾಂತರದ ಪ್ರಸಂಗ ಬಂದುದಕ್ಕಾಗಿ ಶೇಖರನಿಗೆ ಬೇಸರವಾಗಿದ್ದಿತಾದರೂ ಆ ಸಂದರ್ಭದಲ್ಲಿ ಅವರಾರಿಗೂ ಆತನ ಬಗ್ಗೆ ಕೋಪವಿರಲಿಲ್ಲ. ಹೇಗಾದರೂ ಅಲ್ಲಿಂದ, ಆ ಪೋಲೀಸರಿಂದ ತಪ್ಪಿಸಿಕೊಂಡು ಹೋಗಿ ಕೆಲಸ ಮುಂದುವರಿಸುವುದೇ ಅವರೆಲ್ಲರ ಯೋಚನೆಯಾಗಿದ್ದಿತು.

ಹಿಂದಿನಿಂದ ಗುಂಡು ಹಾರಿಬರುತ್ತಿದ್ದುವು. "ಏ, ನಿಲ್ರಿ. ಇಲ್ಲದಿದ್ದರ ಸಾಯ್ತೀರಿ ಎಲ್ಲರೂ" ಎಂದು ಫೌಜದಾರನೊಬ್ಬ ಕೂಗುತ್ತಿದ್ದುದೂ ಕೇಳಿಬರುತ್ತಿತ್ತು.

ಓಡುತ್ತಿದ್ದ ಹಾಗೇ ಹೇಮಾ—"ಇನ್ನೇನು ಮಾಡೂನು ಶೇಖರಣ್ಣ, ನಾವೂ ಗುಂಡಿನಿಂದ ಉತ್ತರ ಕೊಡೋಣವೇನು?" ಎಂದಳು.

"ಬೇಡ. ಎಂಥ ಪ್ರಸಂಗ ಬಂದರೂ ನಮ್ಮ ತತ್ವವನ್ನು ಬಿಡೂಹಾಂಗಿಲ್ಲ.

ಆ ಸಂಗಣ್ಣ ಅದನ್ನ ಮುರಿದುಬಿಟ್ಟ....ಹೂಂ....ಓಡು....ಇಂದಿಲ್ಲ ನಾಳೆ ನಮ್ಮ ತಕ್ಷ್ಯಕ್ಕs ಜಯ ಸಿಕ್ಕೀತು...."

"ಹೀಗೆ ಓಡಿಹೋಗೂದು ನನಗೂ ಸರಿಬರುವದಿಲ್ಲ. ಹೇಡಿತನ ಇದು–ಹೇಡಿತನಾ. ಕೈಯೊಳಗ ಪಿಸ್ತೂಲು ಇಟ್ಕೊಂಡು ಹೀಗೆ ಓಡೂದಂದರೇನು.... ನೀವು ಹೋಗ್ರಿ ಬೇಕಾದರ....ನಾ ಅವರನ್ನ ಎದುರಿಸುತೀನಿ," ಎಂದು ನುಡಿದ ಹೇಮಾ ಪಿಸ್ತೂಲನ್ನೆತ್ತಿ ಹಿಂದೆ ತಿರುಗಿದಳು. ಒಡನೆಯೇ ಎದುರಿನಿಂದ ಒಂದು ಗುಂಡು ಸುಯ್ಯೆಂದು ಬೀಸಿ ಬಂದು ಅವಳ ಎಡತೋಳಿಗೆ ತಾಕಿತು. 'ಅಯ್ಯೋ' ಎಂದು ಕೂಗಿಕೊಂಡರೂ ಆಕೆ ಪಿಸ್ತೂಲನ್ನು ಬಿಡಲಿಲ್ಲ. ಹತ್ತಿರದಲ್ಲಿದ್ದ ಗಿಡದ ಮರೆಗೆ ನಿಂತುಕೊಂಡು ಧಾವಿಸಿಬರುತ್ತಿದ್ದ ಪೋಲೀಸರ ಕಡೆಗೆ ಗುಂಡು ಹಾರಿಸಿದಳು.

ಎದುರುತ್ತರ ಬಂದುದನ್ನು ಕಂಡು ಪೋಲೀಸರು ಒಂದೆರಡು ನಿಮಿಷ ತಡೆದು ನಿಂತುಕೊಂಡರು. ಹಾಗೇ ಮುಂದುವರಿಯುವುದು ಗಂಡಾಂತರದ್ದೆಂದು ತಿಳಿದು ಅಲ್ಲಲ್ಲಿ ಅವಿತುಕೊಂಡು ಮತ್ತೆ ಗುಂಡು ಹಾರಿಸತೊಡಗಿದರು.

ಓಡುತ್ತಿದ್ದ ಬಸವಣ್ಣೆಪ್ಪನೂ ಶೇಖರನೂ ಹೇಮಳ ಬಳಿ ಬಂದು ಕ್ಷಣಕಾಲ ದಿಙ್ಮೂಢರಾದಂತೆ ನಿಂತುಕೊಂಡಿದ್ದರು. ಮುಂದೆ ಏನು ಮಾಡಬೇಕೆಂಬುದೇ ಇಬ್ಬರಿಗೂ ಹೊಳೆಯುತ್ತಿರಲಿಲ್ಲ. ಮೊದಲು ಸಂಗಣ್ಣ, ಈಗ ಹೇಮಾ.... ಅವರಿಬ್ಬರಿಗೂ ಕದನದ ಆವೇಶವೇರಿ, ಅವರನ್ನು ಆಹುತಿಯಾಗಿ ತೆಗೆದುಕೊಂಡಿದ್ದುದು ಸ್ಪಷ್ಟವಾಗಿದ್ದಿತು. ಹಿಂಸೆ ಮಾಡಕೂಡದೆಂಬ ತತ್ವ ಎಲ್ಲೋ ಮಾಯವಾಗಿತ್ತು, ಆ ಆವೇಶದ ಅಮಲಿನಲ್ಲಿ.

"ಎಲ್ಲಿ ಬಡೀತು ಗುಂಡು ಹೇಮಾ?" ಎಂದ ಶೇಖರ, ಅವಳ ಪಕ್ಕದಲ್ಲಿ ಕುಳಿತುಕೊಂಡು.

"ಎಲ್ಲಾದರೂ ಬಡೀಲೊಲ್ಲದ್ಯಾಕೆ ಶೇಖರಣ್ಣ? ನೀವೀಗ ನನ್ನನ್ನ ನನ್ನ ಪಾಡಿಗೆ ಬಿಟ್ಟು ಇಲ್ಲಿಂದ ಪಾರಾಗಿ ಹೋಗ್ರಿ. ಹ್ಯಾಗೂ ನನ್ನ ಹತ್ತಿರ ಸಾಕಷ್ಟು ಗುಂಡು ಇದಾವೆ....ಒಂದು ತಾಸಿನ ತನಕ ಇವರನ್ನ ತಡೀತೇನೆ ನಾನು. ಅಷ್ಟರೊಳಗs ನೀವಿಬ್ಬರೂ ಗುಡ್ಡಾ ಇಳಿದು ಗೋಕಾವಿ ರಸ್ತೇಕ್ಕ ಹೋಗಿ ಮುಟ್ಟುತೀರಿ. ನಡೀರಿ. ಹೊರಡ್ರಿ ಇಲ್ಲಿಂದ...." ಎಂದು ನುಡಿದು ಆಕೆ ಮತ್ತೆ ಗುಂಡು ಹಾರಿಸತೊಡಗಿದಳು

ಆಕೆಯನ್ನು ಅಂಥ ಸ್ಥಿತಿಯಲ್ಲಿ ಬಿಟ್ಟು ಅಲ್ಲಿಂದ ಹೊರಡುವುದು ಸಾಧ್ಯವೇ ಇರಲಿಲ್ಲ. "ನೀನೇ ಹೊರಟುಬಿಡು, ಹೇಮಕ್ಕ. ನೀವಿಬ್ಬರೂ ಹೋಗ್ರಿ. ನಾ ಇಲ್ಲಿ ಕೂತುಕೊಂಡು ಇವರನ್ನ ತಡದು ಹಿಡೀತೇನೆ," ಎಂದು ನುಡಿದು ಬಸವಣ್ಣೆಪ್ಪ ತನ್ನ ರಿವಾಲ್ವರನ್ನು ಎತ್ತಿದ.

"ನೀನೂ ಮರೀತೀಯೇನೋ ತತ್ವವನ್ನ?" ಎಂದ ಶೇಖರಪ್ಪ.

"ಇಂಥಾ ಹೊತ್ತಿನಾಗ ತತ್ವ ಎಲ್ಲಿ ಉಳಿಯಬೇಕು ಶೇಖರಣ್ಣಾ? ನೀವಿಬ್ಬರೂ ನಮ್ಮ ಗುಂಪಿಗೆ ಪ್ರಾಣ ಇದ್ದ ಹಾಂಗ. ಇಬ್ಬರೂ ಪಾರಾಗಿ ಹೋಗಬೇಕು. ಹೇಮಕ್ಕಗೂ ಅಂಥ ಗಾಯ ಏನೂ ಆಗಿರಲಿಕ್ಕಿಲ್ಲ. ನೆಟ್ಟ ಗಾದಾಳು. ನೀವಿಬ್ಬರೂ ಕೆಲಸ ಮುಂದೆ ಸಾಗಿಸಬೇಕು. ನಡೀರಿ," ಎಂದು ಆತ ಹೇಳುತ್ತಿದ್ದ ಹಾಗೇ ಒಮ್ಮೆಲೆ ಎರಡು ಗುಂಡು ಹಾರಿಬಂದುವು. ಗಿಡದ ಆಸರೆಯಿಂದ ಕೊಂಚ ಈಚೆಗೆ ಬಂದಿದ್ದ ಶೇಖರನ ಬಲದ ತೊಡೆಗೆ ಒಂದು ಗುಂಡು ತಾಕಿತು. ಇನ್ನೊಂದು ಗುಂಡು ಬಸವಣ್ಣೆಪ್ಪನ ಹಣೆಗೇ ಏಟು ಕೊಟ್ಟಿರಬೇಕು. ಆತ 'ಅವ್ವಾ!' ಎಂದು ಒಂದೇ ಒಂದು ಸಲ ಭೀಕರ ವಾಗಿ ಕೂಗಿ ಬಿದ್ದುಬಿಟ್ಟ. ಅವನ ಕೈಯಲ್ಲಿದ್ದ ರಿವಾಲ್ವರ್ ಕಳಚಿ ಕೆಳಗೆ ಉರುಳಿತು.

ಬಸವಣ್ಣೆಪ್ಪ ಮಡಿದುದು ಗೊತ್ತಾಗುತ್ತಲೂ ಶೇಖರನಿಗೂ ಆವೇಶ ಬಂದುಬಿಟ್ಟಿತು. ಅವನಿಗೆ ಗೊತ್ತಾಗದಂತೆ ಪಿಸ್ತೂಲು ಅವನ ಕೈಗೆ ಬಂದಿತು. ಅವರ ಶರೀರದಲ್ಲೆಲ್ಲ ಪ್ರವೇಶಿಸಿದ್ದ ಯಾವುದೋ ಒಂದು ಅದ್ಭುತ ಶಕ್ತಿ ಅವನಿಂದ ಗುಂಡು ಹಾರಿಸುವ ಕೆಲಸ ಮಾಡಿಸತೊಡಗಿತು.

ಎದುರಿನಿಂದ ಗುಂಡು ಬರುವುದು ನಿಂತುಹೋಯಿತು. ಮತ್ತೆ ಪೋಲೀಸರು ಮರೆಯಲ್ಲಿ ಅಡಗಿಕೊಳ್ಳುತ್ತಿದ್ದಿರಬೇಕು.

"ಓಡು ಹೇಮಾ. ಇಲ್ಲಿಂದ ಪಾರಾಗಿ ಹೋಗೋಣ," ಎಂದು ನುಡಿದ ಶೇಖರ ಗುಂಡು ಹಾರಿಸುತ್ತಲೇ ಓಡತೊಡಗಿದ. ಅಷ್ಟು ಹೊತ್ತಿಗೆ ಅವರು ಗುಡ್ಡದ ಹತ್ತಿರ ಬಂದುಬಿಟ್ಟಿದ್ದರು.

ಗಿಡಗಂಟಿಗಳಲ್ಲಿ ದಾರಿ ಹುಡುಕಿಕೊಂಡು ಅವರಿಬ್ಬರೂ ಓಡತೊಡಗಿದರು. ಗುಂಡಿನ ಏಟಿನಿಂದಾದ ಗಾಯಗಳಿಂದ ರಕ್ತ ಸುರಿಯುತ್ತಿದ್ದರೂ ಆ ಕಡೆಗೆ ಅವರಿಗೆ ಗಮನವಿರಲಿಲ್ಲ. ಹೇಗಾದರೂ ಅಲ್ಲಿಂದ ಪಾರಾಗಿ ಹೋಗಬೇಕಾಗಿದ್ದಿತು.

ಆಗಾಗ ಗಿಡಗಂಟಿಗಳ ಮುಳ್ಳಿಗೆ ಸಿಕ್ಕು ಮೈ ಕೊರೆಯುತ್ತಿತ್ತು. ಮೈಯ ಮೇಲಿನ ಬಟ್ಟೆ ಹರಿದುಹೋಗುತ್ತಿತ್ತು. ಯಾವುದನ್ನೂ ಲೆಕ್ಕಿಸದೆ ಅವರು ಧಾವಿಸುತ್ತಿದ್ದರು.

ಗುಡ್ಡದ ಏರು ಮುಗಿದು ಇಳುಕಲು ಪ್ರಾರಂಭವಾಗಿತ್ತು. ಹಿಂದಿನಿಂದ ಗುಂಡು ಹಾರುವುದೂ ಕೇಳಿಬರುತ್ತಿತ್ತು. ಇಳುಕಲನ್ನು ಮುಗಿಸಿ ಮುಂದು ವರಿದರೆ ಗೋಕಾವಿಯ ದಾರಿ ಸಿಗುತ್ತದೆ; ಅದನ್ನು ಹಿಡಿದು ಪಾರಾಗಿ ಹೋಗ ಬಹುದು....

ಯಾವುದೋ ಒಂದು ಕಲ್ಲಿನ ಮೇಲೆ ಕಾಲಿಟ್ಟಾಗ ಅದು ಜಾರಿದುದರಿಂದ ಶೇಖರ ಹಠಾತ್ತಾಗಿ ನೆಲಕ್ಕುರುಳಿದ. ಹಣೆಗೆ ಬಲವಾದ ಏಟು ಬಿದ್ದು ಅಲ್ಲಿಂದಲೂ ನೆತ್ತರು ಸುರಿಯತೊಡಗಿತು. ಆದರೂ ಹೇಗೋ ಸಾವರಿಸಿಕೊಂಡು ಮೇಲಕ್ಕೆದ್ದು ಮತ್ತೆ ಧಾವಿಸತೊಡಗಿದ.

ಇಳುಕಲು ಮುಗಿದು ಅವರು ರಸ್ತೆಯ ಬಳಿ ಬಂದಾಗ ಹಿಂದಿನಿಂದ ಆಗಲೂ ಗುಂಡು ಹಾರುತ್ತಿದ್ದುದು ಕೇಳಿಸುತ್ತಿತ್ತು. ಪೋಲೀಸರು ಬಹು ದೂರದಲ್ಲಿದ್ದುದು ಸ್ಪಷ್ಟವಾಗಿದ್ದಿತು. ಇನ್ನು ಗೋಕಾವಿಯ ಕಡೆಗೆ ಧಾವಿಸಬೇಕು....ಇಬ್ಬರಿಗೂ ವಿಪರೀತ ರಕ್ತಸ್ರಾವವಾಗಿತ್ತು—ಕ್ರಮವಾಗಿ ಶಕ್ತಿಯೂ ಕುಗ್ಗತೊಡಗಿದ್ದಿತು.

"ಬಹಳ ದಣಿವಾಯ್ತೇನು ಹೇಮಾ? ಮುಂದೆ ನಡಿಯೂದಕ್ಕಾಗು ತೈತ್ಯೋ ಇಲ್ಲೋ?" ಎಂದ ಶೇಖರ.

"ನೀ ಏನೂ ಚಿಂತೀ ಮಾಡಬೇಡಪ್ಪ. ಓಡು," ಎಂದು ಹೇಳಿ ಹೇಮಾ ಅವನ ಉತ್ತರದ ದಾರಿ ಕಾಯದೆ ತಾನೇ ಮುಂದುವರಿದಳು.

ಕೊಂಚ ದೂರ ಹೋದ ಬಳಿಕ ಎದುರಿಗೆ, ರಸ್ತೆಯ ಎಡಭಾಗದಲ್ಲಿ ಏನೋ ನಿಂತುಕೊಂಡಿದ್ದ ಹಾಗೆ ಕಾಣಿಸಿತು.

"ಯಾವದೋ ಮೋಟರು ಶೇಖರಣ್ಣ. ಓಡಬೇಡ, ನಿಲ್ಲು" ಎಂದು ಹೇಮಾ ಕೊಂಚ ಗಟ್ಟಿಯಾಗಿಯೆ ಕೂಗಿದಳು.

ಇಬ್ಬರೂ ಒಮ್ಮೆಲೆ ನಿಂತುಕೊಂಡರು. ಮುಂದೆ ಎತ್ತ ಹೊರಳಬೇಕೆಂಬುದು ಹೊಳೆಯಲಿಲ್ಲ. ತಮ್ಮನ್ನು ಬಂಧಿಸಲೆಂದೇ ಆ ಪೋಲೀಸರು ಲಾರಿಯೊಂದಿಗೆ ಅಲ್ಲಿಗೆ ಬಂದು ದೀಪವನ್ನಾರಿಸಿ ಕತ್ತಲೆಯಲ್ಲಿ ಕುಳಿತಿರಬೇಕೆಂದು ಅವರಿಗನ್ನಿಸಿತು. ಅಂತೂ ಇಷ್ಟು ಹೊತ್ತು ಕಷ್ಟಪಟ್ಟು, ಗುಡ್ಡ ಏರಿ ಇಳಿದು ಓಡಿಬಂದುದೆಲ್ಲ

ವ್ಯರ್ಥವಾಯಿತು ಹಾಗಾದರೆ! ಸತ್ತರೂ ಪೋಲೀಸರ ಕೈಗೆ ಸಿಗದೆ ಸಾಯಬೇಕು, ಸ್ವತಂತ್ರವಾಗಿಯೆ ಸಾಯಬೇಕು ಎಂದುಕೊಂಡದ್ದು ವ್ಯರ್ಥವಾಯಿತು ಹಾಗಾದರೆ!

"ಯಾರಪಾ ಅವರು ಶೇಖರಣ್ಣಾ ಅನ್ನುವವರು?" ಎಂಬ ಕೂಗಿನೊಂದಿಗೆ ಎದುರಿನಿಂದ ಟಾರ್ಚ್‌ನ ಬೆಳಕು ತೂರಿಬಂದಿತು. ಎದೆಯ ಮೇಲೆ ಉರುಳುವುದರಲ್ಲಿದ್ದ ಭಾರಿ ಬಂಡೆ ದೂರ ಸರಿದು ಹೋದಂತಾಯಿತು ಶೇಖರನಿಗೆ. ಪರಿಚಿತವಾದುದಾಗಿತ್ತು ಆ ಧ್ವನಿ. ಅದು ತಮ್ಮ ಹಸನ್ ಸಾಬಿಯದು, ಕಲ್ಲಾಪುರದ ಹಸನ್ ಸಾಬಿಯದು.

ಟಾರ್ಚ್‌ನ ಬೆಳಕಿನಲ್ಲಿ ಶೇಖರನನ್ನು ಕಂಡು ಹಸನ್ ಸಾಬಿ ಆತುರದಿಂದ ಅವನ ಬಳಿ ಬಂದ. ಆನಂದ ಆಶ್ಚರ್ಯಗಳಿಂದ ನಡುಗುವ ಧ್ವನಿಯಲ್ಲಿ "ಇಲ್ಲ್ಯಾಕ ಶೇಖರಣ್ಣಾ? ಇಂಥಾ ಹೊತ್ತಿನಾಗ? ಇದೇನು ನಿವ್ಮಿಬ್ಬರಿಗೂ ಘಾಯ ಆಗಿದಾವಲ್ಲ?" ಎಂದ.

ನಡೆದುದೆಲ್ಲವನ್ನೂ ಸ್ವಲ್ಪದರಲ್ಲಿಯೆ ವಿವರಿಸಿ ಹೇಳಿದಮೇಲೆ ಶೇಖರ "ನೀನ್ಯಾಕಪಾ ಇಲ್ಲಿ? ಯಾರದು ಆ ಲಾರಿ?" ಎಂದ.

"ನಮ್ಮದs. ನಮ್ಮದs ಇದ್ದ ಹಾಂಗs. ಗೌಡರ ಚೀಲಾ ಹಾಕ್ಕೊಂಡು ಹೊಂಟೇವಿ. ನಡೀರಿ. ಇಬ್ಬರೂ ಹತ್ತಿ ಮಲಗಿಕೊಂಡುಬಿಡ್ರಿ ವ್ಯಾಲ. ಪೋಲೀಸರು ಅದಾರೇನು ಹಿಂದ?"

"ಹೌದು. ಗುಡ್ಡಾ ಇಳೀತಿರಬಹುದು ಅವರು."

ಸಾಬಿಯ ಸಹಾಯದಿಂದ ಲಾರಿಯನ್ನೇರಿ ಇಬ್ಬರೂ ಚೀಲಗಳ ಮೇಲೆ ಮಲಗಿಕೊಂಡರು. ಟಾರ್ಚ್‌ನ ಬೆಳಕಿನಲ್ಲಿ ಗಾಯಗಳಿಗೆಲ್ಲ ಬಟ್ಟೆ ಕಟ್ಟಿದ್ದಾಯಿತು. ಲಾರಿ ಓಡತೊಡಗಿತು.

"ಈಗ ಸ್ವಲ್ಪ ಆರಾಮಾಯ್ತೇನು ಶೇಖರಣ್ಣ?"

"ಆಯ್ತಪ್ಪ. ನನ್ನದೇನೂ ದೊಡ್ಡದಲ್ಲ. ಹೇಮಕ್ಕಂದs ಚಿಂತಿ ನನಗ. ಆಕೆಯ ತೋಳಿಗೇ ಬಡದೈತೆಲ್ಲ ಗುಂಡು...."

ಅತೀವ ವೇದನೆಯಿಂದಲೂ, ರಕ್ತಸ್ರಾವದಿಂದ ತಲೆದೋರಿದ ನಿಶ್ಶಕ್ತಿಯಿಂದಲೂ ನರಳುತ್ತ ಹೇಮಾ ಬಿದ್ದುಕೊಂಡಿದ್ದಳು. ಕಬ್ಬಿಣದ ದಬ್ಬಣದಿಂದ ಯಾರೋ ತನ್ನ ಶರೀರದಲ್ಲೆಲ್ಲ ಚುಚ್ಚುತ್ತಿದ್ದ ಹಾಗನ್ನಿಸುತ್ತಿತ್ತು

ಆಕೆಗೆ. ಗುಡ್ಡ ಏರಿ ಇಳಿದು ಧಾವಿಸಿ ಬಂದುದರ ಆಯಾಸ ಬೇರೆ. ಚೀಲಗಳ ಮೇಲೊರಗಿಕೊಂಡಿದ್ದ ಹಾಗೆ, ಮೇಲ್ಗಡೆ ಆಗಸದಲ್ಲಿ ಕಳಾಹೀನವಾಗಿ ಮಿನುಗುತಿದ್ದ ತಾರೆಗಳನ್ನು ಶೂನ್ಯ ದೃಷ್ಟಿಯಿಂದ ನಿರುಕಿಸುತ್ತಿದ್ದಳು.

"ಹೇಮಾ, ಬಹಳ ನೋವೇನೇ?" ಎಂದ ಶೇಖರ.

ಅವನ ಪ್ರಶ್ನೆಗೆ ಉತ್ತರವೀಯುವ ಸ್ಥಿತಿಯಲ್ಲಿರಲಿಲ್ಲ ಹೇಮಾ. ನಿಧಾನವಾಗಿ ಅವಳ ಚೈತನ್ಯವೂ ಕುಗ್ಗುತ್ತಿದ್ದಿತು. ಮೂರ್ಛೆಯು ಕೈ ಮೆಲ್ಲಮೆಲ್ಲನೆ ಅವಳ ಮುಖದ ಮೇಲೆ ಆಡಿ ಮೈಮರೆಸುತ್ತಿದ್ದ ಹಾಗಿದ್ದಿತು.

"ಹೇಮಾ, ಹೇಮಕ್ಕಾ...." ಎಂದ ಶೇಖರ, ಗಾಬರಿಯಿಂದ.

ಗಾವುದ ಗಾವುದಗಳಾಚೆಯಿಂದ ಬಂದ ಧ್ವನಿಯ ಹಾಗೆ ಆ ಕೂಗು ಭಾಸವಾಯಿತು ಹೇಮಾಗೆ. ಮಾತನಾಡಲು ನಾಲಗೆ ಹೊರಳಿಸಿದಳು—ಶಬ್ದ ಹೊರಡಲಿಲ್ಲ!

ಶೇಖರನ ಎದೆ ಡವಡವನೆ ಹೊಡೆದುಕೊಳ್ಳತೊಡಗಿತು. ಸಂಗಣ್ಣ ಹೋದ, ಬಸವಣ್ಣೆಪ್ಪ ಹೋದ; ಅವರಿಬ್ಬರನ್ನು ಹಿಂಬಾಲಿಸಿಕೊಂಡು ಹೋಗಿ ಬಿಡುವಳೇ ಹೇಮಾ ಕೂಡ! ಅವನಿಗೆ ತನ್ನ ನೋವೆಲ್ಲವೂ ಮರೆತುಹೋಯಿತು ಅವಳ ತಲೆಗೂದಲಿನ ಮೇಲೆ ಅಕ್ಕರೆಯಿಂದ ಕೈ ಆಡಿಸುತ್ತ ಕೂಗಿ ಕರೆದ: "ಹೇಮಾ, ಮಾತಾಡು ಹೇಮಾ. ಎಚ್ಚರಿಲ್ಲವೇನಕ್ಕಾ?"

ಏರು ಇಳುಕಲುಗಳನ್ನು ತುಳಿಯುತ್ತ ಲಾರಿ ಭರದಿಂದ ಓಡುತ್ತಿತ್ತು. ಅದರೊಂದಿಗೆ ಸೃಷ್ಟಿಯೆಲ್ಲವೂ ತನ್ನಿಂದ ದೂರ ದೂರ ಓಡುತ್ತಿದ್ದ ಹಾಗೆ ತೋರುತ್ತಿತ್ತು, ಹೇಮಾಗೆ. ಅದೂ ಓಡುತ್ತಿದೆ ದೂರ ದೂರ; ತಾನೂ ಓಡುತ್ತಿದ್ದಾಳೆ ದೂರ ದೂರ! ದೂರ....ಅಲ್ಲಿ.... ಆ ಆಕಾಶದಲ್ಲಿ....ಲಕ್ಷಾವಧಿ ತಾರೆಗಳ ಬಳಗದಲ್ಲಿ ಕುಳಿತುಕೊಂಡು ತನ್ನನೆ ಕೈಮಾಡಿ ಕರೆಯುತ್ತಿದ್ದಾಳೆ ತನ್ನ ತಾಯಿ—ಚಿಕ್ಕಂದಿನಲ್ಲಿಯೆ ತನ್ನನ್ನು ಪರದೇಶಿಯನ್ನಾಗಿ ಮಾಡಿ ಹೋದ ತಾಯಿ....ಅದೋ....ಅಲ್ಲಿ....ಅವಳ ಸನಿಯದಲ್ಲೇ ಕುಲುಕುಲು ನಗುತ್ತ ಕುಳಿತಿದಾನೆ ವಿಶ್ವನಾಥ....ತನ್ನ ಪ್ರೀತಿಯ ವಿಶ್ವನಾಥ....ಹುತಾತ್ಮ ವಿಶ್ವನಾಥ.... ಅವರೆಡೆಗೇ ಓಡುತ್ತ ಹೊರಟಿದಾಳೆ ತಾನು!

"ಈಕೆಗೆ ಎಚ್ಚರದಪ್ಪಿದಾಂಗ ಕಾಣಿಸ್ತೈತಿ. ಗೋಕಾವಿಗೆ ಎಷ್ಟು ಗಂಟೇಕ್ಕ ಹೋಗಬಹುದು ನಾವು ಹಸನ್ ಸಾಬಿ?" ಎಂದ ಶೇಖರ.

"ಒಂದು ತಾಸಾದರೂ ಬೇಕಲ್ಲ ಶೇಖರಣ್ಣ. ಆದರ ಅಲ್ಲಿಗೆ ಹೋಗಿ ಹ್ಯಾಂಗ ಮಾಡಬೇಕಂತ ಮಾಡಿದ್ದೀ? ಅಲ್ಲೂ ಪೋಲೀಸರು ಇರುವವರೇ ಅಲ್ಲ ?"

"ಇದ್ದರೂ ಚಿಂತಿಲ್ಲ. ನಮ್ಮ ಮಿತ್ರ ಡಾಕ್ಟರರೊಬ್ಬರಿದಾರ ಅಲ್ಲಿ. ಗುಪ್ತವಾಗಿ ಅವರ ಹತ್ತಿರ ಹೋದರ ಸಾಕು. ಈಕೇನ್ನ ನೆಟ್ಟಗೆ ಮಾಡ ಬಹುದು ಅವರು. ಜೀವ ಉಳಿಸಬಹುದು. ಆದರ ಅಲ್ಲಿಯು ತನಕ ಬದುಕಿರ ತಾಳೋ ಇಲ್ಲೋ ಅದ ಎದೆಗುದಿ ನನಗ. ಪಾಪ, ಮೊದಲ ಕೋಮಲ ಶರೀರ. ಅದರಾಗ ತೋಳಿಗೆ ಬಡಿದೈತಿ ಗುಂಡು. ಮೈಯಾಗಿನ ರಕ್ತ ಎಲ್ಲಾ ಹರಿದುಹೋಗೈತಿ......ಸಾಬಣ್ಣಾ......ಹ್ಯಾಂಗ ಮಾಡೋದು ಇನ್ನು ?" ಎಂದು ಶೇಖರ ಹಸುಮಗುವಿನ ಹಾಗೆ ಬಿಕ್ಕತೊಡಗಿದ. ಅವನಿಗೆ ತಿಳಿಯದಂತೆಯೆ ಅವನ ಕಣ್ಣಲ್ಲಿ ನೀರೂರಿತ್ತು. ಒಂದೆರಡು ಹನಿಗಳೂ ಉರುಳಿ ಹೇಮಾಳ ಮುಖದ ಮೇಲೆ ಸುರಿದುವು. ಆಕೆಗೆ ಕೊಂಚ ಎಚ್ಚರ ಬಂದಂತಾಯಿತು.

"ಅಳ್ತೀಯೇನಪ್ಪಾ ಶೇಖರಣ್ಣ ?" ಎಂದಳು ಆಕೆ, ತೀರ ಮೆಲ್ಲಗಿನ ದನಿಯಲ್ಲಿ.

ಎಡಗೈಯಿಂದ ಕಂಬನಿಗಳನ್ನೊರೆಸಿಕೊಂಡು ಶೇಖರ ಗದಗದ ನಡುಗುವ ಧ್ವನಿಯಲ್ಲಿ ನುಡಿದ: "ಇಲ್ಲ, ಹೇಮಾ. ಅಳೂದಿಲ್ಲ. ನೀ ನೆಟ್ಟಗಾದರ ನಾನ್ಯಾಕ ಅಳಬೇಕು ?"

"ನಾ ನೆಟ್ಟಗಾಗೂದು! ನೆಟ್ಟಗ? ಛೆ! ಛೆ! ನಾನೇನೂ ಉಳಿಯುವ ಹಾಗಿಲ್ಲ ಅಣ್ಣ!"

"ಹಾಗೆಲ್ಲ ಮಾತನಾಡಬ್ಯಾಡ ಹೇಮಕ್ಕ. ಈಗ ಗೋಕಾವಿಗೆ ಹೋಗತೀವಿ. ಅಲ್ಲೊಬ್ಬ ನಮ್ಮ ಮಿತ್ರ ಡಾಕ್ಟರ್ ಇದಾರ. ಅವರು ನಿನ್ನ ತೋಳಿನಾಗಿನ ಗುಂಡು ತೆಗೆದು ನೆಟ್ಟಗ ಮಾಡತಾರ. ನನಗೂ ನೆಟ್ಟಗಾದೀತು. ಸ್ವಲ್ಪ ಶಕ್ತಿ ಬರುವ ತನಕಾ ಅಲ್ಲಿಷ್ಟು ಮತ್ತೆ ಗುಂಪು ಕೂಡಿಸೋಣ. ಮತ್ತೆ ಕೆಲಸ ಸುರು ಮಾಡೋಣ, ಇನ್ನೂ ಮುಗೀಲಿಲ್ಲ ನಮ್ಮ ಯುದ್ಧ ಹೇಮಾ! ಇನ್ನೂ ಮುಗೀಲಿಲ್ಲ...."

"ಇನ್ನೂ ಮುಗೀಲಿಲ್ಲ ನಮ್ಮ ಯುದ್ಧ! ಇನ್ನೂ ಮುಗೀಲಿಲ್ಲ! ನಿಜ ಶೇಖರಣ್ಣ, ನೀ ಹೇಳೂದು! ಇನ್ನೂ ಮುಗೀಲಿಲ್ಲ. ಎಂಥ ಧೈರ್ಯದ

ವನು ನೀನು ಅಣ್ಣ! ಇಂಥಾ ಪ್ರಸಂಗದೊಳಗೂ ಎಂಥಾ ಉತ್ಸಾಹ ನಿನ್ನದು! ಹೌದು....ಹೌದು....ನೀ ಹೇಳುವ ಹಾಗೆ ಮತ್ತೆ ಗುಂಪು ಕೂಡಿಸೋಣ. ಮತ್ತೆ ಕೆಲಸ ಮಾಡೋಣ. ಇದೆಂಥಾ ಗುಂಡು ಇದು! ಆ ಡಾಕ್ಟರು ನಂಬಿಕೆಯವರು ಹೌದೇನಣ್ಣ" ಅವರು ನೆಟ್ಟಗ ಮಾಡಬಹುದೇನು ನನ್ನ? ನಿನ್ನ?"

"ಅವರೂ ನಮ್ಮವರ ಹೇಮಾ. ನನ್ನ ಒಡಹುಟ್ಟಿದ ಬಂಧು ಇದ್ದಾಂಗ ಇದಾರ. ಎರಡು ದಿನದಾಗs ನೀ ನೆಟ್ಟಗಾಗಬಹುದು. ಹೇಮಾ, ಈಗ ಹ್ಯಾಂಗೈತಿ ನೋವು? ಸ್ವಲ್ಪ ಕಡಿಮೆಯಾಗೈತೇನು?" ಎಂದು ಆನಂದದಿಂದ ನುಡಿದ ಶೇಖರ.

"ಹೌದು ಅಣ್ಣ. ಕಡಿಮೆಯಾಗಿದೆ. ಏನೂ ನೋವೆನ್ನಿಸೂದಿಲ್ಲ ಈಗ. ಎಲ್ಲಾ ಹೋಗಿಬಿಟ್ಟಂತೆ ಅನಿಸುತದ" ಎಂದು ನುಡಿದ ಹೇಮಾ ಸಾಬಿಯ ಕಡೆಗೆ ಕತ್ತು ತಿರುಗಿಸಿ—"ಊರಾಗ ಶೇಖರಣ್ಣನ ಮನೆಯವರು ನೆಟ್ಟಗಿದಾರೇನಪ್ಪಾ?" ಎಂದು ಕೇಳಿದಳು.

ಅವಳು ಮಾತನಾಡತೊಡಗಿದುದನ್ನು ಕಂಡು ಆನಂದಿತನಾಗಿದ್ದ ಸಾಬಿ ಆ ಪ್ರಶ್ನೆ ಕಿವಿಗೆ ಬೀಳುತ್ತಲೂ ಮತ್ತೆ ಜೋಲು ಮುಖ ಮಾಡಿದ. "ಏನು ಹೇಳೂದವ್ವಾ! ಬರಬಾರದ ಬವಣೆ ಬಂದೈತಿ ಶೇಕ್ರಣ್ಣನ ಮನೆಯವರಿಗೆ! ನಿನ್ನೆ ಅವರ ಮನಿ ಜಪ್ತಿ ಮಾಡಿದರವ್ವಾ ಸರಕಾರದವರು!"

ಶೇಖರ ಹೇಮಾ ಇಬ್ಬರಿಗೂ ಅದು ಹೊಸ ಸುದ್ದಿಯಾಗಿದ್ದಿತು. ಇಬ್ಬರೂ ಏಕ ಕಾಲಕ್ಕೆ ಕೇಳಿದರು: "ಜಪ್ತಿ! ಯಾಕ?"

"ಯಾಕ ಅಂತ ಕೇಳುವವರು ಯಾರು ಅವರನ್ನ? ಅವರು ನಡೆಸಿದ್ದೇ ಕಾರುಭಾರ ಅಲ್ಲs ಈಗ? ಪೋಲೀಸರ ಕೈಯಾಗ ನೀವ್ಯಾರೂ ಸಿಗದಿದ್ದಕ್ಕ ನಿಮ್ಮ ಮನಿಯವರಿಗೆ ತ್ರಾಸ ಕೊಟ್ಟಾದರೂ ಕೆಲಸ ಆದೀತು ಅಂತ ಮಾಡಿರಬೇಕು, ಮಕ್ಕಳು. ಆ ಕುಲಕರ್ಣಿ ಬ್ಯಾರೆ ಅವರ ಕಡೆಗಾಗಿದಾನ ಮೊದಲಿಂದs. ನಿನ್ನೆ ಬಂದು, ನಿಮ್ಮ ಅಣ್ಣನ್ನ ಬೆದರಿಸಿ, ಬಡಿದು ಕೇಳಿದರು—ನೀ ಎಲ್ಲಿ ಇದ್ದೀ ಅನ್ನೂದನ್ನ ಹೇಳು ಅಂತ. ಅವ ಬಾಯಿ ಬಿಚ್ಲಿಲ್ಲ. ದನಾ ಕರಾ ಎಲ್ಲಾ ಜಪ್ತಿ ಮಾಡಿಕೊಂಡು ಲಿಂಗಣ್ಣನನ್ನೂ ಹಿಡಿಮಕೊಂಡು ಹೋದರು...."

"ಅಣ್ಣನ್ನ ಯಾಕ ಹಿಡಿದರಪ್ಪಾ?"

" ನೀ ಸಿಗಲಿಲ್ಲ ಅಂತ ಹೊಟ್ಟಿ ಉರಿದು ಅವನ್ನ ಒಯ್ದರು. ಪಾಪ.... ನಿಮ್ಮನ್ನಗ ತಲೀ ಮ್ಯಾಲ ಗುಡ್ಡ ಕಡಿದು ಬಿದ್ದಾಂಗ ಆಗೈತಿ."

" ಈಗ ಹ್ಯಾಂಗ ಇದಾರ ಅವರೆಲ್ಲಾ ?"

" ಪಾಪ....ಬಹಳ ತ್ರಾಸದಾಗ ಆದಾರ ಶೇಕರಣ್ಣ. ಮನ್ಯಾಗ ಕಾಳು ಗೀಳು ಏನೂ ಇಲ್ಲ. ದುಡಿಯುವ ಗಂಡುಮಗನನ್ನ ಹಿಡಕೊಂಡು ಹೋದರು. ಹೆಂಗಸರು ಮಕ್ಕಳು ಏನು ಮಾಡಬೇಕು ಇನ್ನು ?"

" ಊಟಕ್ಕ ತ್ರಾಸ ಆಗೈತೇನು ?"

" ಅದೂ ಬಹಳ ದಿನದಿಂದ ಇತ್ತು. ಲಿಂಗಣ್ಣನ್ನ ಒಯ್ದ ಮ್ಯಾಲ ಊರವ ರೆಲ್ಲಾ ಕೂಡಿ ಸ್ವಲ್ಪ ಕಾಳು ಕೊಟ್ಟಾರ ನಿಮ್ಮ ಮನಿಗೆ. ಅದರದೇನೂ ತ್ರಾಸ ಇಲ್ಲ ಅನ್ನು. ನಾವೆಲ್ಲಾ ಇರುವತನಕ ಹ್ಯಾಗೋ ಮಾಡತೀವಿ. ಆದರ ಈಗ ಎಲ್ಲಾ ಕಡೆಗೂ ಕಾಳಿಲ್ಲ. ಎಲ್ಲರೆಗೂ ತ್ರಾಸನೇ...."

ಚೀಲಗಳ ಮೇಲೊರಗಿದ್ದ ಹಾಗೆ ಶೇಖರನ ಬಗೆಗಣ್ಣಿನೆದುರಿಗೆ ಕಲ್ಲಾಪುರ ವೆಲ್ಲ ಬಂದು ನಿಂತಂತಾಯಿತು. ತನ್ನ ಮನೆ, ತನ್ನ ತಾಯಿ, ಅಣ್ಣ ಲಿಂಗಣ್ಣ, ಅತ್ತಿಗೆ, ಅವಳ ಪುಟ್ಟ ಪುಟ್ಟ ಮಕ್ಕಳು—ಎಲ್ಲರೂ ವಿಷಣ್ಣವದನರಾಗಿ ಮೊಗ ದೋರಿದಂತಾಯಿತು. ದನಕರುಗಳು ಹೋದವು—ಅಣ್ಣನೂ ಜೈಲಿಗೆ ನಡೆದ.... ಇನ್ನು ಮನೆಯವರ ಗತಿ? ಆ ಎಳೆ ಮಕ್ಕಳ ಗತಿ ? ಅತ್ತಿಗೆಗೆ ಬೇರೆ ಕಾಹಿಲೆ. ಪೂರಾ ನಿಶ್ಶಕ್ತಿ. ತನ್ನ ಮುದುಕಿ ತಾಯಿಯೊಬ್ಬಳ ಒಂಟಿ ತಲೆಯ ಮೇಲೇ ಸಂಸಾರದ ಭಾರವೆಲ್ಲ ಬಿದ್ದುಬಿಟ್ಟಿತೇ ? ಮನೆಯವರ ಹೊಟ್ಟೆಗೆಲ್ಲ ಹೇಗೆ ಹಾಕ ಬೇಕು ಆಕೆ ? ಎಲ್ಲಿಂದ ತಂದುಹಾಕಬೇಕು ? ಶಕ್ತಿಯಾದರೂ ಎಲ್ಲಿದೆ ಅವಳ ಶರೀರದಲ್ಲಿ ?

" ಅವ್ವ ಬಹಳ ಚಿಂತೀ ಮಾಡ್ತಾಳೇನಪ್ಪ ?" ಎಂದು ಕೇಳಿದ.

" ಚಿಂತೆ ಏನು ಆ ತಾಯಿಗೆ ಹೊಸದೇನಪ್ಪ, ಶೇಕರಣ್ಣ ? ಇಂಥಾವು ಎಷ್ಟೋ ಕಾಡುವ ಕಾಲ ಬಂದಾವ ಆಕೆಗೆ. ಯಾವುದಕ್ಕೂ ಅಂಜಿ ಕೈಕಾಲು ಬಿಡುವಾಕೆ ಅಲ್ಲ ನಿಮ್ಮ ಅವ್ವ. ಆಕೆಯ ಧೈರ್ಯ ನೋಡಿದರ ಗಂಡಸರಾದ ನಮಗೂ ಬೆರಗಾಗುತ್ತೈತಿ. ಲಿಂಗಣ್ಣನ್ನ ಪೋಲೀಸರು ಹಿಡಿದೊಯ್ಯುತಿರಬೇಕಾದರ ಒಮ್ಮೆಯಾದರೂ ಅತ್ತಳು ಅಂತೀಯೇನು ? ' ಅವನ್ನ ಒಯ್ಯಬ್ಯಾಡಿರಪ್ಪ ' ಅಂತ ಪೋಲೀಸರನ್ನ ಬೇಡಿದಳಂತೀಯೇನು ? ' ಇನ್ನ್ಯಾಂಗ ಮಾಡಲಿ ' ಅಂತ

ಆಳುತ್ತ ಕೂತಳು ಅಂತೀಯೇನು? ಇಲ್ಲ. ಏನೂ ಇಲ್ಲಪ್ಪ. 'ಒಯ್ದರ ಒಯ್ಯಲಿ ಅವನನ್ನು. ಒಬ್ಬನಂತೂ ಕಾಂಗರೆಸಿಗೆ ಮುಡುಪಾಗಿ ಹೋಗಿದಾನ. ಇವನೂ ಹೋದರ ಹೋಗಲಿ. ನನ್ನ ತೋಳಿನಾಗ ಶಕ್ತಿ ಇರೂತನಕ ಯಾರಿಗೂ ಅಂಜುವಾಕೆ ಅಲ್ಲ ನಾನು, ಕೂಲೀ ಕುಂಬಳೀ ಮಾಡಿ ಇವರೆಲ್ಲರ ಹೊಟ್ಟೆಗೆ ಹಾಕ್ತೀನಿ. ಇಲ್ಲಿ ಕೂಲಿ ಸಿಗವಿದ್ದರ ಗೋಕಾವಿ ಗಿರಣಿಗೆ ಹೋಗಿ ದುಡೀತೀನಿ. ಆ ಕೆಂಪು ಮಾರೀ ಸರಕಾರಕ್ಕ ಮಾತ್ರ ಎಂದೆಂದೂ ಅಂಜುವದಿಲ್ಲ' ಅಂದಳು. ಕೂಡಿದ ಜನರೆಲ್ಲಾ ಬೊಟ್ಟು ಕಚ್ಚಿಕೊಂಡರಪ್ಪಾ. ಎಂಥಾ ಧೈರ್ಯ ನಿಮ್ಮ ಅವ್ವಂದು! ಅಂಥಾ ತಾಯಿಯ ಹೊಟ್ಟೆಯೊಳಗ ಹುಟ್ಟಿದ್ದಕ್ಕ ನೀ ಇಂಥಾ ಶೂರ ಆಗಿರಬೇಕಪ್ಪ. ಅಂಥ ಅವ್ವ ಎಲ್ಲರಿಗೂ ಸಿಗೂದಿಲ್ಲ. ಅದಕ್ಕೂ ಪುಣ್ಯಾ ಮಾಡಿ ಬರಬೇಕು ಪುಣ್ಯಾ!" ಎಂದು ಹೇಳುವಾಗ ಅಭಿಮಾನದಿಂದಲೂ ಮೆಚ್ಚುಗೆಯಿಂದಲೂ ಸಾಬಿಯ ಸ್ವರ ಕಂಪಿಸುತ್ತಿತ್ತು.

ಶೇಖರನಿಗೂ ಅಭಿಮಾನದಿಂದ ಎದೆ ತುಂಬಿಬಂದಿದ್ದಿತು. ಆತ ಹೇಮಾವತಿಯ ಕಡೆಗೆ ತಿರುಗಿ—"ಈಗ ಹ್ಯಾಂಗ್ಹೈತಿ ಹೇಮುಕ್ಕಾ?" ಎಂದ.

ಅವನ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ.

ಶೇಖರನಿಗೆ ಮತ್ತೆ ಗಾಬರಿಯಾಯಿತು! ಅವಳ ಹಣೆಯನ್ನೇ ನೇವರಿಸುತ್ತ ಪುನಃ ಕೂಗಿದ: "ಹೇಮಾ!"

ಉತ್ತರ ಬರಲಿಲ್ಲ.

ದಿಗಿಲುಗೊಂಡು ಶೇಖರ ಮೇಲಕ್ಕೆದ್ದು ಕುಳಿತ. ಹಸನ್‌ಸಾಬಿಯು ಕೈಯಲ್ಲಿದ್ದ ಟಾರ್ಚ್‌ನಿಂದ ಬೆಳಕು ಬೀರಿ ಅವಳ ಮುಖವನ್ನು ನಿಟ್ಟಿಸಿ ನೋಡಿದ. ಕಣ್ಣುಗಳೆರಡೂ ಮುಚ್ಚಿದ್ದುವು; ತುಟಿಗಳೆರಡೂ ತೆರೆದಿದ್ದುವು.

"ಹೇಮಾ, ಹೇಮುಕ್ಕಾ!" ಎಂದು ಆಕ್ರೋಶ ಮಾಡುತ್ತ ಆತ ಅವಳ ಶರೀರವನ್ನು ಗಟ್ಟಿಯಾಗಿ ಅಲುಗಾಡಿಸಿದ. ಅವಸರವಸರವಾಗಿ ಅವಳ ಕೈಗಳನ್ನೂ ಮೈಯನ್ನೂ ಮುಟ್ಟಿ ನೋಡಿದ. ದೇಹ ತಣ್ಣಗಾಗಿದ್ದಿತು. ಹಸನ್‌ಸಾಬಿಯ ಮಾತು ನಡೆದಾಗಲೆ ಆಕೆ ಕೊನೆಯುಸಿರು ಹಾಕಿದ್ದಳೋ ಏನೊ. ಸದ್ದು ಮಾಡದೆ ಹೊರಟುಹೋಗಿತ್ತೇನೋ, ಅವಳ ಪ್ರಾಣಪಕ್ಷಿ!

"ಹೇಮಾ, ಹೇಮುಕ್ಕಾ....ಹೋಗಿಬಿಟ್ಟಿಯಾ ಹೇಮಾ, ನನ್ನ ತಂಗೀ!...." ಎನ್ನುತ್ತಾ ಶೇಖರ ಅವಳ ಕಳೇಬರದ ಮೇಲೆ ಹಣೆ ಚೆಲ್ಲಿದ. ರಕ್ತಸ್ರಾವದಿಂದಲೂ

ಮಾರ್ಗಾಯಾಸದಿಂದಲೂ ಉಂಟಾಗಿದ್ದ ನಿಶ್ಯಕ್ತಿಯನ್ನು ಆತ ಇದುವರೆಗೆ ಹೇಗೋ ತಡೆಹಿಡಿದಿದ್ದ. ಆದರೆ ಹೇಮಾವತಿಯ ಮೃತ್ಯುವಿನೊಂದಿಗೆ ಆ ಹಿಡಿತವೂ ಮಾಯವಾಯಿತು. ಅವನ ಕಣ್ಣುಗಳೆದುರಿಗೆ ಗಾಢಾಂಧಕಾರ ಕವಿಯಿತು. "ಹೇಮಾ....ನನ್ನ ತಂಗೀ...." ಎಂದು ರೋಧಿಸುತ್ತ ಆತ ಅವಳ ಶವದ ಮೇಲೆ ಬಿದ್ದುಕೊಂಡುಬಿಟ್ಟ.

ಸ್ವಲ್ಪ ಹೊತ್ತು ಮೂಕವಾಗಿ ಕುಳಿತಿದ್ದ ಹಸನ್‌ಸಾಬಿ ಶೇಖರನನ್ನು ಸಂತವಿಸಲೆಂದು ಅವನ ಬೆನ್ನು ತಟ್ಟುತ್ತಾ "ಏಳು ಮ್ಯಾಲಕ್ಕ ಶೇಖರಣ್ಣ.... ಹೋದವಳು ಹೋದಳು.....ಏಳು.....ಹೀಂಗ ಹುಡುಗರ ಹಾಂಗ ಮಾಡಿದರ ಹ್ಯಾಂಗ ?" ಎಂದ.

ಶೇಖರ ಏಳಲೂ ಇಲ್ಲ ; ಅವನಿಂದ ಮಾತೂ ಹೊರಡಲಿಲ್ಲ.

"ಶೇಖರಣ್ಣಾ...." ಹಸನ್‌ಸಾಬಿ ಗಾಬರಿಯಿಂದ ಕೂಗಿಕೊಂಡ.

ಆದರೂ ಶೇಖರ ಮೇಲಕ್ಕೇಳಲಿಲ್ಲ.

ಹಸನ್‌ಸಾಬಿಗೆ ಕೈಕಾಲುಗಳೇ ಹೋದಹಾಗಾಯಿತು. ಆತ ಡ್ರೈವರನನ್ನು ಕೂಗಿ ಲಾರಿ ನಿಲ್ಲಿಸಿದ. ಇಬ್ಬರೂ ಸೇರಿ ಶೇಖರನನ್ನು ಪರೀಕ್ಷಿಸಿದರು. ಆತ ನಿಶ್ಚೇಷ್ಟಿತನಾಗಿ ಬಿದ್ದುಕೊಂಡಿದ್ದ. ಶ್ವಾಸೋಚ್ಛ್ವಾಸ ನಿಂತುಹೋಗಿರಲಿಲ್ಲ ವಾದರೂ ಸಮರ್ಪಕವಾದ ರೀತಿಯಲ್ಲೂ ನಡೆಯುತ್ತಿರಲಿಲ್ಲ. ಕಾಲುಗಳೂ ತಣ್ಣಗಾಗುತ್ತಿದ್ದುವು.

"ಲಗೂ ಲಗೂ ಗಾಡಿ ಹೊಡೆದು ಗೋಕಾವಿಗೆ ಹೋಗೋಣ, ಸಾಬಣ್ಣಾ, ಇವಗ ನೆಟ್ಟಗಾದರೂ ಆದೀತು!" ಎಂದು ಹೇಳಿ ಡ್ರೈವರ್ ಮತ್ತೆ ತನ್ನ ಸ್ಥಾನ ದಲ್ಲಿ ಕುಳಿತು ಲಾರಿಯನ್ನೋಡಿಸತೊಡಗಿದ.

ಶೇಖರನ ತಲೆಯನ್ನು ತೊಡೆಯಮೇಲಿರಿಸಿಕೊಂಡಿದ್ದ ಹಾಗೇ ಹಸನ್ ಸಾಬಿ ಮೊಳಕಾಲುಗಳನ್ನು ಮಡಿಚಿಕೊಂಡು ನಮಾಜಿನ ಭಂಗಿಯಲ್ಲಿ ಕುಳಿತು, ಹೃದಯವನ್ನೇ ಹಿರಿದು ಈಚೆಗೆ ಎಳೆದು ತಂದಂಥ ಧ್ವನಿಯಲ್ಲಿ ಪ್ರಾರ್ಥನೆ ಮಾಡತೊಡಗಿದ :

"ಅಲ್ಲಾ, ದೇವರೇ, ಇವನ ಪ್ರಾಣ ಉಳಿಸು, ನನ್ನ ತಂದೇ! ನನ ಜೀವವನ್ನಾದರೂ ತಕ್ಕೊಂಡು ಇವನ ಪ್ರಾಣ ಉಳಿಸು! ತಂದೇ!"

ಆತನ ಪ್ರಾರ್ಥನೆ ಇನ್ನೂ ನಡೆದಿದ್ದ ಹಾಗೇ ಶೇಖರನ ಶರೀರ ಚಲನ ವಲನ ಮಾಡಿದಂತಾಯಿತು, ಸಾಬಿಯ ತೊಡೆಯ ಮೇಲಿದ್ದ ಆತನ ತಲೆ ಮೆಲ್ಲನೆ ಉರುಳಿ ಕೆಳಕ್ಕೆ ಬಿತ್ತು.

ಸುತ್ತಲಿನ ಸೃಷ್ಟಿಯ ಮೂಕ ಹೃದಯವೂ ಬಿರಿಯುವಂಥ ಆರ್ತಸ್ವರದಲ್ಲಿ ಹಸನ್‌ಸಾಬಿ ಪ್ರಾರ್ಥಿಸುತ್ತಿದ್ದ :

"ಯಾ ಅಲ್ಲಾऽऽऽ! ಯಾ ಖುದಾऽऽ!"

